ಶ್ರೀವೀತರಾಗಾಯ ನಮಃ।

ಕರ್ಣಾಟಕ ಜೈನ ಕಾವ್ಯಮಾಲಾ-ಪುಷ್ಪ ೧.

ಮಂಗರಸ ಕವಿವಿರಚಿತ

# ಸಮ್ಯಕ್ತ್ವಕೌಮುದಿ

ಎಂಬ ಶೃಂಗಾರಿಕ

ಷಟ್ಪದಿ ಕಾವ್ಯವು.



ಪ್ರಕಾಶಕ,

**ದೇ. ಫ. ಚೌಗುಲೆ**

ಮ್ಯಾನೇಜರ ಶ್ರೀಮಹಾವೀರ ಪ್ರೆಸ್ ಬೆಳಗಾವಿ.

ಶ್ರೀಮಹಾವೀರ ಶಕ ೨೪೪೯.] [ಶಾಲಿವಾಹನ ಶಕ ೧೮೪೪.

ಮಾಘಮಾಸ.

ಸನ್ ೧೯೨೩ ಜಾನೇವಾರಿ.



ಬೆಲೆ ೧-೧೨-೦.



# ಪೀಠಿಕೆ

“ **ಸಮ್ಯಕ್ತ್ವ-ಕೌಮುದಿ** ” ಎಂಬ ಹೆಸರಿನ ಮೂಲಗ್ರಂಥವು ಸಂಸ್ಕೃತದಲ್ಲಿ ರಚಿಸಲ್ಪಟ್ಟಿದ್ದು ಅದು ಈಗ ಎಷ್ಟೋ ದಿನಗಳ ಹಿಂದೆಯೇ ಮರಾಠಿ, ಹಿಂದೀಭಾಷೆಯ ಟೀಕೆಗಳೊಂದಿಗೆ ಪ್ರಕಟವಾಗಿದೆ. ಈ ಮೂಲ ಗ್ರಂಥಾಧಾರದಿಂದಲೇ ‘ **ಮಂಗರಸ** ’ ನೆಂಬ ಪ್ರಸಿದ್ಧ ಕವಿಯು ( ಶಕವರ್ಷ ೧೪೩೧ ) ಇಸವಿ ಸನ್ನ ೧೫೦೮ ರಲ್ಲಿ ಕರ್ಣಾಟಕ ಬಂಧು-ಭಗಿನಿಯರ ಹಿತಕ್ಕೋಸ್ಕರವಾಗಿ ಕನ್ನಡ ನುಡಿಯಲ್ಲಿ ಸುಭಗವಾದ ವಾರ್ಧಿಕಷಟ್ಪದಿರೂಪದಿಂದ ಮೃದುತರವಾಗಿ ರಚಿಸಿರುವನು. ಜೈನಬಂಧುಗಳ ಅಜ್ಞಾನ-ಅನಾದರಗಳ ಮೂಲಕವಾಗಿ ಈ ಅಮೋಘವಾದ ಗ್ರಂಥವು ಇಷ್ಟು ದಿನಗಳವರೆಗೆ ಒಂದು ಮೂಲೆಗುಂಪಾಗಿ ಬಿದ್ದುಕೊಂಡಿತ್ತು. ಶ್ರೀಜಿನೇಶನ ಕೃಪೆಯಿಂದ ಅದು ಈಗ ಹುಳಹುಪ್ಪಡಿಗಳ ದವಡಿಯೊಳಗಿಂದ ದಾಟಿ ನವತೇಜದಿಂದ ನನ್ನ ಕರ್ಣಾಟಕ ಬಂಧುಗಳ ಕೈಸೇರಲಿಕ್ಕೆ ಸಿದ್ಧವಾಗಿರುವದರಿಂದ ನನಗೆ ಅತ್ಯಾನಂದವಾಗುತ್ತದೆ.

ಈ ಗ್ರಂಥದಲ್ಲಿ ಸಂಸಾರಬಂಧನಗಳನ್ನು ಹರಿದು, ಪರಮ ಶಾಂತಿಪ್ರದವಾದ ಮೋಕ್ಷಸುಖವನ್ನು ದೊರಕಿಸಿಕೊಡುವ ಸಮ್ಯಕ್ತ್ವದ ಗುಣಕಥನವಿರುವದು. ಆದದರಿಂದ ಮೂಲಗ್ರಂಥಕರ್ತರು ಈ ಗ್ರಂಥಕ್ಕೆ “ ಸಮ್ಯಕ್ತ್ವ-ಕೌಮುದಿ ” ಎಂಬ ಹೆಸರನ್ನಿಟ್ಟಿದ್ದು ಯಥಾಯೋಗ್ಯವಾಗಿದೆ. ‘ ಕೌಮುದಿ ’ ಎಂದರೆ ಚಂದ್ರಿಕೆ ಅಥವಾ ಬೆಳದಿಂಗಳು. ಬೆಳದಿಂಗಳದಲ್ಲಿ ವಿಹಾರಮಾಡುವವರಿಗೆ ಹೇಗೆ ಮನಸಿನ ತಾಪವೆಲ್ಲ ದೂರಾಗಿ, ಪರಮಶಾಂತಿಯುಂಟಾಗುವದೋ, ಹಾಗೆ ಈ ಸಮ್ಯಕ್ತ್ವರೂಪಿಯಾದ ಚಂದ್ರಿಕೆಯಲ್ಲಿ ವಿಹಾರ ಮಾಡುವದರಿಂದ ಮನುಷ್ಯನ ಭವತಾಪವೆಲ್ಲ ದೂರಾಗಿ, ಆತನು ಪರಮಶಾಂತಿದಾಯಕ ಮೋಕ್ಷಸುಖಕ್ಕೆ ಭಾಜನನಾಗುವನು. ಆದದರಿಂದ ಕನ್ನಡ ನಾಡಿನೊಳಗಿನ ನನ್ನ ಎಲ್ಲ ಧರ್ಮದ ಬಂಧು-ಭಗಿನಿಯರು ಒಮ್ಮೆಯಾದರೂ ಈ ಗ್ರಂಥವನ್ನು ಓದಬೇಕೆಂದು ಅವರಿಗೆ ನಾನು ವಿನಂತಿಸುತ್ತೇನೆ.

ಈ ಗ್ರಂಥದ ಎರಡು ಮೂರು ಪ್ರತಿಗಳನ್ನು ಸರಿಹಚ್ಚಿ ನೋಡಿ ಬಹು ಶ್ರಮದಿಂದ ಒಂದು ಪ್ರತಿಯನ್ನು ಸಿದ್ಧಮಾಡಿ, ಅದನ್ನು ಪರಿಶೋಧಿಸಿ ಶುದ್ಧರೀತಿಯಿಂದ ಪ್ರಕಟಗೊಳಿಸಬೇಕೆಂಬ ಕುತೂಹಲದಿಂದ ನನ್ನೆಡೆಗೆ ಕಳುಹಿಸಿಕೊಟ್ಟ ತುಳುನಾಡಿನ ನೆಲ್ಲಿಕಾರಗ್ರಾಮದ ‘ ಶ್ರೀಅನಂತಕೀರ್ತಿ ಗ್ರಂಥಭಾಂಡಾರ ’ ದ ಸೆಕ್ರೆಟರಿಗಳಾದ ಮ. ರಾ. ರಾ. **ಎನ್. ಎಸ್. ಜೈನಿ** ಎಂಬ ಶ್ರಾವಕೋತ್ತಮರು ಇದರ ಪ್ರಕಾಶನಕ್ಕೆ ಮೂಲಕಾರಣರಾದದರಿಂದ ಅವರನ್ನು ಮನಃಪೂರ್ವಕವಾಗಿ ನಾನು ಅಭಿನಂದಿಸುತ್ತೇನೆ. ಕರ್ಣಾಟಕ ಸರಸ್ವತಿಯ ಸೇವೆಯನ್ನು ಹಗಲಿರುಳು ಮನಮುಟ್ಟಿ ಮಾಡುತ್ತ ಆಕೆಯ ಕೃಪಾಬಲದಿಂದ ಕರ್ಣಾಟಕ ಭಾಷಾಪಂಡಿತರೆಂದು ಖ್ಯಾತಿವಡೆದ, ರಾಜಮಹೇಂದ್ರಿ ಟ್ರೇನಿಂಗ ಕಾಲೇಜಿನಲ್ಲಿ ವ್ಹಾಯಿಸ ಪ್ರಿನ್ಸಿಪಾಲರಾಗಿ ಕೆಲಸಮಾಡಿ, ಈಗ ವೇಲೂರ ಜಿಲ್ಹೆಯ ಸ್ಕೂಲ್ ಇನ್ಸಪೆಕ್ಟರರಾಗಿರುವ ಮ. ರಾ. ರಾ. **ಆರ್. ತಾತಾಚಾರ್ಯ** M. A., L. T., I. E. S. ಇವರು ನನ್ನ ಬಿನ್ನಹವನ್ನು ಮನ್ನಿಸಿ, ಮಾತೃಭಾಷಾಭಿಮಾನದಿಂದಲೂ ಜೈನಗ್ರಂಥಪ್ರೇಮದಿಂದಲೂ ಬಹು ಶ್ರಮಬಟ್ಟು ಇದರ ಹಸ್ತಪ್ರತಿಯನ್ನೂ ಪ್ರೂಫುಗಳನ್ನೂ ಪರಿಶೋಧಿಸಿಕೊಟ್ಟು, ಗ್ರಂಥಾರಂಭದಲ್ಲಿ

ಮುನ್ನುಡಿ—ಕವಿವೃತ್ತಾಂತ-ಕವಿತಾವಿಷಯ-ಕಥಾಸಾರ— ಯನ್ನೂ ಕೊನೆಯಲ್ಲಿ ಕಠಿಣ ಪದಗಳ ಕೋಶವನ್ನೂ ಜೋಡಿಸಿಕೊಟ್ಟು ವಾಚಕರಿಗೆ ಭಾಷಾಪರಿಚಯಕ್ಕೆ ಸೌಲಭ್ಯವನ್ನುಂಟುಮಾಡಿರುವರಾದ್ದರಿಂದ ಈ ಮಹನೀಯರ ಉಪಕಾರವು ಸಂಸ್ಮರಣೀಯವಾಗಿರುವದು. ಶ್ರೀಮಹಾವೀರ ಮುದ್ರಣಾಲಯದ ಒಡೆಯರು ಈವರೆಗೆ ಎಷ್ಟೋ ಧರ್ಮಗ್ರಂಥಗಳನ್ನು ತಮ್ಮ ಮುದ್ರಣಾಲಯದಲ್ಲಿ ಅಚ್ಚುಹಾಕಿ ಪ್ರಚಾರಕ್ಕೆ ತಂದಂತೆ, ಈ ಗ್ರಂಥಕ್ಕೂ ಹೇರಳ ಹಣವನ್ನು ವೆಚ್ಚಮಾಡಿ ಇದನ್ನು ಪ್ರಕಟಗೊಳಿಸಿದ್ದರಿಂದ ಇವರನ್ನೂ ತುಂಬಾ ಅಭಿನಂದಿಸುತ್ತೇನೆ.

ಈವರೆಗೆ ಮಹಾವೀರ ಅಚ್ಚುಶಾಲೆಯಿಂದ ಪ್ರಕಟವಾದ ಗ್ರಂಥಗಳಲ್ಲಿ ಇದೇ ಮೊದಲನೆಯ ಕಾವ್ಯಗ್ರಂಥವಾಗಿದೆ. ಆದದರಿಂದ ಇನ್ನು ಮುಂದೆ **‘ ಕರ್ಣಾಟಕ ಜೈನಕಾವ್ಯಮಾಲೆ ’** ಎಂಬ ಹೆಸರಿನಿಂದ ಜೈನ ಕಾವ್ಯಗ್ರಂಥಗಳನ್ನು ಅಚ್ಚುಹಾಕುತ್ತಹೋಗಬೇಕೆಂಬ ಉತ್ಕಟೇಚ್ಛೆಯು ನನ್ನಲ್ಲಿ ಉಂಟಾದದರಿಂದ ಈ ಗ್ರಂಥಕ್ಕೆ ಆ ಹೆಸರನ್ನಿಟ್ಟು ಇದನ್ನು ಅದರ ಮೊದಲನೆಯ ಪುಷ್ಪವಾಗಿ ಮಾಡಿದ್ದೇನೆ. ತಮ್ಮ ಧರ್ಮೋದ್ಧಾರಕ್ಕೆಂದೂ ತಮ್ಮ ಮುಂದಣ ಪೀಳಿಗೆಯ ಆತ್ಮೋದ್ಧಾರಕ್ಕೆಂದೂ ತಮ್ಮ ಮಾತೃಭಾಷೋದ್ಧಾರಕ್ಕೆಂದೂ ನಮ್ಮ ಪೂರ್ವಜರು ರಚಿಸಿದ ಅನೇಕಾನೇಕ ಗ್ರಂಥಗಳು ಅಂಧಕಾರದಲ್ಲಿಯೇ ಹೊರಳಾಡುತ್ತಿರುವದರಿಂದ, ಅವು ಪ್ರಕಾಶಕ್ಕೆ ಬರಬೇಕೆಂಬ ಹಂಬಲವುಳ್ಳ ನನ್ನ ಕರ್ಣಾಟಕದಬಂಧು-ಭಗಿನಿಯರು ಈ ಪ್ರಥಮ ಪುಷ್ಪಕ್ಕೆ ಉದಾರಾಶ್ರಯನ್ನು ಕೊಡುವರೆಂದು ತುಂಬಾ ನಂಬಿದ್ದೇನೆ.

**ಬೆಳಗಾವಿ.**<br>**ಮಾಘ ಶು. ೧-೧೮೪೪.**

ತಮ್ಮ ಧರ್ಮಬಂಧು,<br>**ಕೆ. ದ. ಚೌಗುಲೆ.**

---

## ವಿಷಯಾನುಕ್ರಮಣಿಕೆ.



---

# ಮುನ್ನುಡಿ.

## 1 ಮಂಗರಸ.

ಈ ಹೆಸರ ಕವಿಗಳು ಮೂವರಿದ್ದಂತೆ ತಿಳಿದುಬಂದಿದೆ.

**ಮೊದಲನೆಯ ಮಂಗರಸನು**—ಹೊಯ್ಸಳದೇಶದ ದೇವಳಿಗೆಯನಾಡಿನ ಮೂಗುಳಿಯಪುರದ ಅಧಿಪ. ಈತನ ಗುರು ಪೂಜ್ಯಪಾದ. ಹೆಂಡತಿ ಕಾಮಲತೆ; ಮೂವರು ಪುತ್ರರು. ವಿಜಯನಗರದ ಹರಿಹರರಾಯನ ಕಾಲದವನು; ಸು. ೧೩೬೦ರಲ್ಲಿರಬೇಕು. ಈತನ ಬಿರುದುಗಳು:—ಸುಲಲಿತ ಕವಿ ಪಿಕವಸಂತ, ವಿಭುವಂಶಲಲಾಮ, ಕವಿಜನೈಕ ಮಿತ್ರ ಅಗಣಿತಗುಣನಿಳಯ, ಅಖಿಳವಿದ್ಯಾಜಲನಿಧಿ, ಪಂಚಗುರುಪದಾಂಬುಜಭೃಂಗ- ಮೊದಲಾದವು. ಈತನು ಖಗೇಂದ್ರಮಣಿದರ್ಪಣವೆಂಬ ವಿಷವೈದ್ಯಗ್ರಂಥವನ್ನು ಕಂದ ವೃತ್ತಗಳಲ್ಲಿ ಬರೆದಿದ್ದಾನೆ. ಇವನು ಜೈನಕವಿ.

**ಎರಡನೆಯ ಮಂಗರಸನು**—ಈತನು ಕಮ್ಮೆಕುಲದ ಬ್ರಾಹ್ಮಣ. ವಿಶ್ವಾಮಿತ್ರಗೋತ್ರ. ತಂದೆ ರೆಮ್ಮಾರ್ಯರಾಮರಾಯ. ೧೩೯೮ ರಲ್ಲಿ ಮಂಗರಾಜನಿಘಂಟುವನ್ನು ಬರೆದನು.

**ಮೂರನೆಯ ಮಂಗರಸನು**—ಇವನು ಜೈನಕವಿ. ದ್ವಾರಾವತಿಯ ಪುರಾಧೀಶ್ವರ ಲಕ್ಷ್ಮೀರಮಣಾನ್ವಯ ಚೆಂಗಾಳ್ವಮಹೀ। ನಾರೀಧವ ನಿಜಸಚಿವ ರುಚಿರ ಕುಲದುಗ್ಧಾಂಭೋನಿಧಿಗೆ ॥ ತಾರಾತರುಣೀವಲ್ಲಭ ಜಿನಪದ । ವಾರಿಜಮಧುಕರ ಯಾಚಕ ಜನಚಿಂ। ತಾರತ್ನಂ ಚಿತ್ರಕಲಾಸದನಂ ಸುದತೀಜನಮದನಂ ॥ J. I. 12.

ವಿಲುಳಿತ ವಿಶ್ವಂಭರೆಯೆಂಬಲೆಯ ಲಲಿತಶ್ರೀಮುಖಮೆಂಬಂದದಿ ಕಣ್ಗೊಳಿಸುವ ಹೊಯ್ಸಳದೇಶದ ಮಧ್ಯದ ಹೊಸವೃತ್ತಿಯನಾಡಾ। ಅಲಘುಪ್ರಿಯದಿಂ ಪಾಲಿಪನುಜ್ವಲ ತೇಜಂ ಧಾತುಪುರಾಧೀಶಂ ಲಲನಾಮಾಧವಸುತ ಸದೃಶಂ ಮಾಧವಸುತ ವಿಜಯೇಂದ್ರಂ (I. 13).

ಪ್ರಭುಕುಲದೀಪಂ ಪ್ರಮದಾಜನ ಚಿತ್ತಭವಂ ಪ್ರಜ್ವಲತೇಜೋಪೇತಂ ಶುಭತರ ಕೀರ್ತಿಯುತಂ ಸುರಭೂಜೋಪಮ ವಿತರಣಶೀಲಂ। ತ್ರಿಭುವನಪತಿ ಜಿನಭಕ್ತಂ ವಾಸವವಿಭವಂ ವಿನಯಾಂಬುಧಿಚಂದ್ರಂ ರಣಕಭಿನವವಿಜಯಂ ವಿಜಯಾಂಗನೆಗಧಿರಾಜಂ ವಿಜಯೇಂದ್ರಂ ॥ (I. 14). ಆತನ ಸುತ ಮಂಗರಸನೆನಾಂ ಸತ್ಪ್ರೀತಿಯಿನೀ ಜಯನೃಪಚಾರಿತ್ರಮನೋಕುಸಿರ್ದೆಂ ... (I. 15.)

ಮೇಲೆ ಬರೆದಿರುವ ಪದ್ಯಗಳಿಂದ ಈತನು ಚೆಂಗಾಳ್ವರಾಜರ ಮಂತ್ರಿಗಳ ವಂಶದಲ್ಲಿ ಜನಿಯಿಸಿದವನು. ಈತನ ಪಿತಾಮಹನು ಮಾಧವರಾಯ; ತಂದೆ ವಿಜಯರಾಯ. ಇವರು ಹೊಯ್ಸಳದೇಶದ ಹೊಸವೃತ್ತಿಯನಾಡಿನ (ಕಲ್ಲಹಳ್ಳಿ) ಧಾತುಪುರದರಸರು. ಈತನ ತಾಯಿ ದೇವಿಲಿ. ಗುರು ಚಿತ್ತಪ್ರಭೇಂದು.

**ಈತನು ಬರೆದ ಗ್ರಂಥಗಳು:**—೧ ಜಯನೃಪಕಾವ್ಯ (ಪರಿವರ್ಧಿನಿಷಟ್ಪದಿ).
೨ ಸಮ್ಯಕ್ತ್ವಕೌಮುದಿ (ವಾರ್ಧಿಕಷಟ್ಪದಿ)
೩ ಶ್ರೀಪಾಲಚರಿತೆ
೪ ಪ್ರಭಂಜನಚರಿತೆ
೫ ಸೂಪಶಾಸ್ತ್ರ
೬ ನೇಮಿಜಿನೇಶಸಂಗತಿ
(೩–೬) ಸಾಂಗತ್ಯ.

**ಕಾಲ.**—ಸಮ್ಯಕ್ತ್ವಕೌಮುದಿಯುನ್ನು ಸಾಸಿರದ ಮೇಲೆ ನಾನೂರ ಮುವ್ವತ್ತೊಂದು ಭಾಸುರಂಬಡೆದ ಶಕವರ್ಷದೆಸೆವಾಶ್ವಯುಜ ಮಾಸದಾ ಶುಕ್ಲಪಕ್ಷದ ಪಾಡ್ಯಮುಂ ಮಂದವಾರದೊಳಗೀ ಕೃತಿಯುನು ಸಮಾಪ್ತಂಗೆಯ್ದೆನೆಂದು ಹೇಳಿರುವನು. ೧೫೦೯. ಹೂಣಶಕ.

**ತನ್ನ ಕವಿತೆಯನ್ನು ಕುರಿತು ಜಯನೃಪಕಾವ್ಯದಲ್ಲಿ:**—

ತಕ್ಕರಗೋಷ್ಠಿ ತನೂದರಿಯರ ಪೊಸ। ತಕ್ಕೆ ತೊಡಂಬೆಯಲರ್ ಪೊಸಜೇನೆಯ್।
ಸಕ್ಕರೆ ತೀವಿದ ತನಿವಾಲೂದುವ ತೆಂಕಣ ತೆಳ್ಳೆಲರು ॥
ಮಕ್ಕಳ ಮುದ್ದುವೆರೆದ ನುಡಿ ಮದುರಿತು। ಜೊಕ್ಕಳಿಕೆಯ ನವಚಂದ್ರಿಕೆಯೆನೆ ಹೃದ।
ಯಕ್ಕೆ ವಿಲಾಸಮನೀವುದು ಸತ್ಪ್ರಭುರಾಜನ ಸವಿವಾತು ॥ (I. 24)
ಮನಮೊಲ್ದೋದುವೆನೆಂಬರ ಬಾಯ್ದೆರೆ। ಗಿನಿಯುಳ್ತುಂಬಿದ ನವರಸದಂಬುಲ।
ಮೆನೆ ಲಾಲಿಸಿ ಕೇಳ್ವರ ಕಿವಿಗೋಪವಳಾಡಿದ ಲಲ್ಲೆಯೆನೆ ॥
ಅನುರಾಗದಿ ಲಿಖಿಸುವಿನೆಂಬರ ಕೈ। ಯ್ಗನಿಮಿಷನೇತ್ರೆಯ ಘನಕುಚಯುಗದೊ।
ತ್ತೆನಲಾದುದು ಸತ್ಪ್ರಭುರಾಜನ ಸತ್ಕವಿತೆಯ ಸವಿವಾತು ॥ (I. 25)
ವಾಚಕ ವಾಚ್ಯ ವ್ಯಂಗ್ಯ ವ್ಯಂಜನ। ಸೂಚಿತ ಲಕ್ಷಣ ಲಕ್ಷ್ಯವಿವೇಕರ।
ಸೋಚಿತಭಾವಾಲಂಕೃತಿ ರೀತಿತ್ರಯಭೇದಕ ಭೇದ್ಯ ॥
ಆಚರಿತೋಭಯ ಸಂಧಿಸಮಾಸ ವಿ। ವೇಚನೆಗಳ ಭೇದಮನಿನಿಸರಿಯದೆ।
ವಾಚಾಲತೆಯಿಂದುಸಿರಿದ ದುಷ್ಕೃತಿಯಲ್ಲಿದು ಭಾವಿಪೊಡೆ ॥ (I. 26)

**ಸಮ್ಯಕ್ತ್ವಕೌಮುದಿಯಲ್ಲಿಯೂ ಇದೇ ಅಭಿಪ್ರಾಯದ ಪದ್ಯಗಳಿವೆ:**—

ತೆಂಬೆಲರ ಸೋಂಕು ತಕ್ಕರ ಮಾತು ತರುಣಿಯ।
ರಂಬೀರುವೊಂದುರುಚಿ ಪೂವಿನ ತೊ।
ಡಂಬೆ ಪೀಯೂಷಪಿಂಡಂ ಜೇನಸೋನೆ ಪೊಸಸುಗ್ಗಿ ರಂಜನೆಯ ಹಡೆದಾ ॥
ಕೆಂಬರಲ ತೊಡವು ಚಂದನದಣ್ಪು ಸಿರಿಪಚ್ಚೆ।
ಯೆಂಬಂಬುಜಾಕಾರವೆಳೆಯ ಕೋಗಿಲೆಯ ಸವಪಂಚ।
ಮುಂಬೊರೆದ ನುಣ್ಚರಂ ಪ್ರಭುರಾಜ ಮಂಗರಸನೊರೆದ ಕೌಮುದಿಯ ಮಾತು ॥ (I. 10)
ರಸದಾಳಿಯಂತೆ ರಮಣಿಯರ ಚೆಂದುಟಿಯಂತೆ।
ಪೊಸಜೇನಕೊಡದಂತೆ ಪೊಣ್ಮುವೆಳಜವ್ವನೆಯ।

ಕೊಸೆದೀವ ತಾಂಬೂಲದಂತೆ ಕಾದಿಳಿಪಿಯಾರಿದ ಬಟ್ಟವಾಲಿನಂತೆ ॥
ಅಸಿಯುಳೊಡನಾಟದಂತರವಮಾವಿನ ತನಿವಣ್ಣ ।
ರಸದಂತೆಯುಮೃತದಂತತಿರುಚಿಯು ಪಡೆದುದತಿ ।
ರಸಿಕನತಿನಿಪುಣ ಮಂಗರಸನೊಪ್ಪುವ ವಾಕ್ಯಗುಂಫನಂ ಭಾವಿಸಿದೊಡೆ ॥ (I. 11)

**ತನ್ನ ಕಾಲದ ಕವಿತೆಯ ಪರಿಸ್ಥಿತಿಯನ್ನು ಕುರಿತು ಜಯನೃಪಕಾವ್ಯ ದಲ್ಲಿ ಹೀಗೆ ಹೇಳಿರುವನು:—**

ಬಲ್ಲವರಾದೊಡಮೇನೊ ಕೆಲರ್ ತಾ । ಮಲ್ಲದೆ ತಮ್ಮೊಳ್ದಾ ಮಾತಲ್ಲದೆ ।
ಸಲ್ಲದು ಸರ್ವಗ್ನೆನುತಂ ಮತ್ತಿನ ಮಾನ್ಯರೊರೆದ ಕೃತಿಯಾ ॥
ಸಲ್ಲಲಿತಮನೇನೆನ್ನದೆ ತಮ್ಮಯ । ಬಲ್ಲತನವನೇ ಮೆರೆವಣ್ಣಂಗಳ ।
ಬಲ್ಲತನದ ಬಾಯೊಳು ಬಳಹರಿ । ಬಲ್ಮನಿಸುದಳೆದು ಹೊಗಲಿ ॥ ( I. 17 )
ಸುರಭಿವಿಲೇಪನ ಸುರುಚಿರರತ್ನಾ । ಭರಣಮಃನತಿಗಳೆಯಿಸಿ ತಲೆಯೋಡೆಲು ।
ಗರುಳ ತೊವಲ್ದೊವೆಗಳೀಶನ ಸಾಮಿೂಪ್ಯಂ ಬಡೆವಂತೆ ॥
ಸರಸಕಲಾಕೋವಿದ ಸಜ್ಜನರಂ । ಪೊರೆಯೊಳ್ ನಿಲಲೀಯದೆ ಪಿರಿದುಂ ತಾ ॥
ಮುರಸುಗಳಂ ಬಿಡದಿಹ ದುರ್ಜನಸಂತತಿಗಾ ನಂಜುವೆನು ॥ ( I. 19 )

**ಕಾವ್ಯದಲ್ಲಿ ಪಾಕ.** ಸಂಸ್ಕೃತ ಕನ್ನಡವೆರಡನ್ನೂ ಒಡವೆರಸಿ ಅತಿ ಕಠಿಣಪಾಕಮ ಲ್ಲದೆ ಮೃದುಪಾಕಮಪ್ಪಂತೆ ವಿರಚಿಸಿದೆಂ ( ಸಮ್ಯಕ್ತ್ವ ( XII. 45 ) ಎಂದು ಹೇಳಿದೆ.

ಇದೇ ಅಭಿಪ್ರಾಯವನ್ನು ಪಾಲೊಳಗಯಿದಾರೆಯುಸಕ್ಕರೆಯಂ, ಒತೊಡವೆರಸುವ ತೆರದಿಂ ನವರಸರೀತಿವಡೆದ ಸಕ್ಕದದೊಳು ಕನ್ನಡವಾತಂ ಸಮರಿಚಿರಿಸಿ ಜಯನೃಪಚಾ ರಿತ್ರವನೋತುಸಿರ್ದೆಂ ( I. 23 ) ಎಂದು ಹೇಳಿರುವನು.

ಮಂಗರಸನ ಬಿರುದುಗಳು:—ಪ್ರಭುರಾಜ, ಪ್ರಭುಕುಲರತ್ನದೀಪ. ( ಇವು ಜಯ ನೃಪಕಾವ್ಯದಲ್ಲಿ ದೊರೆಯುತ್ತವೆ. )

---

## 2 ಸಮ್ಯಕ್ತ್ವಕೌಮುದಿ.

ಇದರ ಕಥೆಯನ್ನು ವೀರವರ್ಧಮಾನಸ್ವಾಮಿಯ ಸಮವಸರಣದಲ್ಲಿ ಗೌತಮಗಣ ಧರರು ಶ್ರೇಣಿಕಮಹಾರಾಯನಿಗೆ ವಿವರಿಸಿದರು. ಸಂಸ್ಕೃತದಲ್ಲಿದ್ದ ಈ ಕಥೆಯನ್ನು ಕನ್ನಡಿಸಿದೆನೆಂದು ಕವಿ ಹೇಳಿರುವನು. ಕಥೆಯ ಮುಖ್ಯಾಂಶವು—ಕಾರ್ತಿಕ ಮಾಸದ ಕೌಮುದೀ ಮಹೋತ್ಸವಕ್ಕೆ ನಂದನವನಕ್ಕೆ ಮಧುರಾಪುರಿಯ ರಾಯ ಉದಿತೋದ ಯನ ಹೆಂಡತಿ ಉದಿತಾಮಹಾದೇವಿಯೇ ಮೊದಲಾದ ಪುರಸ್ತ್ರೀಯರೆಲ್ಲರೂ ಹೋಗಿ ರಲು, ವಿರಹವೇದನೆಯಿಂದ ಬೇಸರವನ್ನು ಕಳೆಯಲಿಕ್ಕೆ ಆ ರಾಯನ ಮಂತ್ರಿಯಾದ ಸುಬುದ್ಧಿಯೊಡನೆ ಊರೊಳಗೆ ಚಂದ್ರಿಕಾವಿಹರಣಾರ್ಥವಾಗಿ ಹೊರಟು, ಅರ್ಹದ್ದಾಸ ನೆಂಬ ವೈಶ್ಯತಿಲಕನೂ ಅವನ ಹೆಂಡತಿಯರೂ ನಂದೀಶ್ವರದ ನೋಂಪಿಯಿಂದ ಜಾಗರ

ವಿದ್ದು ತಮತಮಗೆ ಸಮ್ಯಕ್ತ್ವವೊದಗಿದ ಕಥೆಗಳನ್ನು ಹೇಳುತ್ತಿರಲು ಕೇಳಿ, ಬೆಳಗಾಗುವ ವರೆಗೂ ಸಮ್ಯಕ್ತ್ವವು ಅಂಕುರಿಸಿ, ವೈರಾಗ್ಯಪರನಾಗಿ, ಮಗನಿಗೆ ರಾಜ್ಯವನ್ನೊಪ್ಪಿಸಿ, ದೀಕ್ಷೆಗೊಂಡು ಆಯುರಂತ್ಯದಲ್ಲಿ ಅಚ್ಯುತಕಲ್ಪದಲ್ಲಿ ಅಚ್ಯುತೇಂದ್ರನಾದನು. ಮೊದಲ ನೆಯ ಸಂಧಿಯಲ್ಲಿ— ಪಂಚಗುರುಸ್ತವವಾದ ಬಳಿಕ, ಶಾರದಾಸ್ತುತಿ, ಆಚಾರ್ಯರುಗಳು, ಸ್ವಕವಿತ್ವದ ವಿಷಯ, ಕಥಾರಂಭದಲ್ಲಿ ಸಮವಸರಣವಾರ್ತಾನಿವೇದಕ, ಗಣಧರರನ್ನು ಶ್ರೇಣಿಕನು ಸಮ್ಯಕ್ತ್ವವುಂಟಾಗುವಂತೆ ಕಥೆಯೊಂದನ್ನು ಹೇಳಬೇಕೆಂದು ಪ್ರಾರ್ಥಿಸಲು ಅವರು ಹೇಳತೊಡಗಿದರು.

ಭರತಾರ್ಯಾಖಂಡದಲ್ಲಿ ಪೌರಜನಪದವೆಂಬ ದೇಶದ ಮಧ್ಯದಲ್ಲಿ ಮಧುರೆ ಯೆಂಬುದು ಪಟ್ಟಣ. ಅದಕ್ಕೆ ಅರಸನು ಉದಿತೋದಯ ಮಹಾರಾಯ; ರಾಣಿ ಉದಿತಾ ಮಹಾದೇವಿ. ಮಂತ್ರಿ ಸುಬುದ್ಧಿ. ರಾಯನು ಕಾರ್ತಿಕ ಮಾಸದ ಪರ್ವದಲ್ಲಿ ನಂದನ ವನಕ್ಕೆ ಸ್ತ್ರೀಯರೆಲ್ಲರೂ ಹೋಗಬೇಕೆಂದು ಹೊರಡಿಸಿದುದಲ್ಲದೆ, ಗಂಡಸರಾರೂ ಹೋ ಗಕೂಡದೆಂದು ಕಟ್ಟಾಜ್ಞೆ ಮಾಡಿದ್ದನು. ಹೀಗಿರುವಲ್ಲಿ ಎಲ್ಲರೂ ಹೋದರು. ಅರಸನು ಪತ್ನಿಯವಿಯೋಗದಿಂದ ತಾನು ಅರಸೆಂಬ ಹೆಮ್ಮೆಯಿಂದ ಹೋಗಲಿಕ್ಕೆ ಅಭಿಲಾಷೆ ಯಿದ್ದರೂ, ಹಿತವಚನದಿಂದ ಅವನನ್ನು ಮಂತ್ರಿ ಒಡಂಬಡಿಸಿ ಬೇಸರವನ್ನು ಕಳೆಯ ಲಿಕ್ಕೆ ಚಂದ್ರಿಕಾವಿಹರಣ ಮಾಡಿದರೆ ಏನಾದರೂ ಆಶ್ಚರ್ಯವಾದುದನ್ನು ಕಾಣಬಹು ದೆಂದು ಹೇಳಲು, ಅದಕ್ಕೂ ಸಮ್ಮನಿಸದುದರಿಂದ ಮಂತ್ರಿ— ಬಹುಜನವಿರೋಧದಿಂದ ಸಕಲೈಶ್ವರ್ಯವನ್ನೂ ನೀಗಾಡಿಕೊಂಡ ರಾಯನೊಬ್ಬನ ಕಥೆಯನ್ನು ಹೇಳುತ್ತಾನೆ.

**ಎರಡನೆಯ ಸಂಧಿ:—** ಕುರುಜಾಂಗಣವೆಂಬ ದೇಶದಲ್ಲಿ ಹಸ್ತಿನಾಗಪುರ ವುಂಟು. ಅಲ್ಲಿ ಅರಸ ಸುಯೋಧನ. ರಾಣಿ ಕಮಲೆ; ಕುಮಾರ ಗುಣಪಾಲ; ಮಂತ್ರಿ ಪುರುಷೋತ್ತಮ, ಪುರೋಹಿತ ಕಪಿಲ, ತಳಾರ ಯಮದಂಡ. ಇವರೊಡನೆ ರಾಜ್ಯ ವಾಳುತ್ತಿರಲು ಒಂದುದಿನದೊಡ್ಡೋಲಗಕ್ಕೆ ಗಡಿಯನಾಯಕರು ಬಂದು ಪರರಾಜರಿಂದ ತಮಗೆ ಬಾಧೆ ಹೆಚ್ಚಾಗಿರುವುದೆಂದು ಬಿನ್ನಯಿಸಲು, ಅವರ ಪುಂಡನ್ನು ಅಡಗಿಸಿ ಬರು ವೆನು. ಅಂದಿನವರೆಗೂ ನೀನು ರಾಜ್ಯವನ್ನು ನೋಡುತ್ತಿರು ಎಂದು ಯಮದಂಡನಿಗೆ ಒಪ್ಪಿಸಿ ಹೋದನು. ಹೋಗಿ ಶತ್ರುಗಳನ್ನು ಜಯಿಸಿ, ಗಡಿಗಳನ್ನು ಭದ್ರಪಡಿಸಿ ಹಿಂತಿ ರುಗಿ ಬಂದು ಪ್ರಜೆಗಳನ್ನು ನಾನು ಇಲ್ಲದಿದ್ದಂದು ನೀವು ಸುಖವಾಗಿದ್ದಿರಾ ಎಂದು ಕೇಳಿದನು. ಅದಕ್ಕವರು ಸ್ವಾಮಿ—ನೀವೇ ಸುಳ್ಳು ತಾನೇ ಅರಸು ಎಂಬಂತೆ ಬಹು ವಿಶ್ವಾಸದಿಂದ ನಮ್ಮನ್ನು ಯಮದಂಡನು ಕಾಪಾಡಿದನು ಎಂದು ಹೇಳಲು, ಅರಸನು ಮತ್ಸರವನ್ನು ಹೊಂದಿ, ಮಂತ್ರಿಪುರೋಹಿತರನ್ನು ಕರೆಯಿಸಿ ಆಲೋಚನೆಮಾಡಿದನು. ಆವುದಾದರೂ ಒಂದು ನೆವದಿಂದ ತಳಾರನಿಗೆ ಶಿಕ್ಷೆವಿಧಿಸುವುದೇ ಸರಿಯೆಂದು ತೀರ್ಮಾನಿ ಸಿ, ರಾತ್ರಿ ಯಾರೂ ಅರಿಯದಂತೆ ಈ ಮೂವರೂ ಭಂಡಾರಕ್ಕೆ ಕನ್ನವನ್ನು ಹಾಕಿ ಅಲ್ಲಿದ್ದ ವಸ್ತುಗಳನ್ನು ಕದ್ದು ಬೇರೊಂದು ಕಡೆಯಲ್ಲಿ ಬೈಚಿಟ್ಟರು. ಮರುದಿನ ಸಭಾಸ್ಥಾನಕ್ಕೆ ಯಮದಂಡನನ್ನು ಕರೆಯಿಸಿ ರಾತ್ರಿ ಯಾರೋ ಭಂಡಾರಕ್ಕೆ ಕಳ್ಳರು ಹೊಕ್ಕು ವಸ್ತು

ಗಳನ್ನು ಕದ್ದುಕೊಂಡುಹೋದರು. ಅವರನ್ನು ಹಿಡಿದುಕೊಡದಿದ್ದರೆ ನಿನಗೆ ಕಠಿಣ ಶಿಕ್ಷೆಯಾಗುವುದು ಎಂದನು. ಆಗಲಿ ಎಂದು ಹೇಳಿ ಯಮದಂಡನು ಕನ್ನವನ್ನು ಕೊರೆದ ದಾರಿಯಲ್ಲಿ ತಾನೊಬ್ಬನೇ ಹೋಗಿ ನೋಡಲು ಅರಸನ ರತ್ನದ ಪಾದುಗೆ, ಮಂತ್ರಿಯ ಮುದ್ರೆಯ ಉಂಗುರ, ಪುರೋಹಿತನ ಚಿನ್ನದ ಜನಿವಾರ ಈ ಮೂರೂ ಕನ್ನದ ಬಾಯಲ್ಲಿಯೇ ಕಾಣಲು ಅವನ್ನು ತೆಗೆದುಕೊಂಡು ಭದ್ರವಾಗಿ ಇರಿಸಿ, ಇವರು ನಿರಪರಾಧಿಯಾದ ನನ್ನ ಮೇಲೆ ತಪ್ಪನ್ನು ಅನ್ಯಾಯವಾಗಿ ಹೊರಿಸಿ ದಂಡಿಸಬೇಕೆಂದು ಮಾಡಿದ ಮಾಟವೆಂದು ನಿಶ್ಚಯಿಸಿಕೊಂಡನು. ಊರೊಳಗೆ ಈ ಕಳವಾದ ಸಂಗತಿಯನ್ನು ಕೇಳಿ ಜನರು ಗಜಬಜಿಸಿ ಅರಸನ ಬಳಿಗೆ ಬರಲು, ಅವನು ಅವರೊಡನೆ ಆ ಸಂಗತಿಯನ್ನು ಹೇಳಿದನು. ಪ್ರಜೆಗಳದನ್ನು ಕೇಳಿ ಅರಮನೆಯ ಕಾವಲನ್ನು ಸರಿಯಾಗಿ ನೋಡದ ಯಮದಂಡ ತಳಾರನೇ ದ್ರೋಹಿ ಅವನಿಗೆ ಎಂಟುದಿನದ ಅವಧಿಯನ್ನು ಕೊಡಿರಿ. ಅಷ್ಟರೊಳಗೆ ಕಳ್ಳರನ್ನು ಹಿಡಿತರದೆ ಹೋದರೆ ಅವನಿಗೆ ನಾವೇ ಶಿಕ್ಷೆಕೊಡಿಸುವೆವು ಎಂದು ಹೇಳಿದರು. ಈ ಮಾತನ್ನು ಕೇಳಿ ಯಮದಂಡನು ಚಿಂತಿಸುತ್ತ ಅವರೊಡನೆ ಅರಮನೆಯನ್ನು ಬಿಟ್ಟು ಮನೆಗೆ ಬಂದನು. ಮರುದಿನ ಸಭೆಗೆ ಬಂದಾಗ ಅರಸನು ಕಳ್ಳರನ್ನು ಹಿಡಿತಂದೆಯಾ ಎಂದು ಕೇಳಲು, ನಾನು ಬರುತ್ತಿರುವಂದು ಈ ಊರ ಜನರು ನೆರೆದು ಒಂದು ಕಥೆಯನ್ನು ಹೇಳುತ್ತಿರಲು ಅದನ್ನು ಕೇಳುತ್ತಿದ್ದೆನಾದ ಕಾರಣ ಕಳ್ಳರನ್ನು ತರಲಿಕ್ಕೆ ಮರೆತೆನೆಂದು ಹೇಳಿದನು. ಆ ಕಥೆಯಾವುದೆಂದು ಅರಸನು ಕೇಳಿದುದಕ್ಕೆ

(೧) ತಳಾರನು ಹೇಳಿದ ಕಥೆ:—ಒಂದಾನೊಂದು ಕೊಳದ ದಡದಲ್ಲಿ ಮರದ ಮೇಲೆ, ಆರಿಗೂ ಹತ್ತಲಿಕ್ಕಾಗದಷ್ಟು ಎತ್ತರದಲ್ಲಿ ಗೂಡು ಕಟ್ಟಿಕೊಂಡು ಒಂದು ಮುದಿಯಂಚೆ ಮರಿಗಳೊಡನೆ ವಾಸಮಾಡುತ್ತಿತ್ತು. ಅದನ್ನು ಕಂಡ ಒಬ್ಬ ಬೇಡನು ಆ ಮರದ ಬಳಿಯಲ್ಲಿ ಒಂದು ಬಳ್ಳಿಯ ಬೀಜಗಳನ್ನು ತಂದು ಬಿತ್ತಿ ಸಲಹುತ್ತಿರಲು, ಅದು ಹಬ್ಬುವುದನ್ನು ಕಂಡು ಇದರಿಂದ ನಮಗೆ ಕೇಡು ತಪ್ಪದೆಂದು ಮರಿಗಳಿಗೆ ಮುದಿಯಂಚೆ ಹೇಳಿತು. ಮರಿಗಳು ಇದು ಬೆಳೆವುದೆಂದು, ತುದಿಗೆ ಬರುವುದೆಂದು, ಇದನ್ನು ಹಿಡಿದು ಮರವನ್ನು ಹತ್ತಿ ಬೇಡನು ನಮ್ಮ ಗೂಡಿಗೆ ಬರುವುದೆಂದು, ಇದೇತರಮಾತು—ನಿನಗೆ ಮುದಿತನದ ಅರುಳುಮರುಳು ಇನ್ನೂ ಬದುಕಬೇಕೆಂಬ ಆಸೆ ಬಿಡಲಿಲ್ಲ ಹೋಗೆಂದು ತುಚ್ಛವಾದ ಮಾತುಗಳನ್ನು ಆಡಿದುವು. ಕೆಲವು ಕಾಲಕ್ಕೆ ಆ ಬಳ್ಳಿ ಹಬ್ಬಿ ಮರದ ತುತ್ತತುದಿಯನ್ನು ಮುಟ್ಟಿತು. ಬೇಡನು ಸಂತೋಷದಿಂದ ಬೆಳಿಗ್ಗೆ ಬಂದು ಹಕ್ಕಿಗಳು ಮೇವಿಗೆ ಹೋಗಿದ್ದ ಹೊತ್ತಿಗೆ ಆ ಬಳ್ಳಿಯನ್ನು ಹಿಡಿದು ಮರದ ತುದಿಗೇರಿ ಬಲೆಯನ್ನು ಬೀಸಿ ಇಳಿದನು. ಮೇವಿಗೆ ಹೋಗಿ ಬಂದ ಹಂಸಗಳೆಲ್ಲವೂ ಆ ಬಲೆಗೆ ಸಿಕ್ಕಿ ಬಿದ್ದುವು. ಅಷ್ಟರೊಳಗೆ ಮುದಿಹಂಸನು ಬಂದು, ಮತ್ತೊಂದು ಮರದ ಕೊನೆಯಲ್ಲಿ ಕುಳಿತು ಮರಿಗಳಿಗೆ ಬಂದ ಅಪಾಯವನ್ನು ಕಂಡು ಚಿಂತಿಸುತ್ತಿರಲು, ಮರಿಗಳು ನಮ್ಮಿಂದಾದ ತಪ್ಪನ್ನು ಕ್ಷಮಿಸಿ ಬದುಕುವ ಉಪಾಯವನ್ನು ಹೇಳಬೇಕೆಂದು ದೈನ್ಯದಿಂದ ಕೇಳಿಕೊಂಡುವು. ಅದಕ್ಕೆ ಮುದಿಹಂಸನು ನೀವು ಸತ್ತಂತೆ ಬಲೆಯೊಳಗಡಗಿಬಿದ್ದಿದ್ದರೆ ಬೇಡರವನು ಬಲೆಯನೆತ್ತಿ ನಿಮ್ಮನ್ನು ಕಂಡಕಡೆಗೆ ಬಿಸಾಡುವನು. ಆಗ ನೀವು ಹಾರಿಹೋಗಿ ಬದುಕಬಹುದು. ಇಲ್ಲ

ದಿದ್ದರೆ ನಿಮ್ಮನ್ನು ಕುತ್ತಿಗೆಮುರಿದು ಕೊಂದುಹಾಕುವನು ಎಂದು ಹೇಳಿತು. ಮರಿಗಳು ಹಾಗೆಯೇ ಸತ್ತಂತೆ ಬಿದ್ದಿರಲು ಬೇಡನು ಕಂಡು ಈ ಸತ್ತುಹೋದುವನ್ನು ಇನ್ನಾರಿಗೆ ಕೊಡಲಿ. ನನ್ನ ಆಶೆಯೆಲ್ಲಾ ನಿಷ್ಫಲವಾಯ್ತು ಎಂದು ಅವುಗಳನ್ನು ಕಂಡಕಡೆಗೆ ಎಸೆಯಲು, ಅವು ನೆಲಕ್ಕೆ ಬೀಳುವುದಕ್ಕೆ ಮುಂದೆ ದಿಕ್ಕುದಿಕ್ಕಿಗೆ ಹಾರಿಹೋದುವು-ಈ ಕಥೆಯನ್ನು ಕೇಳುತಿದ್ದುದರಿಂದ ಕಳ್ಳರನ್ನು ತರಲಾಗಲಿಲ್ಲವೆಂದು ಹೇಳಿ ಮನೆಗೆ ಬಂದನು. ಮರುದಿನ ತಳಾರನು ಸಭೆಗೆ ಬಂದು ಕಳ್ಳರನ್ನು ಹಿಡಿತರದೆ ಬಂದುದಕ್ಕೆ ಕಾರಣವೇನೆಂದು ಕೇಳಿದ ರಾಯನಿಗೆ—ಅವನು ಬರುತ್ತಿರುವಂದು ದಾರಿಯಲ್ಲಿ ಬೆನ್ನು ಮುರಿದು ಕೈಕೊರಡುಗಳು ಹಿಡಿದುಕೊಂಡು ತೆವಳಿ ಬರುತ್ತಿದ್ದ ಒಬ್ಬ ಕುಂಬಾರನನ್ನು ಕಂಡು ಜನರು ಗುಂಪುಗೂಡಿ ನಿನಗೀಗತಿ ಹೇಗೆ ಬಂದಿತೆಂದು ಕೇಳಿದರು. ಅದಕ್ಕೆ ಅವನು—ಬಹುಕಾಲದಿಂದ ನಾನು ಮಡಕೆಗಳನ್ನು ಮಾಡಿ ಬೇಕಾದಂತೆ ಕೊಟ್ಟು ಹಣವಂತನಾಗಿ ಬಾಳಿದೆನು. ಒಂದುದಿನ ಮಣ್ಣನ್ನು ಅಗೆದುತರಲಿಕ್ಕೆ ಹೋಗಿ ಅಗೆಯುತ್ತಿರಲು ಹಳ್ಳದಲ್ಲಿದ್ದ ನನ್ನ ಬೆನ್ನ ಮೇಲೆ ದೊಡ್ಡ ಹೆಂಟೆ ಜಾರಿಬಿದ್ದು ಬೆನ್ನು ಮುರಿಯಿತು. ಅಂದಿನಿಂದ ನನಗೆ ಮಣ್ಣಿನ ಕೆಲಸವು ಹೋಗಿ ಜೀವನಕ್ಕೆ ಪ್ರಯಾಸವಾಗಿದೆ ಎಂದನು. ಈ ಕಥೆಯನ್ನು ಕೇಳುತ್ತಿದ್ದುದರಿಂದ ತಡವಾಯ್ತೆನ್ನಲು ನಾಳೆ ಮುಂಜಾನೆ ತಪ್ಪದೆ ಕಳ್ಳರನ್ನು ತರಬೇಕೆಂದು ತಳಾರನನ್ನು ಕಳುಹಿದನು.

ಮೂರನೆಯದಿನ ತಳವಾರನು ಕಳ್ಳರನ್ನು ಹಿಡಿತರದೆ ಇದ್ದುದಕ್ಕೆ ಕಥೆಯನ್ನು ಹೇಳಿದನು. ಅದೇನೆಂದರೆ—ಒಂದು ಅಡವಿಯಲ್ಲಿ ಒಂದು ಜಿಂಕೆ ತನ್ನ ಮರಿಗಳ ಜೊತೆಯಲ್ಲಿ ಬರುತ್ತಿರಲು ಮುಂದೆ ಕಾಡಕಿಚ್ಚು, ಹಿಂದೆ ಬೀಸಿದ ಬಲೆ, ಬಡಿಕೋಲು ಮುಂತಾದ ಸನ್ನಾಹದಿಂದ ಓಡಿಸಿಕೊಂಡು ಬರುತ್ತಿದ್ದ ಬೇಡರು ಹೀಗೆ ಎತ್ತ ನೋಡಿದರೂ ಸಂಕಟ, ಇದನ್ನು ಪರಿಹರಿಸುವವರಿಲ್ಲವೆಂದು ಚಿಂತಿಸುತ್ತಿದ್ದ ಜಿಂಕೆಯ ಕಥೆಯನ್ನು ಹೇಳಿ ಹೋದನು.

ನಾಲ್ಕನೆಯ ದಿನ ಹೇಳಿದ ಕಥೆ:—ಪಾಂಚಾಲದೇಶದ ಶಕ್ತಿನಗರವೆಂಬ ನಗರದ ಅರಸನು ಪರಮಜೈನನಾದ ಸುಧರ್ಮನೆಂಬವನು, ರಾಣಿ ಜಿನದತ್ತೆ. ಒಮ್ಮೆ ಪರಮಂಡಲವನ್ನು ಸಾಧಿಸಲಿಕ್ಕೆ ಹೋಗಿ ರಾಯನು ಜಯವನ್ನು ಹೊಂದಿ ಮರಳಿ ಊರಿಗೆ ಬರುವಾಗ ಕೋಟೆ ದೊಪ್ಪನೆ ಬೀಳಲು ಅಪಶಕುನವಾದುದರಿಂದ ಊರೊಳಗೆ ಹೋಗಬಾರದೆಂದು ಜನರು ಹೇಳಿದರು. ಮತ್ತೆ ಕೋಟೆಯನ್ನು ಸರಿಮಾಡಿ ಪ್ರವೇಶಮಾಡುವ ಕಾಲಕ್ಕೆ ಮೊದಲಿನಂತೆ ಕೋಟೆ ಬಿದ್ದಿತು. ಹೀಗೆ ಮೂರುದಿನ ಬೀಳಲು, ಜಯದೇವನೆಂಬ ಮಂತ್ರಿ ಚಾರ್ವಾಕನಾದುದರಿಂದ ಇದಕ್ಕೆ ನರಬಲಿಯನ್ನು ಕೊಟ್ಟಲ್ಲದೆ ಕೋಟೆ ನಿಲ್ಲುವುದಿಲ್ಲವೆಂದು ಅರಸನಿಗೆ ಹೇಳಿದನು. ಅರಸು ಒಪ್ಪದೆ ಹೋದುದರಿಂದ ನೀವಾಗಿ ಮಾಡಿಸಬೇಕಾಗಿಲ್ಲ, ನಾವೇ ಮಾಡಿಸುತ್ತೇವೆ ಎಂದು ಹದಿಕೆಯೆತ್ತಿ ಊರೊಳಗೆ ಸಾರಿ ಕೊನೆಗೆ ಒಬ್ಬ ಬಡಬ್ರಾಹ್ಮಣನ ಮಗನನ್ನು ತಂದರು. ಆ ಹುಡುಗನು ನಗುತ್ತ ಬರುವುದನ್ನು ಅರಸನು ಕಂಡಿದೇಕೆ ಇನ್ನು ತುಸು ಹೊತ್ತಿಗೆ ಮಾರಿಗೆ ತುತ್ತಾಗುತ್ತೀಯೆ ನಗು

ವುದೇಕೆ ಎನ್ನಲು ಆ ಹುಡುಗನು ಸ್ವಾಮಿ, ಮಕ್ಕಳಿಗೆ ತಂದೆ, ತಾಯಿ, ಅರಸ ಈ ಮೂವರೂ ಮುಳಿದು ಕೊಲ್ಲಲಿಕ್ಕೆ ಹೇಸದಿದ್ದರೆ, ದೇವರೇ ಗತಿಯೆಂದು ಹೇಳಿದನು. ಈ ಆಶ್ಚರ್ಯವನ್ನು ಕಂಡು ನಗರದೇವತೆಗಳು ಹೆದರಿ ಬಂದು ಕೋಟೆಯನ್ನು ನಿರ್ಮಿಸಿ ಹೂಮಳೆಗರೆದು ನಾನಾಭರಣಗಳಿಂದಲಂಕರಿಸಿ ಹೊಗಳಿ ಹೋದರು.

ಐದನೆಯ ದಿನದಲ್ಲಿ ತಳಾರನು ಹೇಳಿದ ಕಥೆ:—ಅವಂತೀ ವಿಷಯದ ಉಜ್ಜಯಿನಿಯೆಂಬ ಪುರದಲ್ಲಿ ಯಶೋಭದ್ರನೆಂದು ಪ್ರಖ್ಯಾತನಾದ ವೈಶ್ಯನು ಒಂದುದಿನ ವ್ಯಾಪಾರಕ್ಕೆ ಹೊರಡುವೆನೆಂದು ಹೊರಟು ಮನೆಮೊದಲಾದುವನ್ನು ಜೋಪಾನವಾಗಿ ನೋಡಿಕೊಳ್ಳೆಂದು ತಾಯಿಗೆ ಹೇಳಿ ಹೋಗಿ ಊರಹೊರಗೆ ಬೀಡುಬಿಟ್ಟಿದ್ದನು. ಮನೆಯಲ್ಲಿ ಉಂಗುರವನ್ನು ಮರೆತು ಬಂದೆನೆಂದು ರಾತ್ರಿ ಮರಳಿ ಮನೆಗೆ ಬಂದು ಬಾಗಿಲನ್ನು ತೆಗೆಯೆಂದು ಕೂಗಿದನು. ಅಷ್ಟರೊಳಗೆ ಇವನ ತಾಯಿ ಒಬ್ಬ ಜಾರನೊಡನೆ ಕ್ರೀಡಿಸುತ್ತಿದ್ದವಳು, ಅವನನ್ನು ಮರೆಗೊಳಿಸಿ ಬಂದು ಬಾಗಿಲನ್ನು ತೆಗೆದಳು. ಒಳಹೊಕ್ಕು ಅಂಗಳದಲ್ಲಿ ಮರದ ಮೇಲೆ ಇರುವ ಒಲ್ಲಿಯನ್ನು ನೋಡಿ ಸಂದೇಹವು ನಿವೃತ್ತಿಯಾಗಿ ಜೋಪಾನಮಾಡೆಂದು ಹೇಳಿದುದಕ್ಕೆ ಚೆನ್ನಾಗಿ ಮಾಡಿದೆ ಎಂದು ಹೇಳಿ ಹೋದನು.

ಆರನೆಯ ದಿನದ ಕಥೆ:—ಪಾಟಲೀಪುತ್ರಪುರದ ಅರಸ ಸುಭದ್ರನೆಂಬವನು ಒಂದು ದಿನ ನಂದನವನಕ್ಕೆ ಹೋಗಲು, ವನಪಾಲಕನು ಕೋತಿಗಳೆಲ್ಲವೂ ಕೂಡಿಕೊಂಡು ವನದೊಳಗಿರುವ ಹಣ್ಣುಗಳೆಲ್ಲವನ್ನೂ ತಿಂದು ಹಾಕಿ ತಾಳೆಯ ಮರದ ಕಳ್ಳನ್ನು ಕುಡಿದು ಸೊಕ್ಕಿನಿಂದ ವನವೆಲ್ಲವನ್ನೂ ಹಾಳುಮಾಡುತ್ತಿವೆ ಎಂದನು. ಆಗ ಅರಮನೆಯಲ್ಲಿ ಕಟ್ಟಿದ್ದ ಒಂದು ಮುದಿಕೋತಿಯನ್ನು ವನಕ್ಕೆ ಹಿಡಿತರಿಸಿ, ಈ ಚಿಕ್ಕ ಕೋತಿಗಳಿಗೆ ಬುದ್ಧಿ ಹೇಳಿಕೊಂಡು ವನವನ್ನು ಕಾಪಾಡಿಕೊಂಡಿರು ಎಂದು ಅರಸನು ಹೇಳಿ ಹೋದನು. ಆ ಮುದಿಕೋಡಗವೂ ಆ ದುಷ್ಟಕಪಿಗಳೊಡನೆ ಸೇರಿ ವನವನ್ನು ಲಯಮಾಡಿದುದನ್ನು ಕಂಡು ಅರಸನಿಗೆ ತಿಳಿಸಿದನು. ಕೆಟ್ಟಗುಣವೂ ದುಷ್ಟಬುದ್ಧಿಯೂ ಇರುವ ಅರಸರ ಆಳಿಕೆಯಲ್ಲಿ ಆರೂ ಬದುಕಲಾರರೆಂದು ವನಪಾಲಕನು ಚಿಂತಿಸುತ್ತ ಹೋದನು ಎಂಬ ಕಥೆಯನ್ನು ಕೇಳುತ್ತಿದ್ದುದರಿಂದ ಕಳ್ಳರನ್ನು ಹಿಡಿತರಲಾಗಲಿಲ್ಲವೆಂದು ತಳಾರ ಯಮದಂಡನು ಹೇಳಿ ಎಂದಿನಂತೆ ಮನೆಗೆ ಹೋದನು.

ಏಳನೆಯ ದಿನದ ಕಥೆ:—ಪಾಟಲಿಯೆಂಬ ನಗರದಲ್ಲಿ ಅರಸ ವಸುಪಾಲ, ಮಂತ್ರಿ ಭಾರತೀಭೂಷಣ. ಇವರಿಬ್ಬರೂ ಕವಿಗಳಾಗಿದ್ದುದರಿಂದ ಅರಸನು ಒಮ್ಮೆ ಮಾಡಿದ ಕವಿತ್ವದಲ್ಲಿ ತಪ್ಪುಂಟೆಂದು ಮಂತ್ರಿ ಹೇಳಿದುದಕ್ಕೆ ಕೋಪಗೊಂಡು ಅವನನ್ನು ಕೈಕಾಲ ಕಟ್ಟಿ ಹರಿವ ಹೊಳೆಯಲ್ಲಿ ಹಾಕಿಸಿದನು. ದೈವವಶದಿಂದ ಅವನು ಉರುಳಿಕೊಂಡು ಒಂದು ಮರಳತಿಟ್ಟಿಗೆ ಬರಲು ಅದನ್ನು ಕಂಡು ಪುರಜನರು ನಿರ್ದೋಷಿಯಾದವನನ್ನು ಹೀಗೆ ಮಾಡಬಹುದೇ ಎಂದು ಹೇಳಿದುದನ್ನು ಕೇಳಿ ಅಸರಸು ಅವನನ್ನು ಕಂಡು ಮಾತಾಡಿಸಲು ಇದೆಲ್ಲವೂ ನನ್ನ ಪೂರ್ವ ಕರ್ಮಫಲವೆಂದು ಹೇಳಿದನು. ಆ ಬಳಿಕ ಅವನನ್ನು ಹೊರಗೆ ತೆಗೆಯಿಸಿ ಮರ್ಯಾದೆಮಾಡಿ ಮುಂದಿದ್ದ ಪದವಿಯನ್ನು ಕೊಟ್ಟನು.

ಅದರಂತೆ ಉತ್ತಮರ ಕೋಪವೆಂಬುದು ಅತಿ ಕ್ಷಣಿಕವಾದುದು—ಎಂಬ ಕಥೆಯನ್ನು ಕೇಳುತ್ತಿದ್ದೆನಾದುದರಿಂದ ಕಳ್ಳರನ್ನು ಹಿಡಿತರಲಿಲ್ಲವೆಂದನು.

ಮರುದಿನ ಯಮದಂಡನು ಈ ಅರಸನಿಗೆ ಎಷ್ಟು ವಿಧವಾಗಿ ನಾನು ನಯನೀತಿಯನ್ನು ಹೇಳಿದರೂ ಒಡೆದುಹೋದ ಅವನ ಮನಸ್ಸನ್ನು ಸರಿಮಾಡಲಾಗುವುದಿಲ್ಲ. ಇದರಿಂದ ಅವನ ಅರಸುತನಕ್ಕೆ ಕೇಡು ಸಂಭವಿಸುವುದೆಂದು ಚಿಂತಿಸುತ್ತ ಸಭೆಗೆ ಬಂದನು. ಅರಸನು ಇಂದಿಗೆ ನಿನಗೆ ಕೊಟ್ಟಿದ್ದ ಅವಧಿ ಮುಗಿಯಿತು. ಕಳ್ಳರನ್ನು ಹಿಡಿತರುವೆನೆಂದು ಮೋಸಮಾಡುತ್ತಿರುವೆ ಎಂದು ಹೇಳಿ ಸಭೆಯಲ್ಲಿ ನೆರೆದಿದ್ದ ಜನರಿಗೆ ಇವನು ಪರಮ ದ್ರೋಹಿಯಾದುದರಿಂದ ಇವನಿಗೆ ತಕ್ಕ ಶಿಕ್ಷೆಮಾಡದೆ ಬಿಡುವುದಿಲ್ಲವೆಂದನು. ಆಗ ಯಮದಂಡನು ಸಭೆಗೆ ಕೈಮುಗಿದು ಕಳ್ಳರನ್ನು ಈ ಸಭಾಮಧ್ಯದಲ್ಲಿ ತಂದರೆ ಅವರಿಗಾಜ್ಞೆಯನ್ನು ರಾಜನು ಮಾಡಿಸದಿದ್ದರೆ ನೀವಾದರೂ ಬಲಾತ್ಕಾರದಿಂದ ಮಾಡಿಸಬೇಕೆಂದು ಹೇಳಿ ತನ್ನ ಮಡಿಲಲ್ಲಿ ಇಟ್ಟಿದ್ದ ಹಾವುಗೆ, ಉಂಗುರ, ಜನಿವಾರಗಳನ್ನು ತೆಗೆದು ಹೊರಗಿಕ್ಕಿ ಇವುಗಳಿಂದ ಕಳ್ಳರನ್ನು ಹಿಂಜರಿಯದೆ ಹಿಡಿದು ವಿಚಾರಣೆ ಮಾಡಬೇಕೆಂದನು. ಆಗ ಸಭೆಯೆಲ್ಲವೂ ಹಾವುಗೆಯಿಂದ ಅರಸನೂ, ಉಂಗುರದಿಂದ ಮಂತ್ರಿಯೂ, ಜನಿವಾರದಿಂದ ಪುರೋಹಿತನೂ ಈ ಮೂವರೂ ಚೋರರೆಂದು ನಿರ್ಣಯಿಸಿ, ಬಲಿಷ್ಠನಾದ ಈ ಯಮದಂಡನನ್ನು ಅವ ವಿಧದಿಂದಾದರೂ ಶಿಕ್ಷೆಗೊಳಗಾಗಿಸಬೇಕೆಂದು ಮಾಡಿದ ಕಪಟವೆಂದು ತಿಳಿದು ಆ ಮೂವರನ್ನೂ ಆ ಕ್ಷಣವೇ ಊರಿಂದ ಹೊರಕ್ಕೆ ಹೊರಡಿಸಿ ಅವರ ಮಕ್ಕಳಿಗೆ ಅವರ ಪದವಿಯನ್ನು ಕೊಟ್ಟು ಪ್ರಜೆಗಳೆಲ್ಲರೂ ಒಮ್ಮನವಾಗಿ ಯಮದಂಡನನ್ನು ಸನ್ಮಾನಿಸಿದರು.

ಎಂಬ ಕಥೆಯನ್ನು ಮಂತ್ರಿ ಹೇಳಲು ಕೇಳಿ ಉದಿತೋದಯಮಹಾರಾಯನು ಅವನ ಮಾತಿಗೆ ಮೆಚ್ಚಿ, ನಿಜ, ಸುಯೋಧನನು ಕುಮಂತ್ರಿಯ ಉಪದೇಶದಿಂದ ಮಹದೈಶ್ವರ್ಯವನ್ನು ನೀಗಾಡಿದನು. ಉತ್ತಮನಾದ ಸಚಿವನ ಮಾತನ್ನು ಕೇಳುವ ಅರಸನ ಕಾರ್ಯವು ಕೈಗೂಡುವುದು. ಆದರೆ ಈ ಬೇಸರವನ್ನು ಹೇಗೆ ಕಳೆವುದೆಂದು ಕೇಳಲು ಅಮರಾವತಿಯನ್ನೂ ಮೀರಿಸಿರುವ ನಮ್ಮೀ ರಾಜಧಾನಿಯಲ್ಲಿ ಈ ಬೆಳದಿಂಗಳಲ್ಲಿ ವಿಹರಿಸುತ್ತ ಹೋದರೆ ಏನಾದರೂ ಒಂದು ಆಶ್ಚರ್ಯವನ್ನು ಕಾಣಬಹುದೆಂದು ಒಡಂಬಡಿಸಿ ಅರಮನೆಯನ್ನು ಬಿಟ್ಟು ರಾಜಮಾರ್ಗವಾಗಿ ನಡೆದುಬರುತ್ತಿದ್ದರು.

## ಮೂರನೆಯ ಸಂಧಿ— ಚಂದ್ರಿಕಾವಿಹರಣ ವರ್ಣನೆ.

ಅರಸನೂ ಮಂತ್ರಿಯೂ ವಿನೋದಗಳನ್ನು ನೋಡುತ್ತ ಬರುತ್ತಿರಲು ಅವರ ಮುಂದೊಬ್ಬ ಛಾಯಾಪುರುಷನು ಬರುತ್ತಿದ್ದುದನ್ನು ಕಂಡಿದೇನೆಂದು ಅರಸನು ಕೇಳಿದನು. ಅದೃಶ್ಯಾಕರಣವನ್ನು ಕಲ್ತ ಸುವರ್ಣಖುರನೆಂಬ ಅಂಜನಚೋರನು ಬಹು ಕಾಲದಿಂದ ನಮ್ಮ ನಗರಿಯಲ್ಲಿರುವನು ಎಂದು ಮಂತ್ರಿ ಹೇಳಿದನು. ಅಷ್ಟರೊಳಗೆ ಆ ಛಾಯಾಪುರುಷನು ಅರ್ಹದ್ದಾಸನೆಂಬ ವೈಶ್ಯೋತ್ತಮನ ಮನೆಯ ಮುಂದಣ ಆಲದ ಮರದ ನೆಳಲೊಳಗೆ ಅಡಗಿಕೊಂಡನು.

ಆಗ ಅರ್ಹದ್ದಾಸನು ತನ್ನ ಎಂಟುಮಂದಿ ಪತ್ನಿಯರು ಮನೆಯ ಒಳಗಿನ ಪ್ರಾಕಾರ ದಲ್ಲಿರಲು, ಊರ ಸ್ತ್ರೀವೃಂದವೆಲ್ಲವೂ ನಂದನವನಕ್ಕೆ ಹೋಗಿರುವುದು. ನೀವೂ ರಾಜಾ ಜ್ಞೆಯಂತೆ ಇನ್ನು ತಡೆಮಾಡದೆ ಹೋದರೆ ನಾನು ಈ ಚೈತ್ಯಾಲಯದಲ್ಲಿ ಜಾಗರವಿರು ತ್ತೇನೆ. ಇಲ್ಲದಿದ್ದರೆ ಅಪರಾಧವಾಗುವುದು; ಎಂದನು. ಅದಕ್ಕವರು ಈ ನಂದೀಶ್ವರದ ನೋಂಪಿಗೆ ಅಷ್ಟೋಪವಾಸವನ್ನು ಮಾಡಿದ ನಾವು ಜಾಗರವಿರದೆ ಈ ಪುಣ್ಯತಿಥಿಯಲ್ಲಿ ನಂದನಕ್ಕೆ ಹೋದರೆ ಪಾಪವಾಗುವದು. ಅದರಿಂದ ಅರಸು ಮಾಡುವ್ವದನ್ನು ಮಾಡಲಿ. ನಾವೂ ನಿಮ್ಮೊಡನೆ ಜಾಗರವಿರುತ್ತೇವೆ, ಎಂದರು. ಅವನ ಆ ಮಾತಿಗೆ ಮೆಚ್ಚಿ ಸಮೀಪ ದಲ್ಲಿದ್ದ ಜಿನಾಲಯಕ್ಕೆ ಬಂದು ಸಾಷ್ಟಾಂಗವೆರಗಿ, ಕಲಶಸ್ಥಾಪನೆಯನ್ನು ಮಾಡಿ, ಪಂಚಾಭಿಷೇಕವನ್ನು ಮಾಡಿ, ಅರ್ಚನೆಯನ್ನು ಮಾಡಿದ ಬಳಿಕ ನಿಮಗೆ ಈ ಜಿನಧರ್ಮ ದಲ್ಲಿ ಸಮ್ಯಕ್ತ್ವವು ಒದಗಿದುದು ಹೇಗೆಂದು ತಿಳಿಸಿರಿ ಎಂದು ಪತ್ನಿಯರಿಗೆ ಹೇಳಲು, ಅವರು ನಿಮಗೆ ಸಮ್ಯಕ್ತ್ವವಾದ ವೃತ್ತಾಂತವನ್ನು ಮೊದಲು ಹೇಳಿರಿ. ಆ ಮೇಲೆ ನಾವು ನಮ್ಮ ವೃತ್ತಾಂತವನ್ನು ಹೇಳುವೆವು ಎನ್ನಲು ಅರ್ಹದ್ದಾಸನು ಹೇಳತೊಡಗಿದನು.

## ನಾಲ್ಕನೆಯ ಸಂಧಿ— ಅರ್ಹದ್ದಾಸನು ಹೇಳಿದ ಕಥೆ.

ಈ ಮಧುರಾನಗರಿಯಲ್ಲಿ ಈ ಉದಿತೋದಯಮಹಾರಾಯನ ತಂದೆ ಪದ್ಮೋ ದಯ ಮಹಾರಾಯನೂ ಜಂಭಾವತೀ ಎಂಬ ರಾಣಿಯೂ, ಈ ಸುಬುದ್ಧಿಮಂತ್ರಿಯ ತಂದೆ ಸಂಭಿನ್ನಮತಿಯೆಂಬ ಮಂತ್ರಿಯೂ ಅವನ ಹೆಂಡತಿ ಸುಪ್ರಭೆಯೆಂಬಳೂ ಇರುತ್ತಿ ರುವ ಕಾಲದಲ್ಲಿ ಅಂಜನಾದಿ ವಿದ್ಯೆಗಳಲ್ಲಿ ರೂಪ್ಯಖುರನು ಪ್ರಸಿದ್ಧನಾಗಿದ್ದನು. ಅವನ ಹೆಂಡತಿ ರೂಪ್ಯಖುರೆ. ಇವನು ಸಪ್ತವ್ಯಸನಗಳಲ್ಲಿ ಆಚರಿಸುತ್ತಿದ್ದು ಇದ್ದ ಹಣವನ್ನು ಜೂಜಾಡಿ ಸೋತು ಬಹಳ ಹಸಿವಿನಿಂದ ಮನೆಗೆ ಹೋಗಿ ಊಟಮಾಡಬೇಕೆಂದು ಬರು ತ್ತಿರುವಾಗ ಅರಮನೆಯ ಬಾಗಿಲಲ್ಲಿ ಪಂಚವಿಧ ಭಕ್ಷ್ಯಪಾಕದ ಪರಿಮಳವುಳ್ಳ ಗಾಳಿಯ ನ್ನು ವಾಸಿಸುತ್ತ ಅದೃಶ್ಯಾಕರಣದಿಂದ ಆರೂ ಅರಿಯದಂತೆ ಅರಮನೆಯೊಳಗೆ ಹೊಕ್ಕನು. ಆಗ ಅರಸನಿಗೆ ಬಡಿಸುತ್ತಿರುವಂದು ತಾನೂ ಒಂದು ಹೊರೆಯಲ್ಲಿ ಕುಕ್ಕರಿಸಿ ಹೊಟ್ಟೆ ಯೊಡೆವವರೆಗೂ ತಿಂದನು. ಒಂದುದಿನ ಹೀಗಾದಮೇಲೆ ರುಚಿಯನ್ನು ಕಂಡು ದಿನಂಪ್ರತಿ ಹಾಗೆ ಮಾಡುತ್ತಿರಲು ಅರಸನ ಮೈ ಬಡವಾಯ್ತು. ಇದನ್ನು ನೋಡಿ ಮಂತ್ರಿ ಅಡಿಗೆ ಯವರನ್ನೂ ಪರಿಚಾರಕರನ್ನೂ ವಿಚಾರಿಸಿಕೇಳಲು ಅವರಲ್ಲಿ ತಪ್ಪಿಲ್ಲವೆಂದು ತಿಳಿದು ವೈದ್ಯ ರನ್ನು ಕೇಳಿದನು. ಅದಕ್ಕೂ ಸರಿಯಾದ ಕಾರಣವು ತಿಳಿಯದೆ ಕೊನೆಗೆ ಇದು ಅದೃ ಶ್ಯಾಕರಣ ವಿದ್ಯೆಯನ್ನು ಕಲ್ತ ರೂಪ್ಯಖುರನ ಕೆಲಸವೆಂದೂಹಿಸಿ ಊಟದ ವೇಳೆಗೆ ಎಕ್ಕದ ಮುಳ್ಳುಗಳನ್ನು ಹರಡಿ ಘಟದಲ್ಲಿ ಕೆಂಡವನ್ನು ಹಾಕಿ ಜಗಜಟ್ಟಿಗಳನ್ನು ಮರೆ ಯೊಳಗಿರಿಸಲು, ರೂಪ್ಯಖುರನು ಎಂದಿನ ಹಾಗೆ ಬಂದು ಕಾಲಿಡುವಾಗ ಉರಿ ತಗಲಿ ಅವನ ಕಣ್ಣಂಜನವು ಕರಗಿಹೋಗಿ ಸಿಕ್ಕಿಬಿದ್ದನು. ಆಗ ಅವನನ್ನು ಹಿಡಿದು ಬಯ್ದು ಒದೆದು ಗುದ್ದಿ ಹೆಡಕಟ್ಟುಕಟ್ಟಿ ಎಲ್ಲರೂ ಅರಿವಂತೆ ತಂದು ಒಂದು ಕಡೆ ನಿಲ್ಲಿಸಿದರು. ಆಗ ಅವನನ್ನು ಕಂಡ ಜನರು ಕೈಪರೆಗುಟ್ಟಿ ನಕ್ಕು ಈ ಲಂಡನಿಗೆ ತಕ್ಕ ಪ್ರಾಯಶ್ಚಿತ್ತ ವಾಯ್ತು ಎಂದು ತಮ್ಮೊಳಗೆ ಒಂದು ಕಥೆಯನ್ನು ಹೇಳಿದರು.

ಅದಾವುದೆಂದರೆ:—ಒಂದು ನಗರಿಯಲ್ಲಿ ಒಬ್ಬ ಅರಸನ ಮಗಳು ಬಹಳ ಚೆಲುವೆ, ವಿದ್ಯಾಮಂಟಪದಲ್ಲಿ ಓದುತ್ತಿರಲು ಕಂಡು ಒಬ್ಬ ಭಿಕ್ಷುಕ ಅವಳನ್ನು ಹೇಗಾದರೂ ಕೊಂಡು ಹೋಗುವೆನೆಂದು ಅರಸನ ಬಳಿಗೆ ಒಂದು ಸಾಮುದ್ರಿಕಶಾಸ್ತ್ರ, ನಷ್ಟಮುಷ್ಟಿ ಚಿಂತನೆಯೆಲ್ಲವನ್ನೂ ಬಲ್ಲೆನೆಂದು ಹೇಳಲು, ಅರಸನು ಮನೆಯ ಮಕ್ಕಳೆಲ್ಲರನ್ನೂ ಕರೆಯಿಸಿದನು. ಈ ತಿರಿಕನು ತನಗೆ ಬೇಡದವರ ಕೈಯನ್ನು ನೋಡಿ ಚನ್ನಾಗಿದೆಯೆಂದು ಒಳ್ಳೆಯ ಮಾತುಗಳನ್ನು ಹೇಳುತ್ತ ಕೊನೆಗೆ ತನಗೆ ಬೇಕೆಂದಿದ್ದ ಹುಡುಗಿಯ ಕೈಯನ್ನು ನೋಡಿ ಇವಳ ಕೈ ಅಷ್ಟು ಒಳ್ಳೆಯದಲ್ಲ. ಸನ್ನಿಧಾನದಲ್ಲಿ ಅರಿಕೆಮಾಡಲಿಕ್ಕೆ ಅಂಜುವೆನೆಂದನು. ಅದಕ್ಕೆ ಅರಸನು ನಿಮಗೇಕೆ ಭಯ ಇದ್ದುದನ್ನು ಹೇಳಿ ಎನಲು ಇವಳು ಹುಟ್ಟಿದ ಮನೆಯೂ ಹೊಕ್ಕಮನೆಯೂ ಇವಳು ಮೈನೆರೆವ ವೇಳೆಗೆ ಹಾಳಾಗುತ್ತವೆ ಎಂದನು. ಅದಕ್ಕೆ ಅಂಜಿ ಅರಸನು ಇದಕ್ಕೆ ಪರಿಹಾರವೇನಾದರೂ ಇದ್ದರೆ ಹೇಳಿ ಎನಲು, ಒಂದು ಮಂದಾಸಿನೊಳಗಿಟ್ಟು ಇವಳನ್ನು ಹರಿಯುತ್ತಿರುವ ಗಂಗೆಯಲ್ಲಿ ಮುಂದಿನ ಅಮಾವಾಸ್ಯೆಗೆ ಬಿಟ್ಟು ಬಿಡಿ ಎಂದು ಹೇಳಿ ಹೋದನು. ಆಗ ಆ ಕುರಿತ ಸಮಯಕ್ಕೆ ಸರಿಯಾಗಿ ಆ ಊರಿಗೆ ಎರಡುಗಾವುದ ದೂರದಲ್ಲಿ ಬರುತ್ತಿರುವ ಹೊಳೆಯ ದಡದಲ್ಲಿ ಕೂತು ಭಿಕ್ಷುಕನು ಕಾದುಕೊಂಡಿದ್ದನು. ನಡುವಣ ದಾರಿಯಲ್ಲಿ ಬೇಟೆಯಾಡಿ ಬಳಲಿ ಬಾಯಾರಿಕೆಯನ್ನು ತೀರಿಸಲಿಕ್ಕೆ ಹೊಳೆಗೆ ಬಂದ ಒಬ್ಬ ಅರಸು ಮಗನು ಆ ಮಂದಾಸನ್ನು ನೋಡಿ ಅದರೊಳಗಿದ್ದ ಹೆಣ್ಣನ್ನು ತೆಗೆದುಕೊಂಡು, ಮಂದಾಸಿನೊಳಗೆ ತಾನು ಹಿಡಿತಂದಿದ್ದ ಹುಲಿಯೊಂದನ್ನು ಅದರೊಳಗಿಟ್ಟು ಮುಚ್ಚುಳವನ್ನು ಹಾಕಿ ಹೊಳೆಗೆ ಬಿಟ್ಟುಹೋದನು. ಭಿಕ್ಷುಕನ ಬಳಿಗೆ ಮಂದಾಸು ಬಂದಕೂಡಲೆ ಆತುರದಿಂದ ಮುಚ್ಚುಳವನ್ನು ತೆಗೆಯಲು, ಅಲ್ಲಿದ್ದ ಹುಲಿ ಅವನನ್ನು ಪರಚಿ ಕೊಂದು ತಿಂದುಹಾಕಿತು. ಎಂಬಂತಾಯ್ತು ಈ ರೂಪ್ಯಖುರನ ಬಾಳೆಂದು ಊರಜನರು ಹೇಳುತ್ತಿರಲು ರಾಜಾಜ್ಞೆಯಿಂದ ಅವನನ್ನು ಶೂಲಕ್ಕೆ ಇಕ್ಕಿ, ಅವನ ಮನೆಯನ್ನು ಮುಟ್ಟುಗೋಲ ಹಾಕಿಸಿ, ಅವನೊಡನೆ ಮಾತನಾಡಿದವರೂ ರಾಜದ್ರೋಹಿಗಳಾಗುವರು, ಅವರಿಗೆ ಶಿಕ್ಷೆ ತಪ್ಪದೆಂದು ಸಾರಿಸಿ, ಕಾವಲನ್ನು ಇಟ್ಟರು. ಅಷ್ಟರೊಳಗೆ ನಮ್ಮ ತಂದೆ ಜಿನದತ್ತ ಸೆಟ್ಟಿ ಜಿನಚಂದ್ರ ಭಟ್ಟಾರಕರನ್ನು ವಂದಿಸಿ ಮರಳಿ ಮನೆಗೆ ಬರುತ್ತಿರುವಾಗ ದಾರಿಯಲ್ಲಿ ಕಟ್ಟಿದ್ದ ಚೋರನನ್ನು ಕಂಡು ಮರುಕದಿಂದ ನಿನಗೇಕೆ ಈ ಗತಿಯಾಯ್ತೆಂದು ಕೇಳಿದನು. ಅವನು ಹೇಳಿದ ನೀತಿ ವೈರಾಗ್ಯದ ಮಾತುಗಳು ಕಿವಿಗೆ ಬಿದ್ದರೂ ಬಾಯಾರಿಕೆ ಬಹಳವಾಗಿದೆ ನನಗೆ ನೀರನ್ನು ತಂದುಕೊಡೆಂದು ಚೋರನು ಕೇಳಿದನು. ರಾಜದ್ರೋಹಿಗೆ ನೀರು ಕೊಡಬಾರದೆಂಬ ಆಕ್ಷೇಪಣೆಗೆ ತಕ್ಕ ಸಮಾಧಾನವನ್ನು ಹೇಳಿದನು. ಆದರೆ ನನಗೆ ಗುರುಗಳು ಉಪದೇಶಮಾಡಿರುವ ಮಂತ್ರವು ನೀರು ತರುವುದರೊಳಗೆ ಮರೆತುಹೋದೀತು ಎಂದುದಕ್ಕೆ ಆ ಮಂತ್ರವನ್ನು ನನಗೆ ಹೇಳು ನಾನು ನೀರುಬರುವವರೆಗೂ ಬಿಡದೆ ಜಪಿಯಿಸುತ್ತಿದ್ದು ನೀನು ಬಂದಮೇಲೆ ನಿನಗೆ ಒಪ್ಪಿಸುವೆನೆಂದನು. ಅದಕ್ಕೆ ಜಿನದತ್ತ ಸೆಟ್ಟಿ ಸಮ್ಮತಿಸಿ ಮಂತ್ರವನ್ನು ಅವನಿಗೆ ಹೇಳಿಕೊಟ್ಟು ಹೋಗಿ ನೀರನ್ನು ತರುವಷ್ಟರೊಳಗೆ ಚೋರನ ಮುಖವು ಪ್ರಸನ್ನವಾಗಿ ಪಂಚಪದದ ಸಾಮರ್ಥ್ಯದಿಂದ ಸಮಾಧಿ

ಮರಣವನ್ನು ಪಡೆದು ಸುರಲೋಕಪ್ರಾಪ್ತಿಯಾಯ್ತು. ಇದನ್ನು ಕಂಡು ಜಿನದತ್ತಸೆಟ್ಟಿ ಮರಳಿ ಚೈತ್ಯಾಲಯಕ್ಕೆ ಬಂದು ಅಂದಿಗೆ ಅನಶನವೆಂದು ಸದ್ಧರ್ಮವನ್ನು ಭಟ್ಟಾರಕರಲ್ಲಿ ಕೇಳುತ್ತಿದ್ದನು

ಇಷ್ಟರೊಳಗೆ ಶೂಲವನ್ನು ಕಾದಿದ್ದ ಭಟರು ರಾಜನಿಗೆ ಜಿನದತ್ತನು ಮಾಡಿದ ಅಪರಾಧವನ್ನು ತಿಳಿಸಿದರು. ಆಗ ರಾಜನು ತನ್ನ ಭಟರನ್ನು ಕಳುಹಲು ಅವರು ಜಿನದತ್ತನ ಮನೆಗೆ ಹೊರಟರು. ಅಷ್ಟರೊಳಗೆ ಒಳ್ಳೆಯ ದೇವಲೋಕದಲ್ಲಿದ್ದ ಚೋರನು ವೃದ್ಧನಂತೆ ಬಂದು ಕೈಯಲ್ಲಿ ದೊಣ್ಣೆಯನ್ನು ಹಿಡಿದು ರಾಜಭಟರನ್ನು ಬೆದರಿಸುತ್ತಿದ್ದನು. ಈ ಸಂಗತಿಯನ್ನು ಕೇಳಿ ಅರಸನು ಚತುರಂಗ ಬಲವನ್ನೂ ಕಳಹಲು, ಅವರೆಲ್ಲರನ್ನೂ ಕೊಂದು ಕೋಪದಿಂದ ಜಿನದತ್ತನಲ್ಲಿಗೆ ಹೋಗಿ ಮೊರೆಯಿಟ್ಟರೆ ಬಿಡುವೆನು ಇಲ್ಲದಿದ್ದರೆ ಕೇಡು ತಪ್ಪದೆನ್ನಲು, ಅರಸನು ಜಿನದತ್ತನಲ್ಲಿಗೆ ಬಂದು ಮರೆಹೊಕ್ಕನು. ಆಗ ಪದ್ಮೋದಯನ ಮೇಲೆ ಕರುಣೆ ಹುಟ್ಟಿ ಅವನನ್ನು ಸಮಾಧಾನಪಡಿಸಿದನು. ಆಗ ರಾಕ್ಷಸರೂಪವನ್ನು ಬಿಟ್ಟು ನಿಜವಾದ ದೇವರೂಪವನ್ನು ಧರಿಯಿಸಿ ಚೋರದೇವನು ಜಿನದತ್ತನಿಗೆ ನಮಸ್ಕರಿಸಿ ಬಳಿಕ ವೀತರಾಗನಿಗೆ ಎರಗಿದನು. ಇದನ್ನು ಕಂಡು ಪದ್ಮೋದಯನು ಇಂತಹ ಅವಿವೇಕವು ದೇವರುಗಳಲ್ಲಿಯೂ ಉಂಟೇ ಎನ್ನಲು ದೇವನಾದ ಚೋರನು ತನಗೆ ಮುಕ್ತಿಮಾರ್ಗವಾದ ಪಂಚಪದವನ್ನು ಉಪದೇಶಮಾಡಿದ ಜಿನದತ್ತನೇ ಗುರುವಾದುದರಿಂದ ಅವನಿಗೆ ಮೊದಲು ವಂದಿಸಿದೆನೆಂದು ಹೇಳಿ, ಜಿನದತ್ತನನ್ನು ಅನೇಕ ವಸ್ತ್ರಾಭರಣ ಕುಸುಮ ಗಂಧಗಳಿಂದ ಸನ್ಮಾನಿಸಲು ಆಶ್ಚರ್ಯಪಂಚಕವಾಯ್ತು. ಇದನ್ನು ಕಂಡು ಪದ್ಮೋದಯನಿಗೆ ವೈರಾಗ್ಯವು ಹುಟ್ಟಿ ಉದಿತೋದಯ ಮಹಾರಾಯನಿಗೆ ರಾಜ್ಯವನ್ನು ಒಪ್ಪಿಸಿ ದೀಕ್ಷೆಯನ್ನು ಧರಿಯಿಸಿದನು. ಹಾಗೆಯೇ ಸಂಭಿನ್ನ ಮತಿಯೂ ಮಗನಾದ ಸುಬುದ್ಧಿಗೆ ತನ್ನ ಪದವಿಯನ್ನು ಕೊಟ್ಟು ದೀಕ್ಷೆಗೊಂಡನು. ಜಂಭಾವತೀದೇವಿ, ಸುಪ್ರಭೆ, ರೂಪ್ಯಖುರೆ, ನಮ್ಮ ತಾಯಿ, ಇವರೂ ದೀಕ್ಷೆಗೊಂಡರು. ಈ ವಿಧದ ಪ್ರತ್ಯಕ್ಷವನ್ನು ಕಂಡು ನನಗೆ ಸಮ್ಯಕ್ತ್ವವಾಯ್ತೆಂದು ಅರ್ಹದ್ದಾಸನು ಹೇಳಲು ಅವನ ಸತಿಯರೆಲ್ಲರೂ ಅದಕ್ಕೆ ಒಡಂಬಟ್ಟರು; ಕಿರಿಯ ಹೆಂಡತಿ ಕುಂದಲತೆಯೆಂಬವಳು ಮಾತ್ರ ಅದಕ್ಕೆ ಒಡಂಬಡಲಿಲ್ಲ. ಇದನ್ನು ಕೇಳುತ್ತಿದ್ದ ಅರಸನು ಮಂತ್ರಿಯೊಡನೆ ಆಗಲಾಗಲಿ, ಈ ಬಾಯಬಡಕಿಯ ಮಾತಿಗೆ ತಕ್ಕ ಶಿಕ್ಷೆ ಮಾಡಿಸಬೇಕು. ಬೆಳಕು ಹರಿಯಲಿ ಎನ್ನುತ್ತಿದ್ದನು. ಆಲದಮರದ ನೆಳಲೊಳಗಡಗಿದ್ದ ಸುವರ್ಣಖುರನು ಇವರ ಮಾತಿಗೆ ಮನಸ್ಸಿನಲ್ಲಿ ಇವರಿಗೆ ಕುಂದಲತೆಯ ಮಾತಿನ ಸ್ವಾರಸ್ಯವು ಅರ್ಹದ್ದಾಸನಿಗೆ ತಿಳಿವಂತೆ ತಿಳಿಯಲಾರದೆಂದು ನಗುತ್ತಿದ್ದನು.

## ಐದನೆಯ ಸಂಧಿ—ಮಿತ್ರಶ್ರೀ ಹೇಳುವ ಕಥೆ.

ಮಗಧದೇಶದಲ್ಲಿ ರಾಜಗೃಹವೆಂಬ ಪಟ್ಟಣವುಂಟು. ಅಲ್ಲಿಗೆ ಸಂಗ್ರಾಮಶೂರನೆಂಬವನು ಅರಸನು; ದೇವಿ ಕನಕಮಾಲೆ. ಆ ಊರಿನಲ್ಲಿ ವೃಷಭದಾಸನೆಂಬ ಸೆಟ್ಟಿ ಜಿನದತ್ತೆಯೆಂಬ ಹೆಂಡತಿಯೊಡಗೂಡಿ ಸುಖದಿಂದಿರುತ್ತಿದ್ದನು. ಆ ಊರ ಸೆಟ್ಟಿಗಳು ಶ್ರೇಯಾಂಸನು ಹಿಂದೆ ಮಾಡಿದ ದಾನವೇನಷ್ಟು ಹೆಚ್ಚಿನದೆಂದು ಹೇಳುವಷ್ಟು ದಾತೃ

ಗಳಾಗಿದ್ದರು. ಹೀಗಿರಲು ಒಂದುದಿನ ನಡುಹಗಲಲ್ಲಿ ಅತಿಥಿಗಳ ಆಗಮನವನ್ನು ನಿರೀ
ಕ್ಷಿಸುತ್ತಿರಲು ಚಂದ್ರಗತಿಯಿಂದ ಒಬ್ಬ ಋಷಿಯುರು ಬರಲು ಜಿನದತ್ತೆ ಕಂಡು ಇದಿರಲ್ಲಿ
ಬಂದು ನಮಸ್ಕರಿಸಿ ಪೂಜಿಸಿ ತಿಷ್ಠಾ ತಿಷ್ಠಾ ಎನಲಾ ಮಾತನ್ನು ಕೇಳಿ ಭಾವರಿ ಮುರಿದು
ಋಷಿಯುರು ಆ ಊರ ಹೊರಗಿದ್ದ ಜಿನಾಲಯಕ್ಕೆ ಹೊರಟುಹೋದರು. ಆಗ ಅವಳು
ವ್ಯಸನಪಡುತ್ತ ಅವರಿದ್ದಲ್ಲಿಗೆ ಹೋಗಿ ದೇವರಿಗೆ ವಂದನೆ ಮಾಡಿದ ಬಳಿಕ ಅವರನ್ನು
ನಿಮಗೆ ಭಾವರಿ ಮುರಿದ ಕಾರಣವೇನೆಂದು ಕೇಳಿದಳು. ಋಷಿಯುರನ್ನು ನಿಲ್ಲಿಸಬೇಕಾ
ದರೆ ಮನೆಯ ಪುರುಷರು ನಿಲ್ಲಿಸಬೇಕು, ಇಲ್ಲದಿದ್ದರೆ ಮಗನೊಡನೆ ಸತಿಯರು ನಿಲ್ಲಿಸ
ಬೇಕು, ಬರಿಯ ಹೆಂಗಸರು ಬಂದು ನಿಲ್ಲಿಸಿದರೆ ನಿಲ್ಲುವುದು ಋಷಿಯರ ಧರ್ಮವಲ್ಲವೆಂದು
ಹೇಳಿದರು. ಆ ಮಾತನ್ನು ಕೇಳಿ ಕಣ್ಣೀರನ್ನು ಸುರಿಸುತ್ತ ಮನೆಗೆ ಬಂದು ಗಂಡನೊಡನೆ
ನಮಗೆ ಎಷ್ಟು ಐಶ್ವರ್ಯವಿದ್ದರೇನಾಯ್ತು, ಮಕ್ಕಳಿಲ್ಲದವರಿಗೆ ಗತಿಯೆಲ್ಲಿಯದು ಎಂದು
ಅತ್ತಳು. ಅದಕ್ಕವನು ನಾವು ಪೂರ್ವಜನ್ಮದಲ್ಲಿ ಸುಕೃತವನ್ನು ಮಾಡದುದರಿಂದ ನಮಗೆ
ಹೀಗಾಗಿರುವುದು; ಅದರಿಂದ ನಾವೀಭ್ರಾಂತನ್ನು ಬಿಡಬೇಕು ಎಂದನು. ಅದಕ್ಕವಳು
ಉಪಾಯದಿಂದ ಅವನಿಗೆ ಮತ್ತೊಬ್ಬ ಹೆಂಡತಿಯನ್ನು ತಂದರೆ ಅವಳಿಗೆ ಮಗನು ಹುಟ್ಟು
ವನೆಂದು ನಂಬಿಸಿ ತನ್ನ ಕಿರಿಯಮ್ಮನಾದ ಬಂಧುಶ್ರೀಯ ಬಳಿಗೆ ಬಂದು ಯುಕ್ತಿಯಿಂದ
ಅವಳ ಮಗಳಾದ ಕನಕಶ್ರೀಯನ್ನು ಕೊಡುವಂತೆ ಮಾತನಾಡಿ ಬಂದು, ಮದುವೆ
ಮಾಡಿಸಿ ಮನೆಯ ಅರಭಾರವೆಲ್ಲವನ್ನೂ ಅವಳಿಗೆ ಒಪ್ಪಿಸಿ ಊಟದ ಹೊತ್ತುಳಿದು ಮಿಕ್ಕ
ಹೊತ್ತೆಲ್ಲವನ್ನೂ ಬಸದಿಯಲ್ಲಿ ದಾನ, ಜಿನಪೂಜೆ, ಜಿನಪುರಾಣ ಮೊದಲಾದುವಲ್ಲಿ ವಿನಿ
ಯೋಗಿಸಿರುತ್ತಿದ್ದಳು. ವೃಷಭದಾಸನೂ ಅವಳೊಡನೆ ಇರುತ್ತ ಸತ್ಕಾಲಕ್ಷೇಪವನ್ನು
ಮಾಡುತ್ತಿದ್ದನು. ಹೀಗಿರಲು ಒಂದು ದಿನ ಕನಕಶ್ರೀ ತನ್ನ ತಾಯಾದ ಬಂಧುಶ್ರೀಯ
ಬಳಿಗೆ ಬಂದಳು. ಸುಖವಾಗಿದ್ದಿಯಾ ಎಂದು ಕೇಳಿದ ತಾಯಿಗೆ ಕನಕಶ್ರೀ ಹೇಳಿದುದು-
ಸವತಿಯ ಮಗಳಿಗೆ ನನ್ನನ್ನು ಸವತಿಯಾಗಿ ಮಾಡಿದೆ. ನಾನಾ ಮನೆ ಹೊಕ್ಕಂದಿನಿಂದ
ಆ ಮುದಿಸೆಟ್ಟಿ ಆ ಬಣಜಿಗಿತ್ತಿಯೊಡನೆ ಬಸದಿಯಲ್ಲಿಯೇ ಬಿದ್ದಿರುವನು. ಮನೆಯ ಕೆಲಸ
ದಲ್ಲಿ ತುಸವಾದರೂ ಬಿಡುವಿಲ್ಲ. ಎಲ್ಲಿಯ ಸುಖ. ಈ ಬಾಳೇಕೆ. ಎಂದು ಹೇಳಿ ಹಲುಬಿ
ದಳು. ಅದಕ್ಕೆ ಬಂಧುಶ್ರೀ ಇದೊಂದು ದೊಡ್ಡ ಕೆಲಸವಲ್ಲ. ನಿನ್ನನ್ನು ಇಷ್ಟು ಬಾಧಿ
ಸುವ ಆ ಬಣಜಿಗಿತ್ತಿಯನ್ನು ಕೊಂದು ನಿನ್ನ ಗಂಡನೊಂದಿಗೆ ನೀನು ಸುಖವಾಗಿ ಬಾಳು
ವಂತೆ ಮಾಡುವೆನು ಚಿಂತಿಸಬೇಡವೆಂದು ಸಮಾಧಾನ ಮಾಡಿ ಕಳುಹಿದಳು. ಬಳಿಕ
ಒಂದುದಿನ ಆ ಬಂಧುಶ್ರೀಯ ಮನೆಗೆ ಹೊಸವೇಷದ ಕಾಪಾಲಿಕನೊಬ್ಬನು ಬಂದು
ಭವತಿ ಭಿಕ್ಷಾಂದೇಹಿ ಎಂದನು. ಅದನ್ನು ಕಂಡು ಬಂಧುಶ್ರೀ ಇವನಿಂದ ನನ್ನ ಕಾರ್ಯವು
ಸಫಲವಾಗುವುದೆಂದೆಣಿಸಿ ಅವನಿಗೆ ತಕ್ಕಂತೆ ಉಪಚಾರವನ್ನು ಮಾಡಿದಳು. ಹೀಗೆ ಕೆಲ
ವು ದಿನಗಳು ಮಾಡುತ್ತಿರಲು ಕಾಪಾಲಿಸಿದ್ಧನು ತಾಯೀ ನೀನು ನನಗೆ ಅನ್ನವನ್ನು ಹಾಕಿ
ಇಷ್ಟು ದಿನವೂ ಸಾಕಿದುದರಿಂದ ನೀನು ತಾಯಲ್ಲದೆ ಬೇರಲ್ಲ. ನಿನಗೇನಾದರೂ ಒಂದು
ಉಪಕಾರವನ್ನು ಮಾಡಬೇಕೆಂದಿರುವೆನು; ನಿನ್ನ ಬಗೆಗೆ ಬಂದುದನ್ನು ಹೇಳು ನನಗೆ
ಬಾರದ ವಿದ್ಯೆಯಿಲ್ಲವೆಂದನು. ಅದಕ್ಕವಳು ನನ್ನ ಮಗಳನ್ನು ಪೀಡಿಸುತ್ತಿರುವ ಆ ಜಿನ

ದತ್ತೆಯನ್ನು ಕೊಲ್ಲಬೇಕೆನ್ನಲು ಇದೇನು ಮಹತ್ಕಾರ್ಯ ಆಗಲಿ ಮಾಡುವೆನೆಂದು ಹೇಳಿ ದನು. ಆ ಬಳಿಕ ಕೃಷ್ಣಪಕ್ಷದ ಚತುರ್ದಶಿಯ ರಾತ್ರಿ ರುದ್ರಭೂಮಿಗೆ ಆ ಕಾಪಾಲಿ ಕನು ಹೋಗಿ, ಅಲ್ಲಿದ್ದ ಒಂದು ಹೆಣದ ಕೈಗೆ ಕತ್ತಿಯನ್ನು ಕೊಟ್ಟು ಕುಳ್ಳಿರಿಸಿ ಪೂಜಿಸಿ ಮಂತ್ರತಂತ್ರಗಳಿಂದ ಆಹ್ವಾನಮಾಡಲು ಒಂದು ಭೇತಾಳವು ಬಂದು ಕತ್ತಿಯನ್ನು ಝಳ ಪಿಸುತ್ತ ಅವನಿದಿರಲ್ಲಿ ನಿಂತು ಕೈಮುಗಿದು ಏನು ಕೆಲಸ ಹೇಳು ಎಂದು ಕೇಳಿತು. ಆಗ ಅವನು ಊರ ಬಸದಿಯಲ್ಲಿರುವ ಕನಕಶ್ರೀಯ ಸವತಿಯಾದ ಜಿನದತ್ತೆಯನ್ನು ಕತ್ತರಿಸಿ ಹಾಕಬೇಕೆಂದು ಹೇಳಿದನು. ಭೇತಾಳವು ಈ ಅಲ್ಪಕಾರ್ಯವನ್ನೇ ನನಗೆ ಹೇಳಿದೆ ಯಲ್ಲಾ ಎಂದು ಚಿಂತಿಸುತ್ತ ಪಂಥವಾಡಿಕೊಂಡು ಬಸದಿಯ ಬಳಿಗೆ ಬರಲು ಅಲ್ಲಿ ಆಪರ್ವತಿಥಿಯುಪವಾಸವನ್ನು ಮಾಡಿ ಜಾಗರವಿದ್ದ ಜಿನದತ್ತೆಯನ್ನು ಕಂಡು ದೂರದಲ್ಲಿ ನಿಂತು ಹತ್ತಿರಕ್ಕೆ ಹೋಗಲಾರದೆ ಅಂಜಿ ಮೂರುಬಾರಿ ಪ್ರದಕ್ಷಿಣೆಯನ್ನು ಮಾಡಿ ರುದ್ರ ಭೂಮಿಗೆ ಮರಳಿ ಬಂದಿತು. ಅದನ್ನು ಕಂಡು ಕಾಪಾಲಿ ಏನು ನಿನ್ನ ಪಂಥದ ಮಾತು ಗಳೇನಾದುವು ಎಂದು ಹೀಯಾಳಿಸಿ ಕಳುಹಿದನು. ಹೀಗೆ ಎರಡು ಮೂರು ರಾತ್ರಿ ಭೇತಾಳನನ್ನು ಕರೆದು ಕಳುಹುತ್ತಿರಲು, ನಾಲ್ಕನೆಯ ರಾತ್ರಿ ಭೇತಾಳನು ಬಂದು ನಿರ್ದೋಷಿಯಾದವಳನ್ನು ಕೊಲ್ಲುವುದು ಅಸಾಧ್ಯ, ನನಗೆ ಆಹುತಿಯನ್ನು ಕೊಡು, ಕೊಡು, ಕೊಡದಿದ್ದರೆ ನಿನ್ನ ತಲೆಯನ್ನು ಈಗಲೇ ಕತ್ತರಿಸಿ ಬಿಡುವೆನೆನ್ನಲು ಕಾಪಾಲಿ, ಜಿನದತ್ತೆ ಕನಕಶ್ರೀಯರೊಳಗೆ ದೋಷಿಯಾದವಳನ್ನು ಕೊಲ್ಲೆಂದು ಹೇಳಿದನು. ಆ ಮಾತನ್ನು ಕೇಳಿ ಅರ್ಭಟಿಸುತ್ತ ಭೇತಾಳನು ಬಂದು ಕನಕಶ್ರೀಯನ್ನು ಕೊಂದು ಬಗಿದು ಹಾಕಿ ರುದ್ರಭೂಮಿಗೆ ಹೋಗಿ ಕಾಪಾಲಿಕನ ಅಪ್ಪಣೆಯನ್ನು ತೆಗೆದುಕೊಂಡು ಹೋಗಿಬಿಟ್ಟಿತು.

ಇತ್ತ ಬೆಳಗಾಗುವುದರೊಳಗೆ ಕಾಪಾಲಿಕನ ತಂತ್ರದಿಂದ ಮಗಳ ಸವತಿ ಸತ್ತಳೋ ಎಂಬುದನ್ನು ನೋಡಬೇಕೆಂದು ಅವಳ ಮನೆಗೆ ಹೋಗಲು ಕಡಿಕಂಡವಾಗಿ ಸತ್ತು ಬಿದ್ದಿದ್ದ ಮಗಳನ್ನು ಕಂಡು ಪಾಪಿ ಜಿನದತ್ತೆ ಮಗಳನ್ನು ಮತ್ಸರದಿಂದ ಕೊಲ್ಲಿಸಿದಳೆಂದು ಹೇಳುತ್ತ ತನ್ನ ಕಾರ್ಯವು ಫಲಿಸದೆ ವಿರೋಧವಾಗಿ ಪರಿಣಮಿಸಿದುದಕ್ಕೆ ವ್ಯಥೆಪಡುತ್ತ ಆ ಹೆಣದ ತೋಲನ್ನು ಹಿಡಿದುಕೊಂಡು ಅರಮನೆಯ ಬಾಗಿಲ್ಗೆ ಬಂದು ಮೊರೆಯಿಟ್ಟಳು. ಆಗ ಅರಸನು ಅವಳ ಸಂಗತಿಯನ್ನು ವಿಚಾರಿಸಿ ವೃಷಭದಾಸನ ಮನೆಯನ್ನು ಮುಟ್ಟು ಗೋಳ ಹಾಕಲಿಕ್ಕೆ ಭಟರನ್ನು ಕಳುಹಿದನು. ಬಂದ ಆ ಭಟರೂ ತಳಾರನೂ ಸ್ತಂಭ ದಂತೆ ಕದಲದೆ ಹೋದರು; ಅರಸಗೆ ಆಸನಕಂಪವಾಯ್ತು. ತಮಗಾದ ಉಪಸರ್ಗವು ಕಳಿವವರೆಗೂ ಸನ್ಯಸನವೆಂದು ವೃಷಭದಾಸನೂ ಜಿನದತ್ತೆಯೂ ನಿಂತರು. ಆಗ ನಗರ ದೇವತೆಗಳು ಬಂದು ಪುರಜನರಿಗೆ ಈ ಪಾಪಕೃತ್ಯವು ಬಂಧುಶ್ರೀಯ ಕೌಟಿಲ್ಯದಿಂದಾ ಯಿತು; ಜಿನದತ್ತೆಯಿಂದ ಎಳ್ಳಷ್ಟು ದೋಷವೂ ಇಲ್ಲ ಎಂದು ಹೇಳಿ ಭೇತಾಳಿಯನು ಹಿಡಿತಂದುವು. ಭೇತಾಳಿ ಶತವೃದ್ಧೆಯಾಗಿ ಬಂದು ತಾನು ಮಾಡಿದುದೆಲ್ಲವನ್ನು ಪುರಜನ ರಿಗೆ ತಿಳಿಸಿ ಬಂಧುಶ್ರೀಯನ್ನು ನಿನ್ನಿಂದ ನನಗೆ ನಗರದೇವತೆಗಳು ಉಬ್ಬಸವಾಡುತ್ತಿವೆ. ಇದ್ದುದನ್ನು ಇದ್ದಂತೆ ಹೇಳೆಂದು ಅರಮನೆಗೆ ಅವಳನ್ನು ಹಿಡಿದೆಳೆತರಲು ಅವಳು ಮುಚ್ಚು

ಮರೆಯಿಲ್ಲದೆ ಎಲ್ಲವನ್ನು ಹೇಳಿದಳು. ಆಗ ಆಶ್ಚರ್ಯಪಂಚಕವಾಯ್ತು. ಬಂಧುಶ್ರೀ ಯನ್ನು ಹುಳಿತ ಕತ್ತೆಯ ಮೇಲೆ ಕುಳ್ಳಿರಿಸಿ ಹೊರಡಿಸಿದರು. ಅರಸನಿದನ್ನು ಕಂಡು ಉಪಸರ್ಗವನ್ನು ಬಿಡಿಸಿ, ಸಮಾಧಿ ಗುಪ್ತಾಚಾರ್ಯರಲ್ಲಿ ಧರ್ಮಶ್ರವಣಾನಂತರ ಸಂಸಾ ರಕ್ಕೆ ಹೇಸಿ, ಮಗನಾದ ಶೂರಸೇನನಿಗೆ ಪಟ್ಟವನ್ನು ಕಟ್ಟಿ ವೃಷಭದಾಸನೇ ಮೊದಲಾದ ಸಾವಿರಾರು ಜನರೊಡನೆ ದೀಕ್ಷೆಯನ್ನು ಧರಿಸಿದನು. ಕನಕಮಾಲಾದೇವಿಯೂ ಜಿನ ದತ್ತೆಯೂ ಇನ್ನೂ ಅನೇಕ ಸ್ತ್ರೀಯರು ಜಿನಮತಿಯರೆಂಬ ಅಜ್ಜಿಕೆಯರಲ್ಲಿ ಸಂಯಮ ವನ್ನು ಪಡೆದರು.

ಇದನ್ನು ಕಂಡು ನನಗೆ ಸಮ್ಯಕ್ತ್ವವೊದಗಿತು, ಎಂದು ಮಿತ್ರಶ್ರೀ ಹೇಳಿದ ಮಾತಿಗೆ ಉಳಿದ ಸ್ತ್ರೀಯರು ಇಚ್ಛಾಮಿ ಇಚ್ಛಾಮಿ ಎಂದರು. ಕುಂದಲತೆ ಇದು ಬರಿಯ ಬಡಾಯಿಯ ಮಾತೆಂದಳು. ಅರ್ಹದ್ದಾಸನು ನಕ್ಕನು. ಅರಸನೂ ಮಂತ್ರಿಯೂ ಈ ಕುಂದಲತೆಗೆ ತಕ್ಕ ಶಿಕ್ಷೆಮಾಡಬೇಕೆಂದೆಣಿಸುತ್ತಿದ್ದರು.

## ಆರನೆಯ ಸಂಧಿ—ಚಂದನಶ್ರೀ ಹೇಳುವ ಕಥೆ.

ಕುರುಜಾಂಗಣದೇಶದ ಹಸ್ತಿನಾಗಪುರಕ್ಕೆ ಅರಸನು ಭೂಭೋಗನು; ಪಟ್ಟದರಸಿ ಭೋಗಾವತಿ. ಅಲ್ಲಿ ಗುಣಪಾಲನೆಂಬ ವೈಶ್ಯೋತ್ತಮನೂ ಅವನ ಹೆಂಡತಿ ಗುಣವಂತೆಯೂ ಇದ್ದರು. ಆ ಊರಲ್ಲಿ ಸೋಮದತ್ತನೆಂಬ ಬ್ರಾಹ್ಮಣೋತ್ತಮನಿದ್ದನು. ಅವನ ಹೆಂಡತಿ ಸೋವಿಲೆ, ಇವರಿಗೆ ಸೋಮೆಯೆಂಬ ಮಗಳು. ಸೋವಿಲೆಗೆ ಉಷ್ಣ ಜ್ವರವು ಬಂದು ತೀರಿಹೋದಳು. ಅದಕ್ಕೆ ಬಹಳವಾಗಿ ದುಃಖಿಸುತ್ತಿದ್ದ ಸೋಮದತ್ತನ ಬಳಿಗೆ ಒಬ್ಬ ಜೈನ ಮುನಿ ಬಂದು ದೇಹಿಗಳಿಗೆ ಆದ ಸಾವಿಗೆ ದುಃಖಿಸುವುದೇಕೆ ಎಂದು ಹೇಳಿ ಹಲವು ಧರ್ಮೋಪದೇಶವನ್ನು ಮಾಡಲು ದುಃಖವನ್ನು ಬಿಟ್ಟು ಶ್ರಾವಕವ್ರತ ವನ್ನು ಹಿಡಿದು ದಾನ ಪೂಜೆ ಶೀಲೋಪವಾಸಗಳನ್ನು ಮಾಡುತ್ತಿದ್ದನು. ಇದನ್ನು ಕಂಡು ಕರುಣದಿಂದ ಗುಣಪಾಲಶೆಟ್ಟಿ ಅವನನ್ನು ತನ್ನ ಮನೆಗೆ ಕರೆತಂದು ಸತ್ಕರಿಸಿ ನೀನು ಬಡವನಾಗಿದ್ದರೂ ಮುಷ್ಟಿಯನ್ನು ಬೇಡಿ ಬಂದುದರಲ್ಲಿ ಮಾಡುತ್ತಿರುವ ನಿನ್ನ ದಾನ ಮೊದಲಾದ ವ್ರತಗಳಿಗೆ ಮೆಚ್ಚಿದೆನು. ನಾನು ನೀನು ಇರುವವರೆಗೂ ನಿನಗೆ ಸಾಕಾಗು ವಷ್ಟು ಕೊಡುವೆನೆಂದು ಹೇಳಲು, ಸೋಮದತ್ತನು ಎಲೈ ಅನಾಥಬಂಧುವೇ ನನಗೆ ಕಾಲವು ಸಮೀಪಿಸಿತು. ನನಗೆ ಇನ್ನೇನೂ ಬೇಡ. ನನ್ನ ಮಗಳಾದ ಈ ಸೋಮೆಯನ್ನು ಪ್ರೀತಿಯಿಂದ ಸಾಕಿ ಉತ್ತಮನಾದವನಿಗೆ ಮದಿವೆ ಮಾಡಿಕೊಡು ಎಂದು ಅವನ ಕೈಗೆ ಒಪ್ಪಿಸಿ, ಸಂಯಮವನ್ನು ಪಡೆದು ಸನ್ಯಸನದಿಂದ ಮುಡಿಪಿ ಸ್ವರ್ಗಕ್ಕೆ ಸಂದನು.

ಇತ್ತ ಸೋಮೆಯನ್ನು ತನ್ನ ಮಗಳೆಂದೇ ಎಣಿಸಿ ಗುಣಪಾಲಶೆಟ್ಟಿಯೂ ಗುಣ ವಂತೆಯೂ ಸಾಕುತ್ತಿರಲು ಅವಳು ಚಂದ್ರಕಲೆಯಂತೆ ಬೆಳೆದು ಗುಣಗಳನ್ನು ಪಡೆದು ಯೌವನವನ್ನು ಹೊಂದುತ್ತಿದ್ದಳು. ಅಂತಹ ಸುಂದರಿಯಾದ ಹೆಣ್ಣನ್ನು ಜನಜಾತ್ರೆ ಯಾಗಿ ನೋಡುತ್ತಿರಲು ಆ ಗುಂಪಿನೊಳಗೆ ರುದ್ರದತ್ತನೆಂಬ ಒಬ್ಬ ಜೂಜುಗಾರ ಬ್ರಾಹ್ಮ ಣನು ಇವಳಾರೇನೆಂದು ಕೇಳಿ ತಿಳಿದು ಇವಳನ್ನು ಹೇಗಾದರೂ ಮದುವೆ ಮಾಡಿಕೊ

ಳ್ಳುವೆನೆಂದು ಪಂಥಮಾಡಿ ದೇಶಾಂತರಕ್ಕೆ ಹೋಗಿ ಅಲ್ಲೊಬ್ಬ ಜಿನಮುನಿಯಿಂದ ಬ್ರಹ್ಮ ಚಾರಿತ್ವವನ್ನು ಪಡೆದು ದೇವತಾರಾಧನೆ ಮೊದಲಾದ ಸಂಪ್ರದಾಯಗಳೆಲ್ಲವನ್ನೂ ಚೆನ್ನಾಗಿ ಕಲಿತುಕೊಂಡು ತಿರುಗಿ ಬಂದು ಆ ಊರಲ್ಲಿ ಗುಣಪಾಲಶೆಟ್ಟಿ ಮಾಡಿಸಿದ್ದ ಚೈತ್ಯಗ್ರಹಕ್ಕೆ ಬಂದನು.

ಅದನ್ನು ಕೇಳಿ ಗುಣಪಾಲಶೆಟ್ಟಿ ಬಂದು ಇವನನ್ನು ಆರೇನೆಂದು ಕೇಳಲು— ಈ ಹಸ್ತಿನಾಗ ನಗರದ ಸೋಮಶರ್ಮ ಸೋಮಶರ್ಮೆಯೆಂಬಿವರ ಮಗ, ರುದ್ರದತ್ತ ನನ್ನ ಹೆಸರು ತಾಯ್ತಂದೆಗಳು ಸತ್ತುದರಿಂದ ದೇಶಾಂತರಕ್ಕೆ ಹೋದೆನು. ವಾರಣಾಸೀ ನಗ ರಿಯಲ್ಲಿ ಜಿನಚಂದ್ರಭಟ್ಟಾರಕರಿಂದ ಸದ್ಧರ್ಮವನ್ನು ಕೇಳಿ ವೈರಾಗ್ಯವು ಹುಟ್ಟಿ ಬ್ರಹ್ಮ ಚಾರಿಯಾದೆನು. ಈ ದೇಶಂಗಳಲ್ಲಿರುವ ಜಿನಭವನಂಗಳನ್ನು ವಂದಿಸುತ್ತ ಬರಲು ಇಲ್ಲಿಯ ಶಾಂತಿ ಕುಂಥು ಅರ ತೀರ್ಥಂಕರರ ವಂದನಾರ್ಥವಾಗಿಯೂ ನಿನ್ನನ್ನು ನೋಡುವ ಅಭಿಲಾಷೆಯಿಂದೆಯೂ ಇಲ್ಲಿಗೆ ಬಂದು ಧನ್ಯನಾದೆನು ಎಂದು ಹೇಳಿ ಅವನನ್ನು ಕೊಂಡಾ ತ್ತಿರಲು, ಗುಣಪಾಲಶೆಟ್ಟಿ ನಿಮಗೆ ಈ ಬ್ರಹ್ಮಚರ್ಯವು ಸ್ವಲ್ಪ ದಿನಕ್ಕೋ ಎಂದೆಂದಿಗೋ ಎನಲು, ನನಗೆ ಇದು ಎಂದೆಂದಿಗೂ, ಸ್ತ್ರೀಸಂಗವೇ ಬೇಡವೆಂದು ಹೇಳಿದನು. ಅವನು ಕಪಟಿ ಬ್ರಹ್ಮಚಾರಿಯೆಂದರಿಯದೆ ಹಲವುಪಾಯಗಳಿಂದ ಒಡಂಬಡಿಸಿ ಸೋಮೆಯನ್ನು ಕೊಟ್ಟು ಸಂಭ್ರಮದಿಂದ ಮದುವೆಮಾಡಿದನು. ಆ ಮದುವೆಯಾದ ಮರುದಿನವೇ ಕೈಕಂಕಣ ಸಹಿತ ದ್ಯೂತಶಾಲೆಗೆ ಹೋಗಿ ಅಲ್ಲಿ ನೆರೆದಿದ್ದ ಜೂದುಗಾರರೊಡನೆ ಸೋ ಮೆಯನ್ನು ಹೇಗಾದರೂ ಮದುವೆಯಾಗುವೆನೆಂದು ನಾನು ಹೇಳಿದ ಮಾತು ದಕ್ಕಿತಲ್ಲಾ ಎಂದು ಅವರೊಡನೆ ಹೇಳಿದನು. ಅದಕ್ಕವರು ನಿನ್ನ ಪೂರ್ವಕೃತ ಪುಣ್ಯದಿಂದ ಲಾಭಿಸಿದ ಆ ಸೋಮೆಯನ್ನು ನೀನು ಅಸಡ್ಡೆಮಾಡದೆ ವಿಶ್ವಾಸವಾಗಿರು ಎಂದು ಹೇಳಿದ ಮಾತ ನ್ನು ಲಕ್ಷ್ಯಮಾಡದೆ ತನ್ನ ಪೂರ್ವಪರಿಚಯದ ವಸುಮಿತ್ರೆಯೆಂಬ ಸೂಳೆಯ ಮಗಳಾದ ಕಾಮಲತೆಯ ಮನೆಗೆ ಹೋಗಿ ಅಲ್ಲಿಯೇ ಇರುತ್ತಿದ್ದನು. ಇದನ್ನು ತಿಳಿದು ಸೋಮೆ ತನಗೆ ರುದ್ರದತ್ತನು ಮಾಡಿದ ವಂಚನೆಗೆ ತನ್ನ ಪೂರ್ವಕರ್ಮವೇ ಕಾರಣವೆಂದು ಚಿಂತಿಸುತ್ತಿದ್ದಳು. ಗುಣಪಾಲಶೆಟ್ಟಿಯೂ ಚಿಂತಾಕ್ರಾಂತನಾಗಿ ರುದ್ರದತ್ತನನ್ನು ಕರೆದು ಮತ್ತೊಮ್ಮೆ ಬುದ್ಧಿ ಹೇಳಿ ನೋಡುವೆನು ಅಂದಿನವರೆಗೂ ನಿನ್ನ ಮನಬಂದಂತೆ ದಾನ ಪೂಜೆ ಶೀಲೋಪವಾಸಗಳನ್ನು ಮಾಡುತ್ತಿರು ಎಂದು ಮಗಳಿಗೆ ಹೇಳಿದನು. ಅದಕ್ಕ ವಳು ನನಗೆ ಇನ್ನು ಈ ಜನ್ಮಕ್ಕೆ ಬ್ರಹ್ಮಚರ್ಯವಲ್ಲದೆ ಮತ್ತೊಂದಿಲ್ಲವೆಂದು ಹೇಳಿ ಸದ್ವ್ರತದಲ್ಲಿರುತ್ತಿದ್ದಳು. ಇವಳ ದಾನಾದಿ ಸದಾಚಾರಕ್ಕೆ ಜಗಜ್ಜನವೆಲ್ಲ ಮೆಚ್ಚಿ ಕೊಂಡಾಡುತ್ತಿತ್ತು. ಊರಿನವರೆಲ್ಲರಿಗೂ ಅವುತಣವನ್ನು ಮಾಡಿಸಿದಂದು ವಸುಮಿತ್ರೆ ಕಾಮಲತೆಯರಿಗೂ ತಕ್ಕಂತೆ ಸನ್ಮಾನ ಮಾಡಿ ತಾಂಬೂಲವನ್ನು ಕೊಟ್ಟಳು. ಆಗ ಇವಳ ರೂಪಗುಣಗಳನ್ನು ಕಂಡು ಮೂಗಿನ ಮೇಲೆ ಬೆರಲಿಟ್ಟು ಕೊಂಡಾಡಿ ಮನೆಗೆ ಬಂದು ವಸುಮಿತ್ರೆ ಎಂದಾದರೂ ಒಮ್ಮೆ ರುದ್ರದತ್ತನು ಇವಳೊಡನೆ ಮಾತನಾಡಿದರೆ ನನ್ನ ಮಗಳ ಬಾಳು ಕೆಡುವುದು ಇದಕ್ಕೇನಾದರೂ ಉಪಾಯವನ್ನು ಹುಡುಕಬೇಕೆಂದೆಣಿ ಸುತ್ತ ದಿನಂಪ್ರತಿ ತನ್ನ ಮಗಳಾದ ಕಾಮಲತೆಯ ಕೈಯಲ್ಲಿ ಹೂಮಾಲೆಯನ್ನು ಒಂದು

ಕರಂಡದಲ್ಲಿ ಹಾಕಿ ಸೋಮೆಗೆ ಕಳುಹುತ್ತ ಸ್ನೇಹವನ್ನು ಬೆಳೆಯಿಸಿ ಒಂದು ದಿನ ಗುಪ್ತ ವಾಗಿ ಹೂವಿನ ಕರಂಡದಲ್ಲಿ ದುಷ್ಟ ಸರ್ಪವನ್ನು ಇಟ್ಟು ಮಗಳೊಡನೆ ತಾನೂ ಬಂದು ಸೋಮೆಯ ಕೈಯಲ್ಲಿ ಕೊಟ್ಟಳು. ಸೋಮೆ ಅದು ನಿಜವಾದ ಹೂಮಾಲೆಯೆಂದೇ ಎಣಿಸಿ ಜಿನಾರ್ಚನೆಗೆಂದು ತನ್ನ ಅಮೃತಹಸ್ತದಿಂದ ತೆಗೆಯಲು ಅದು ದಿವ್ಯವಾದ ಹೂಮಾಲೆಯಾಯ್ತು. ಅದನ್ನು ಅರ್ಚನೆಮಾಡಿದ ಬಳಿಕ ಮನೆಗೆ ಕರೆತಂದು ಅವರಿಗೆ ಭೋಜನಾದಿಗಳನ್ನು ಮಾಡಿಸಿ ಮುಡಿಗೆ ಮುಡಿಯೆಂದು ಕಾಮಲತೆಯ ಕೈಗೆ ಕೊಟ್ಟಳು. ಕಾಮಲತೆ ಅದನ್ನು ಕೈಯಲ್ಲಿ ಮುಟ್ಟಿದೊಡನೆಯೇ ಅದು ಕಾಲಸರ್ಪವಾಗಿ ಕೈಯನ್ನು ಕಡಿಯಲು ವಿಷವೇರಿ ಕಾಮಲತೆ ನೆಲಕ್ಕೆ ಬಿದ್ದಳು. ಅದನ್ನು ಕಂಡು ವಸುಮಿತ್ರೆ ಮೊರೆಯೋ ಎಂದು ಕೂಗುತ್ತ ಕಾಮಲತೆಯನ್ನು ಎತ್ತಿಕೊಂಡು ಅರಮನೆಯ ಬಾಗಿಲ್ಗೆ ಬಂದು ಸವತಿಯ ಮತ್ಸರದಿಂದ ಕಾಮುಲತೆಯನ್ನು ಸೋಮೆ ಘಟಸರ್ಪನಿಂದ ಕಚ್ಚಿಸಿ ಕೊಂದಳು ಎಂದು ಬಾಯ್ಬಡಿದು ಹೇಳಿದಳು. ಆ ಮೊರೆಯನ್ನು ಕೇಳಿ ಅರಸನು ಸೋಮೆ ಯನ್ನು ಕರೆಯಿಸಲು, ಕರಂಡಕಸಹಿತವಾಗಿ ಬಂದು ಜೈನಧರ್ಮವ್ರತಾಚರಣೆಯಲ್ಲಿ ತುಸುವಾದರೂ ಬಿಡುವಿಲ್ಲದಿರುವವರು ಇಂತಹ ಕೃತ್ಯವನ್ನು ಮಾಡುವರೋ ಮಾಡ ಲೊಲ್ಲರೋ ತಾವೇ ವಿಚಾರಿಸಬೇಕೆಂದಳು. ಅದನ್ನು ಕೇಳಿ ಅರಸನು ಹಾಗಾದರೆ ಈ ಸಂಗತಿ ಹೇಗೆ ಆಯ್ತು ಎನಲು ಅದೇನೋ ನಾನರಿಯೆನು. ಇವರಿಬ್ಬರೂ ಬಂದು ನನಗೆ ಒಂದು ಮಾಲೆಯನ್ನು ತಂದು ಕೊಡಲು ಅದನ್ನು ನಾನು ವೀತರಾಗಂಗೆ ಅರ್ಚಿಸಿ ಮುಡಿ ಗೆ ಮುಡಿಯೆಂದು ಕಾಮಲತೆಯ ಕೈಗೆ ಕೊಟ್ಟೆನು. ಆ ಮಾಲೆಯೇ ಹಾವಾಗಿ ಹಾರಿ ಬಂದುದನ್ನು ಕಂಡೆನು. ಮತ್ತೇನು ಮಾಯೆಯೋ ನಾನರಿಯೆನು. ನೀವೇ ಪರೀಕ್ಷಿಸಿ ಎಂದು ಕರಡಿಗೆಯನ್ನು ಅವಳ ಕೈಯಿಂದ ತೆಗೆಯಲು ನವಪುಷ್ಪಮಾಲೆಯಾಯ್ತು; ಅದನ್ನು ತಂದು ಕಾಮಲತೆಯ ಪಕ್ಕದಲ್ಲಿರಿಸಲು ಹಾವಾಗಿ ಸುಳಿಯುತ್ತಿತ್ತು. ಇದನ್ನು ಕಂಡು, ಆಸ್ಥಾನದಲ್ಲಿದ್ದವರೆಲ್ಲರೂ ಆಶ್ಚರ್ಯಪಟ್ಟರು. ಆಗ ವಸುಮಿತ್ರೆ ತಾನು ಮಾಡಿದ ಕಪಟವನ್ನು ಹೇಳಿ ಸೋಮೆಯ ಪದಕ್ಕೆರಗಿದಳು. ಸೋಮೆ ಆಗ ಜಿನನೇಗತಿ ಯೆಂದು ತನ್ನ ಕೈಯನ್ನು ಆ ಕಾಮಲತೆಯ ಮೈಮೇಲಿಡಲು ಅವಳ ಮೈಯೊಳಗಿದ್ದ ವಿಷವೆಲ್ಲವೂ ಹೋಗಿ ಮೇಲಕ್ಕೆದ್ದಳು.

ಇದನ್ನು ಕಂಡು ಭೂಭೋಗರಾಯನು ಸೋಮೆಯನ್ನು ಬಹಳ ಕೊಂಡಾಡಿ ಸನ್ಮಾನಿಸಲು, ಪಂಚಾಶ್ಚರ್ಯವಾಯ್ತು. ಆಗ ಸೋಮೆ ಸದ್ಧರ್ಮ ಸ್ವರೂಪವನ್ನು ಹೇಳ ಲು ವೈರಾಗ್ಯದಿಂದ ಭೂಭೋಗರಾಯನು ಮಗನಿಗೆ ರಾಜ್ಯವನ್ನಿತ್ತು ದೀಕ್ಷೆಗೊಂಡನು. ಭೋಗಾವತೀದೇವಿ, ಸೋಮೆ ಮೊದಲಾದ ಸ್ತ್ರೀಯರು ಭದ್ರಮತಿಯೆಂಬ ಕಂತಿಕೆಯ ರಲ್ಲಿ ದೀಕ್ಷೆಯನ್ನು ಕೈಕೊಂಡರು. ರುದ್ರದತ್ತ, ವಸುಮಿತ್ರೆ, ಕಾಮಲತೆ ಮೊದಲಾದನೇ ಕರು ಶ್ರಾವಕವ್ರತವನ್ನು ಧರಿಸಿದರು.

ಈ ದೃಷ್ಟಾಂತವನ್ನು ಕಂಡು ನನಗೂ ಸಮ್ಯಕ್ತ್ವವುಂಟಾಯಿತೆಂದು ಗಂಧಶ್ರೀ ಹೇಳಿದಳು. ಇದಕ್ಕೂ ಕುಂದಲತೆ ಒಡಂಬಡಲಿಲ್ಲ.

## ಏಳನೆಯ ಸಂಧಿ—ವಿಷ್ಣುಶ್ರೀ ಹೇಳುವ ಕಥೆ.

ವತ್ಸದೇಶದಲ್ಲಿ ಕೌಶಂಬಿಯೆಂಬ ನಗರಕ್ಕೆ ಅರಸನು ಅಜಿತಂಜಯ ಮಹಾ ರಾಯನು; ಪಟ್ಟದರಸಿ ಸುಪ್ರಭೆ. ಅವನ ಮಂತ್ರಿ ಸೋಮಶರ್ಮನೆಂಬವನು ದಿನಂಪ್ರತಿ ಕುಪಾತ್ರದಲ್ಲಿ ದಾನವನ್ನು ಮಾಡುತ್ತಿರಲೊಂದಾನೊಂದು ದಿನದಲ್ಲಿ ಆ ನಗರಿಗೆ ಸಮಾಧಿ ಗುಪ್ತಾಚಾರ್ಯರೆಂಬ ಮಾಸೋಪವಾಸಿಗಳು ಭಾವರಿಯನ್ನಿಡುತ್ತ ಬರಲು ಸೋಮ ಶರ್ಮನು ಅತ್ಯಾದರದಿಂದ ಬಂದು ವಿಧಿಪೂರ್ವಕವಾಗಿ ನಿಲ್ಲಿಸಿ ಮನೆಗೆ ಕರೆದುಕೊಂಡು ಹೋಗಿ ನವವಿಧಪುಣ್ಯದಿಂದ ಅನ್ನದಾನವನ್ನು ಮಾಡಲು ಋಷಿಯರು ಅಕ್ಷಯದಾನ ವೆಂಬಾಕ್ಷಣಕ್ಕೆ ಪಂಚಾಶ್ಚರ್ಯಗಳಾದುವು. ಅದನ್ನು ಕಂಡು ಮಂತ್ರಿ ಸ್ವಾಮಿ, ನಾನು ಈವರೆಗೆ ಅತ್ಯುತ್ತಮರೆನಿಸಿದ ವೈಷ್ಣವ, ಶೈವ, ವೈದಿಕ, ಏಕದಂಡಿ, ದ್ವಿದಂಡಿ, ತ್ರಿದಂಡಿ, ಬ್ರಾಹ್ಮಣ, ಬ್ರಹ್ಮಚಾರಿ, ಅಗ್ನಿಹೋತ್ರಿ, ದೀಕ್ಷಿತರೇ ಮೊದಲಾದವರಿಗೆ ದಶವಿಧ ದಾನ ಗಳನ್ನು ಮಾಡಿಯೂ ಇಂತಹ ಆಶ್ಚರ್ಯವನ್ನು ಕಂಡುದಿಲ್ಲವೆಂದನು. ಅದಕ್ಕೆ ಸಮಾಧಿ ಗುಪ್ತಾಚಾರ್ಯರು ದಾನಮಾಡಲಿಕ್ಕೆ ಪಾತ್ರಗಳು ಉತ್ತಮ, ಮಧ್ಯಮ, ಜಘನ್ಯ ವೆಂದು ಮೂರು ವಿಧ; ಅಲ್ಲದುವು ಕುಪಾತ್ರಗಳು; ಉತ್ತಮಾದಿ ಪಾತ್ರಗಳಲ್ಲಿ ದಾನ ಮಾಡುವುದರಿಂದ ಸ್ವರ್ಗಾಪವರ್ಗವನ್ನು ಪಡೆಯಲಾದೀತು; ದಾನಗಳು ನಾಲ್ಕು ವಿಧ; ದಾತೃವಿನ ಲಕ್ಷಣಗಳು ಮೊದಲಾದ ಶಾಸ್ತ್ರಕ್ರಮವನ್ನು ಹೇಳಿ ಕುಪಾತ್ರದಾನದಿಂದ ವಿಪತ್ತು ಬರುವುದೆಂದೂ ಹೇಳಿ, ದಾನದ ವಿಷಯವಾಗಿ ಒಂದು ಕಥೆಯನ್ನು ಹೇಳಿ ದರು:—ಏಣಾತಟಾಕವೆಂಬ ರಾಜಧಾನಿಯಲ್ಲಿ ರಾಜಪ್ರಭನೆಂಬ ರಾಯನು ರಾಜಪ್ರಭೆ ಯೆಂಬ ರಾಣಿಯೊಡಗೂಡಿ ಅರಸುಗೆಯ್ಯುತ್ತ ಬ್ರಾಹ್ಮಣರ ಪೂಜೆಯನ್ನು ಮಾಡುತ್ತ ಕೀರ್ತಿಯನ್ನೂ ತೇಜಸ್ಸನ್ನೂ ಪಡೆದು, ನೂರು ಯಾಗಗಳನ್ನು ಮಾಡಿದವರು ಇಂದ್ರ ಪದವಿಯನ್ನು ಪಡೆವರೆಂಬ ಶಾಸ್ತ್ರವಚನವನ್ನು ಹಿಡಿದು, ಶಾಸ್ತ್ರಜ್ಞರನ್ನು ಕರೆಯಿಸಿ ಅವ ರಿಂದ ಆಗಬಹುದೆಂದೆನಿಸಿ ಯಾಗಮಾಡಲಾರಂಭಿಸಿ ಮೃಷ್ಟಾನ್ನಭೋಜನವನ್ನು ಮಾಡಿಸಿ ಮನದಣಿವಂತೆ ಬ್ರಾಹ್ಮಣರನ್ನು ಪೂಜಿಸುತ್ತಿದ್ದನು. ಒಂದುದಿನ ವಿಶ್ವಭೂತಿಯೆಂಬ ಬಡಹಾರುವನು ಮುಷ್ಟಿಯನ್ನು ಬೇಡಿ ತಂದ ಅಕ್ಕಿಗೆ ತಕ್ಕಂತೆ ಅಡುಗೆ ಮಾಡಿಕೊಳ್ಳ ಲಾರದೆ ಹಿಟ್ಟುಮಾಡಿಕೊಂಡು ಅಗ್ನಿಹೋತ್ರಕ್ಕೆ, ಅತಿಥಿಗೆ, ತನಗೆ, ತನ್ನ ಹೆಂಡತಿಗೆ ಎಂದು ನಾಲ್ಕು ಭಾಗಗಳನ್ನು ಮಾಡಿ ಭೋಜನದ ವೇಳೆಯನ್ನು ನೋಡುತ್ತಿರಲು ಪಿಹಿ ತಾಸ್ರವರೆಂಬ ಯತಿಗಳು ಮಾಸೋಪವಾಸದ ಮೇಲೆ ಚರಿಗೆಗೆ ಬರುವುದನ್ನು ಕಂಡು, ನಿಲ್ಲಿಸಿ, ಮನೆಗೆ ಕರೆತಂದು ಕ್ರಮವರಿತು ಮೂರು ಭಾಗಗಳನ್ನು ಕೊಟ್ಟು, ಹೆಂಡತಿಯ ಮುಖವನ್ನು ನೋಡಿ ಅವಳು ತನ್ನ ಭಾಗವನ್ನು ಕೊಟ್ಟ ಮೇಲೆ, ಅಕ್ಷಯದಾನವೆಂದು ಋಷಿಯರು ಹೇಳುವಾಗ ಪಂಚಾಶ್ಚರ್ಯಗಳಾದುವು. ವಿಶ್ವಭೂತಿಯ ಮನೆಯ ಮುಂದೆ ಆಗ ಅಂತರಿಕ್ಷದಿಂದ ಸುರಿದಿದ್ದ ರತ್ನದ ರಾಶಿಗಳನ್ನು ಅವನ ಹೆಂಡತಿ ಮನೆಗೊಯ್ಯುತ್ತಿ ದ್ದುದನ್ನು ಯಜ್ಞಮಂಟಪದಲ್ಲಿದ್ದ ಬ್ರಾಹ್ಮಣರೆಲ್ಲರೂ ನೋಡಿ ಕೆಲವರು ನಮ್ಮ ಮಹಾ ರಾಜರವರು ಮಾಡಿದ ಯಾಗದ ಫಲವು ಈಗಳೇ ಪ್ರತ್ಯಕ್ಷವಾಗಿ ಕಾಣಿಸುತ್ತಿದೆ, ಎಂದರು. ಕೆಲವರು ಈ ವಿಶ್ವಭೂತಿಯ ತುಂಟಾಟಿಕೆಯನ್ನು ನೋಡಿ—ಒಬ್ಬ ಬೋಳ

ನನ್ನು ಕರೆತಂದು ಅವನಿಗೆ ಅಕ್ಕಿಯ ಹಿಟ್ಟನ್ನು ಕಲಿಸಿಕೊಟ್ಟು ಮಹಾರಾಜರವರಿಗೆ ಅಂಜದೆ ರತ್ನಗಳನ್ನು ಮನೆಗೆ ಕೊಂಡು ಹೋಗಿ ಸುರಿದುಕೊಳ್ಳುತ್ತಿರುವನು, ಎಂದು ಹೇಳುತ್ತ ಅರಮನೆಗೆ ಬಂದು ಆ ಸುದ್ದಿಯನ್ನು ತಿಳಿಸಲು ಆಗ್ರಹದಿಂದ ಮಹಾರಾಜರು ವಿಶ್ವಭೂತಿಯನ್ನು ಕರೆಯಿಸಿದರು. ವಿಶ್ವಭೂತಿ ಬಂದು ಆ ರತ್ನರಾಶಿಗಳನ್ನು ಸಭೆಯಲ್ಲಿ ಸುರಿದ ಕೂಡಲೇ ಕೆಂಡಗಳಾಗಿ ಜಳಜಳಿಸುತ್ತಿದ್ದುವು. ಅದನ್ನು ಕಂಡು ಅಲ್ಲಿದ್ದವರು ವಿಶ್ವಭೂತಿ ನಿರಪರಾಧಿ—ಮಹಾಮುನಿಗಳಿಗೆ ಆಹಾರದಾನವನ್ನು ಮಾಡಿದ ಮಾಹಾತ್ಮ್ಯೆ ದಿಂದ ರತ್ನಗಳ ಮಳೆ ಸುರಿಯಿತು. ಆ ರತ್ನಗಳನ್ನು ಇಲ್ಲಿಗೆ ತರಲು ಉರಿವ ಕೆಂಡಗಳಾ ದುವು, ಎನುತ್ತ ಅವನ ಕೈಗೆ ಮರಳಿ ಅವುಗಳನ್ನು ಕೊಡಲು ಮತ್ತೆ ಥಳಥಳಿಸುವ ರತ್ನ ಗಳಾದುವು. ಇದನ್ನು ಕಂಡು ರಾಜಪ್ರಭರಾಯನು ಆಶ್ಚರ್ಯಪಟ್ಟು, ಸದ್ಧರ್ಮಕ್ಕೆ ಮೆಚ್ಚಿ, ನಿನಗೆ ಬಂದ ಅನ್ನದಾನದ ಫಲದೊಳಗೆ ಅರ್ಧವನ್ನು ಕೊಟ್ಟರೆ, ನನ್ನ ಯಜ್ಞ ಫಲದೊಳಗೆ ಅರ್ಧವನ್ನೂ, ರಾಜ್ಯದೊಳಗೆ ಅರ್ಧವನ್ನೂ ಕೊಡುವೆನೆಂದು ವಿಶ್ವಭೂತಿ ಯನ್ನು ಕೈಮುಗಿದು ಕೇಳಿಕೊಂಡನು. ಅದಕ್ಕೆ ವಿಶ್ವಭೂತಿ ಒಡಂಬಡದಿರಲು, ಪಿಹಿ ತಾಸ್ರವ ಗುರುಗಳ ಬಳಿಗೆ ಬಂದು ಸಾಷ್ಟಾಂಗವೆರಗಿ ನಾನು ಎಷ್ಟು ವಿಧದಿಂದ ಬೇಡಿ ಕೊಂಡರೂ ವಿಶ್ವಭೂತಿ ಅನ್ನದಾನದ ಫಲದೊಳಗೆ ಅರ್ಧವನ್ನು ನನಗೆ ಕೊಡಲೊಲ್ಲದ ಕಾರಣವೇನೆಂದು ಕೇಳಿದನು. ಆಗ ಅವರು ಚತುರ್ವಿಧದಾನಗಳ ಧರ್ಮೋಪದೇಶ ವನ್ನು ಮಾಡಲು ಅವರಲ್ಲಿ ವ್ರತವನ್ನು ಪಡೆದು ಕೆಲವು ದಿನಗಳಾದ ಬಳಿಕ ದೀಕ್ಷೆಗೊಂಡು ರಾಜಪ್ರಭರಾಯನು ಕರ್ಮವನ್ನು ಸುಟ್ಟು, ಉತ್ತಮಗತಿಯನ್ನು ಪಡೆದನು.

ಎಂಬ ಕಥೆಯನ್ನು ಸಮಾಧಿಗುಪ್ತಾಚಾರ್ಯರಿಂದ ಕೇಳಿ ಸೋಮಶರ್ಮ ಮಂತ್ರಿ ಅವರಿಂದ ಉತ್ತಮ ವ್ರತವನ್ನು ಕೈಕೊಂಡು ಲೋಹದಿಂದ ಮಾಡಿದ ಆಯುಧವನ್ನು ಹಿಡಿ ವುದಿಲ್ಲೆಂದು ಮರದಿಂದ ಒಂದು ಕತ್ತಿಯನ್ನು ಮಾಡಿಸಿ ಅದನ್ನು ಒರೆಯೊಳಗಿಟ್ಟುಕೊಂಡು ರಾಜಸೇವೆಯನ್ನು ಮಾಡುತ್ತ ಪ್ರಖ್ಯಾತನಾಗಿದ್ದನು. ಅದನ್ನು ಕಂಡು ಕೆಲವರು ಚಾಡಿ ಕಾರರು ಅರಸನಿಗೆ ತಿಳಿಸಲು ಅವನು ಅದನ್ನು ಪರೀಕ್ಷೆಮಾಡುವೆನೆಂದು ಒಡ್ಡೋಲಗವನ್ನು ಕೊಟ್ಟನು. ಆಗ ರಾಯನ ಪಕ್ಕದಲ್ಲಿದ್ದ ಮಂತ್ರಿಯ ಕತ್ತಿಯನ್ನು ನೋಡುವೆನೆಂದೊಬ್ಬ ರಾಜಕುಮಾರನು ಅರಸನ ಅನುಮತಿಯಿಂದ ಬೇಡಲು ಮಂತ್ರಿ ಪಂಚಪದಧ್ಯಾನವನ್ನು ಮಾಡುತ್ತ ಒರೆಯಿಂದ ಕತ್ತಿಯನ್ನು ಕಿತ್ತು ಅವನ ಕೈಗೆ ಕೊಟ್ಟನು. ಆಗ ಅದನ್ನು ನೋಡಿದವರು ಇದೇನು ಹೆಮ್ಮಾರಿಯ ನಾಲಿಗೆಯೋ, ಕುಡಿಮಿಂಚೋ, ನಾಗರೋ ಎಂದು ಬಗೆದು ಅಂಜುತ್ತಿದ್ದರು. ಅರಸನು ಆಗ ಮಹಾತ್ಮರ ಮೇಲೆ ಇಂತಹ ಸುಳ್ಳನ್ನು ಹೇಳಿದವರ ನಾಲಗೆಯನ್ನು ಕತ್ತರಿಸಬೇಕೆಂದು ಆಜ್ಞೆಮಾಡಲು, ಮಂತ್ರಿ ಕೈಮುಗಿದು ಸ್ವಾಮೀ—ಇವರು ಹೇಳಿದುದು ಸುಳ್ಳಲ್ಲ; ಇವರನ್ನು ಬಾಧಿಸಬಾರದು; ನಾನು ಗುರು ಸಾಕ್ಷಿಯಾಗಿ ಲೋಹದ ಕತ್ತಿಯನ್ನು ಹಿಡಿವುದಿಲ್ಲೆಂದು ವ್ರತವನ್ನು ಕೈಕೊಂಡು ಸಲಿಸು ತ್ತಿರುವೆನು. ನನ್ನ ವ್ರತದ ಮಹಿಮೆಯಿಂದ ಇದು ತೀಕ್ಷ್ಣವಾದ ಕತ್ತಿಯಾಗಿ ಕಾಣಿ ಸಿತು ಎನುತ್ತ ಅದರ ನಿಜವಾದ ರೂಪವನ್ನು ತೋರಿಸಲು ಸಭೆಯವರೆಲ್ಲರೂ ಬೆರಗಾಗಿ ಆಶ್ಚರ್ಯಪಡುತ್ತಿರುವಾಗ ಪಂಚಾಶ್ಚರ್ಯಗಳಾದುವು. ಅಜಿತಂಜಯರಾಯನು ಸೋಮ

ಶರ್ಮನನ್ನು ಸನ್ಮಾನಿಸಿ ಸದ್ಧರ್ಮವೇ ಉತ್ತಮವೆಂದು ನಂಬಿ ವೈರಾಗ್ಯಪರನಾಗಿ ತೊಟ್ಟಿಲ ಮಗನಾದ ಶತ್ರುಂಜಯನಿಗೆ ಪಟ್ಟವನ್ನು ಕಟ್ಟಿ, ಸೋಮಶರ್ಮನೊಡನೆ ಅನೇಕ ರಾಜರನ್ನು ಕೂಡಿಕೊಂಡು ಸಮಾಧಿಗುಪ್ತಾಚಾರ್ಯರಲ್ಲಿ ದೀಕ್ಷೆಯನ್ನು ಧರಿಸಿದನು. ಸುಪ್ರಭಾದೇವಿಯೂ, ಸೋಮಶರ್ಮನ ಪತ್ನಿ ಸೋಮೆಯೂ ಇನ್ನೂ ಅನೇಕ ಭಾಮಿನಿಯರು ಅಭಯ ಮತಿಗಳೆಂಬ ಅಜ್ಜಿಕೆಯರಲ್ಲಿ ದೀಕ್ಷೆಯನ್ನು ಪಡೆದರು. ಇದರಿಂದ ನನಗೆ ಸಮ್ಯಕ್ತ್ವವಾಯ್ತು ಎಂದು ವಿಷ್ಣುಶ್ರೀ ಹೇಳಿದ ಕಥೆಗೆ ಎಲ್ಲರೂ ಒಡಂಬಟ್ಟರು. ಕುಂದಲತೆ ಒಡಂಬಡಲಿಲ್ಲ.

## ಎಂಟನೆಯ ಸಂಧಿ—ನಾಗಶ್ರೀ ಹೇಳಿದ ಮುಂಡಿಕೆಯ ಕಥೆ.

ಕಾಶ್ಮೀರದೇಶದಲ್ಲಿ ವಾರಣಾಸಿಯೆಂಬ ರಾಜಧಾನಿಯಲ್ಲಿ ಜಿತಶತ್ರುವೆಂಬ ಅರಸನಿದ್ದನು; ಅವನ ಪತ್ನಿ ಕಾಂಚನಚಿತ್ರೆ. ಇವರಿಗೆ ಮುಂಡಿಕೆಯೆಂಬ ಒಬ್ಬ ಮಗಳು. ಈ ಹುಡುಗಿ ಪೂರ್ವಜನ್ಮದ ಕರ್ಮಕ್ಕೆ ತಕ್ಕಂತೆ ಮಣ್ಣನ್ನು ತಿಂದು ತಿಂದು ಮೈಗೆ ರೋಗ ಹತ್ತಿ ವಿಕಾರಿಯಾಗಿದ್ದಳು. ಅರಸನು ಅದನ್ನು ನೋಡಿ ಅಸಡ್ಡೆಯಿಂದ ಅವಳನ್ನು ಬೇರೊಂದು ಕಡೆಯಲ್ಲಿ ಇರಿಸಿಬಿಟ್ಟನು. ಒಂದಾನೊಂದು ದಿನ ಈ ಹುಡುಗಿ ಅಲೆದಾಡುತ್ತ ಊರ ನಡುವಣ ಚೈತ್ಯಾಲಯಕ್ಕೆ ಬರಲು, ಅಲ್ಲಿ ಒಬ್ಬ ಕಂತಿಯರು ಸ್ತ್ರೀಯರಿಗೆ ಧರ್ಮೋಪದೇಶವನ್ನು ಮಾಡಿ ವ್ರತಗಳನ್ನು ಕೊಡುತ್ತಿದ್ದುದನ್ನು ಕಂಡು, ತಾನೂ ಹತ್ತಿರಕ್ಕೆ ಹೋಗಿ ನಮಸ್ಕರಿಸಿ ನನಗೊಂದು ವ್ರತವನ್ನು ಕೊಡಿಯೆಂದು ಕೇಳಿದಳು. ಅದಕ್ಕವರು ಕರುಣೆಯಿಂದ ಎಲೆ ಮಗಳೆ ನಿನ್ನ ದುಷ್ಕರ್ಮದಿಂದ ಮಣ್ಣನ್ನು ತಿಂದು ಹೀಗೆ ಮೈಯನ್ನು ಕೆಡಿಸಿಕೊಂಡೆ. ಮಣ್ಣನ್ನು ಇನ್ನು ತಿನ್ನಬೇಡವೆಂದರು. ಆ ವ್ರತವನ್ನು ಪರಿಪಾಲಿಸುತ್ತ ಬರಲು ಕೆಲವು ದಿನಗಳೊಳಗೆ ಆ ರೋಗವೆಲ್ಲವೂ ಹೋಗಿ ರೂಪಲಾವಣ್ಯಗಳಿಂದ ಕೂಡಿರಲು, ತಿರುಗಿ ಗುರುಗಳ ಬಳಿಗೆ ಬಂದು ನಮಸ್ಕರಿಸಿ ಎಲೆ ಗುರುವೆ, ನಿನ್ನ ದಯೆಯಿಂದ ನನ್ನ ರೋಗವೆಲ್ಲವೂ ಹೋಯ್ತು, ಎನಲು ಅವರು ಸುವ್ರತದಿಂದ ಬೇಕಾದ ಫಲವು ಲಭಿಸುವುದು ಇದೇನು ದೊಡ್ಡದು ಎಂದು, ಅದನ್ನು ಕೇಳಿ ಸಂತೋಷದಿಂದ ಸದ್ಧರ್ಮವನ್ನು ನಂಬಿ ಸುವ್ರತಗಳನ್ನು ಸಲಿಸುತ್ತಿದ್ದಳು. ಇಂತಹ ಮಗಳ ಸೌಂದರ್ಯವನ್ನು ಕಂಡು ಅರಸನು ಸ್ವಯಂವರ ಮಾಡಿಸಬೇಕೆಂದು ಸಾರಿಸಿದನು. ಆ ಮಾತನ್ನು ಕೇಳಿ ಚಕ್ರಕೋಟಾಪುರಿಯ ಅರಸನಾದ ಭಗದತ್ತರಾಯನು ತನಗೆ ಮಗಳನ್ನು ಕೊಡಬೇಕೆಂದು ಹೇಳಿಕಳುಹಿದನು. ಆ ಮಾತಿಗೆ ಜಿತಶತ್ರುರಾಯನು ಒಪ್ಪದೆ ತಿರಸ್ಕರಿಸಿ ನುಡಿದುದರಿಂದ ಭಗದತ್ತರಾಯನು ಸೇನಾಸಮೇತನಾಗಿ ಬಂದು ವಾರಣಾಸಿಯನ್ನು ಬಳಸಿ ಮುತ್ತಿಗೆ ಹಾಕಿ ಮಹತ್ತಾದ ಉಪದ್ರವನ್ನುಂಟುಮಾಡಿದನು. ಆಗ ಕೆಲವರು ಜಿತಶತ್ರುವಿಗೆ, ಮಗಳನ್ನು ಈಗಳಾದರೂ ಭಗದತ್ತನಿಗೆ ಕೊಟ್ಟು ಸಂಧಿಮಾಡಿಕೊಳ್ಳೆಂದು ಹೇಳಿದರು. ಜಿತಶತ್ರುವದಕ್ಕೆ ಒಪ್ಪದೆ ಅಭಿಮಾನವನ್ನು ರಕ್ಷಿಸಬೇಕೆಂದು ತನಗುಳ್ಳ ಸೇನೆಯೊಡನೆ ಕಾಳೆಗಕ್ಕೆ ಹೊರಟನು. ಘೋರಯುದ್ಧವಾಯ್ತು. ಭಗದತ್ತನಿಗೆ ಜಯವಾಗುವ ಸಂಭವವೊದಗುತ್ತಿತ್ತು; ಜಿತಶತ್ರುವಿಗೆ ಸೋಲ. ಅಷ್ಟರೊಳಗೆ ತನ್ನೊಬ್ಬಳಿಂದ ಈ ಕಷ್ಟವೆಲ್ಲರಿಗೂ ಒದಗಿತಲ್ಲಾ ಎಂದು ಮುಂಡಿಕೆ ಹೊರಟು ಊರಹೊರಗೆ ಹರಿಯುವ ನದಿಯೊಳಗೆ ಹೊಕ್ಕು ಈ ಉಪಸರ್ಗವು ಹೋಗುವವರೆಗೂ ಸನ್ಯಸನ

ವೆಂದು ಕುಳಿತಿದ್ದಳು. ಇವಳ ಸಮ್ಯಕ್ತ್ವದ ಮಹಿಮೆಯಿಂದ ಜಲದೇವತೆಯರು ಇವಳಿಗೊಂದು ಉಪ್ಪರಿಗೆಯನ್ನು ಅಲ್ಲಿಯೇ ನಿರ್ಮಿಸಿ ಪೂಜಿಸಿದರು. ನಗರದೇವತೆಗಳು ಭೀಕರಾಕಾರವನ್ನು ತಾಳಿ ಭಗದತ್ತನ ಸೈನಿಕರನ್ನು ಮರದಂತೆ ಸ್ತಂಭಿಸಿ ಅವನಿದಿರಿಗೆ ಬಂದು-ಸಮ್ಯಕ್ತ್ವಚೂಡಾಮಣಿಯನ್ನು ಈ ಪ್ರಕಾರವಾಗಿ ಸಂಕಟಪಡಿಸುವುದು ಸರಿಯಲ್ಲ. ಮಡುವಿನೊಳಗಿರುವ ಮುಂಡಿಕೆಯ ಚರಣಕ್ಕೆ ವಂದಿಸಿ ನಮ್ರನಾಗದೆ ಹೋದರೆ ನಿನ್ನ ತಲೆಯನ್ನು ತೆಗೆದುಬಿಡುವೆವು ಎನುತ್ತ ನೆಲದಿಂದಾಕಾಶದವರೆಗೂ ಬೆಳೆದು ಅತಿ ಭಯಂಕರವಾಗಿ ಗರ್ಜಿಸಿದುವು. ಆಗ ಭಗದತ್ತನು ಜಿತಶತ್ರುರಾಯನ ಪಾದಕ್ಕೆರಗಿ ಕಾಪಾಡೆಂದು ಬೇಡಿಕೊಂಡು, ಮುಂಡಿಕೆಯ ಬಳಿಗೆ ಬಂದು ನಮಸ್ಕರಿಸಿ ಅಪರಾಧವನ್ನು ಕ್ಷಮಿಸಿ ತಲೆಯನ್ನು ಕಾಯ ಬೇಕೆಂದು ಕೇಳಿಕೊಂಡನು. ಆಗ ಮುಂಡಿಕೆ ನನ್ನೊಂದು ಜೀವಕ್ಕಾಗಿ ಇಷ್ಟೊಂದು ಕಷ್ಟ ನಿಮ್ಮಿಬ್ಬರಿಗೂ ಆಯಿತಲ್ಲಾ ಕ್ಷಮಿಯಿಸಿ ಎಂದು ಹೇಳಲು ನಗರದೇವತೆಗಳು ಭಗದತ್ತನ ಸೇನೆಯನ್ನು ಸಚೇತನರಾಗಿ ಮಾಡಿದುವು. ಆಶ್ಚರ್ಯ ಪಂಚಕವಾಯ್ತು. ಆಗ ವೈರಾಗ್ಯಪರರಾಗಿ ಶ್ರುತಾಬ್ಧಿಯೆಂಬ ಮುನಿಗಳಲ್ಲಿ ಭಗದತ್ತನೂ, ಜಿತಶತ್ರುವೂ ಇನ್ನೂ ಅನೇಕ ಅರಸರು ದೀಕ್ಷೆಯನ್ನು ಪಡೆದರು. ಆಗ ಆ ಊರಲ್ಲಿ ಎಲ್ಲರಿಗೂ ಸಮ್ಯಕ್ತ್ವವೊದಗಿತು. ಅದರಿಂದ ನನಗೂ ಸಮ್ಯಕ್ತ್ವವಾಯಿತೆಂದು ನಾಗಶ್ರೀ ಹೇಳಿದಳು. ಇದಕ್ಕೂ ಕುಂದಲತೆಯೊಡಂಬಡಲಿಲ್ಲ. ಮಿಕ್ಕವರೆಲ್ಲರೂ ಒಡಂಬಟ್ಟರು.

## ಒಂಭತ್ತನೆಯ ಸಂಧಿ—ಪದ್ಮಲತೆ ಹೇಳಿದ ಪದ್ಮಶ್ರೀಯ ಕಥೆ.

ಅಂಗದೇಶದಲ್ಲಿ ಚಂಪಾಪುರಕ್ಕೆ ಅರಸ ದಾಡಿವಾಹನ; ರಾಣಿ ಪದ್ಮಾವತಿ. ಅಲ್ಲಿ ವಿಮಲದಾಸನೆಂಬ ಸೆಟ್ಟಿಗೂ ಅವನ ಹೆಂಡತಿ ಪದ್ಮೆಗೂ ಪದ್ಮಶ್ರೀಯೆಂಬ ಮಗಳೊಬ್ಬಳಿದ್ದಳು. ಇವಳೊಂದುದಿನ ವಾಸುಪೂಜ್ಯತೀರ್ಥಂಕರರ ಹೊಸ ಬಸದಿಗೆ ಹೋಗಿ ವಿಧಿಪೂರ್ವಕವಾಗಿ ಪೂಜೆಯನ್ನು ಮಾಡುತ್ತಿರಲು ಆ ಊರ ಬುದ್ಧದಾಸ ಬುದ್ಧದಾಸಿಯರಿಗೆ ಜನಿಸಿದ ಬುದ್ಧಸಂಘನೆಂಬ ಯುವಕನು ಅವಳ ರೂಪಾತಿಶಯವನ್ನು ಕಂಡು ಮೋಹಗೊಂಡು ಮನೆಗೆ ಬಂದು ಕಾಮಜ್ವರದಿಂದ ತಪಿಸುತ್ತಿದ್ದನು. ಇವನ ಸಂಕಟವನ್ನು ನೋಡಿ ತಾಯ್ತಂದೆಗಳು ವಿಚಾರಿಸಿ ಅವರೊಡನೆ ನಮಗೆ ವಿವಾಹ ಕೂಡದೆಂದು ಎಷ್ಟು ಹೇಳಿದರೂ ಕೇಳದಿದ್ದನು. ಕೊನೆಗೆ ಬುದ್ಧದಾಸನು ಜಿನಮಂದಿರಕ್ಕೆ ಬಂದು ಯಶೋಧರ ಮುನಿಗಳಿಗೆ ನಮಸ್ಕರಿಸಿ ಗುರುಗಳೇ ಈವರೆಗೂ ಕುಸಮಯಲ್ಲಿ ಬಿದ್ದು ಕೆಟ್ಟೆನು, ನನ್ನನ್ನು ಉದ್ಧರಿಸಬೇಕೆಂದು ಬೇಡಿ ಅವರಿಂದ ವ್ರತವನ್ನು ಪಡೆದು ಜೈನವೇಷವನ್ನು ಧರಿಸಿ ವಿಮಲದಾಸನೊಡನೆ ಸ್ನೇಹವನ್ನು ಬೆಳೆಯಿಸಿದನು. ಹೀಗಿರಲು ವಿಮಲದಾಸನು ಅಷ್ಟೋಪವಾಸದ ಮೇಲೆ ಪಾರಣೆಯನ್ನು ತನ್ನ ಮನೆಯಲ್ಲಿ ಮಾಡಬೇಕೆಂದು ಬುದ್ಧದಾಸನನ್ನು ಕೇಳಿಕೊಳ್ಳಲು ಅವನು ಊಟಕ್ಕೆ ಬಂದನು. ಎಡೆಮಾಡಿ ಎಡೆಯಲ್ಲಿ ಕೈಯಿಕ್ಕದಿರಲು ಕಾರಣವೇನೆಂದು ಕೇಳಲು ನಿನ್ನ ಮಗಳಾದ ಪದ್ಮಶ್ರೀಯನ್ನು ನನ್ನ ಮಗನಿಗೆ ಕೊಡುವುದಾದರೆ ಊಟಮಾಡುವೆನೆಂದನು. ಅದಕ್ಕೇನು ನಿಮ್ಮಂತಹ ಸಮ್ಯಗ್ದೃಷ್ಟಿಗಳಲ್ಲಿ ಸಂಬಂಧವನ್ನು ಬೆಳಸುವುದಕ್ಕೆ ಅಡ್ಡಿಯೇನು ಊಟಮಾಡಿಯೆಂದು ವಿಮಲದಾಸನು ಹೇಳಿ ಅವನಿಗೆ ಸನ್ಮಾನಮಾಡಿದನು. ಆ ಮೇಲೆ ಪದ್ಮಶ್ರೀಯನ್ನು ಬುದ್ಧಸಂಘ

ನಿಗೆ ಕೊಟ್ಟು ವೈಭವದಿಂದ ವಿವಾಹವನ್ನು ಮಾಡಿದನು. ಕೆಲವು ದಿನಗಳಾದ ಮೇಲೆ ಬುದ್ಧದಾಸನು ತನ್ನ ಕಪಟವೇಷವನ್ನು ಬಿಟ್ಟು ಎಂದಿನಂತೆ ಬೌದ್ಧನಾದನು. ವಿಮಲ ದಾಸನು ಮೋಸಹೋದೆನೆಂದು ಚಿಂತಿಸುತ್ತಿದ್ದನು. ಪದ್ಮಸಂಘನೆಂಬ ಬುದ್ಧಗುರು ಅಲ್ಲಿಗೆ ಬರಲು ಪದ್ಮಶ್ರೀಯನ್ನು ತಮ್ಮ ಮತಕ್ಕೆಳೆವ ಪ್ರಯತ್ನ ಮಾಡಿದರು. ಆದರೆ ಅವಳ ಪ್ರಶ್ನೆ ಗಳಿಗೆ ಅವರು ಸರಿಯಾದ ಉತ್ತರವನ್ನು ಕೊಡದೆಹೋಗಲು, ಪದ್ಮಶ್ರೀ ಬೇರೊಂದು ಮನೆಯಲ್ಲಿ ಇರಬೇಕಾಯ್ತು. ಬುದ್ಧಸಂಘನೆಂದಿನಂತೆ ಅವಳಲ್ಲಿ ಪ್ರೇಮದಿಂದಿರುತ್ತಿ ದ್ದನು. ಹೀಗಿರಲು ವಿಮಲದಾಸನಿಗೆ ಉತ್ತಮ ಸಮಾಧಿಯಾಯ್ತು. ದುಃಖಿಸುತ್ತಿದ್ದ ಪದ್ಮಶ್ರೀಯನ್ನು ಸಮಾಧಾನಪಡಿಸಲಿಕ್ಕೆ ಬಂದ ಬೌದ್ಧಗುರು ಮಗಳೇ ತಂದೆ ಸತ್ತುದಕ್ಕೆ ಚಿಂತೆಯೇಕೆ? ಈಗಾವ ಜಿಂಕೆಯ ಹೊಟ್ಟೆಯಲ್ಲಿಯೋ ಹುಟ್ಟಿರುವನು. ಇದಕ್ಕೆ ಕರಕರೆ ಬೇಡವೆಂದನು. ನಿಮಗೆ ಹೇಗೆ ತಿಳಿಯಿತಿದು? ಎಂದು ಪದ್ಮಶ್ರೀ ಕೇಳಿದಳು. ನಾವು ತ್ರಿಕಾಲ ಜ್ಞಾನಿಗಳು, ನಮಗೆ ತಿಳಿಯದುದೊಂದೂ ಇಲ್ಲ ಎಂದು ಗುರು ಹೇಳಿದನು. ಅದಕ್ಕವಳು ಆಗಳೇ ಉತ್ತರವನ್ನು ಹೇಳದೆ ಸುಮ್ಮನಿದ್ದು ಕೆಲವು ದಿನಗಳಾದ ಮೇಲೆ ಅವರೆಲ್ಲರನ್ನೂ ಊಟಕ್ಕೆ ಕರೆದಳು. ಬಂದವರಿಗೆ ಸತ್ಕಾರ ಮಾಡಿ ಕುಳ್ಳಿರಿಸಿ ಆರಿಗೂ ತಿಳಿಯದಂತೆ ಅವರ ಎಡಗಾಲ ಕೆರಹುಗಳನ್ನು ತೆಗೆಯಿಸಿ ಅವುಗಳನ್ನು ತರಿಸಿ, ಸಂಬ ಳಿಸಿ, ಹಸನಾಗಿ ಪಾಕಮಾಡಿಸಿ ಊಟಮಾಡಿಸಿದಳು. ಉಂಡು ತೇಗಿ ಕೈತೊಳೆದು ತಾಂಬೂಲವನ್ನು ಹಾಕಿಕೊಂಡು ಪದ್ಮಶ್ರೀಯ ಸತ್ಕಾರವನ್ನು ಕೊಂಡಾಡಿ ನಿನ್ನಂತಹ ಗುಣವಂತೆ ಮನಸು ಮಾಡಿ ನಮ್ಮ ಮತಕ್ಕೆ ಸೇರಿದರೆ ಒಳ್ಳೆಯದೆಂದು ಹೇಳುತ್ತ ಹೊರಟರು. ಕಾಲಕೆರಹುಗಳಲ್ಲಿ ಒಂದೊಂದಿಲ್ಲದೆ ಹೋದುದನ್ನು ಕಂಡು ತೊತ್ತನ್ನು ಕೇಳಿದರು; ತೊತ್ತು ಮನೆಯೊಡತಿಯನ್ನು ಕೇಳಿ ಎಂದಳು. ಮನೆಯೊಡತಿ ಯಾದ ಪದ್ಮಶ್ರೀ ನೀವು ತ್ರಿಕಾಲ ಜ್ಞಾನಿಗಳು; ನನ್ನ ತಂದೆ ಜಿಂಕೆಯಾಗಿರುವನೆಂದು ಹೇಳಿದಿರಲ್ಲಾ; ನಿಮ್ಮ ಕೆರಹುಗಳು ಹೋದ ಪರಿ ನಿಮಗೆ ತಿಳಿಯದೇ? ನಿಮ್ಮ ಹೊಟ್ಟೆ ಯೊಳಗಿರುವುದೇ ನಿಮಗೆ ತಿಳಿಯದು, ತ್ರಿಕಾಲಜ್ಞಾನವೆಲ್ಲಿಯದು ನಿಮಗೆ ಎಂದು ಹೇಳಿ ದಳು. ಆಗ ಅವರು ನಮ್ಮ ಹೊಟ್ಟೆಯೊಳಕ್ಕೆ ಹೇಗೆ ಹೋದುವು? ಎಂದರು. ನೋಡಿ ಪರೀಕ್ಷೆ ಮಾಡಿ ಎಂದವಳು ಹೇಳಲು, ಅವರು ಬಾಯೊಳೆ ಕೈಹಾಕಿ ಓಕರಿಸಿದರು. ಆಗ ಅವರ ಕೆರಹಿನ ತುಕ್ಕಡಗಳು ಬಂದವು. ಅದನ್ನು ನೋಡಿ ಜಿಗುಪ್ಸೆಪಟ್ಟು, ಮೋಸ ಮಾಡಿದಳೆಂದು ಅವಳ ಮೇಲೆ ಕೋಪಗೊಂಡು, ಸಭೆಯಲ್ಲಿದ್ದ ರಾಯನ ಬಳಿಗೆ ಬಂದು ಚಮತ್ಕಾರದ ಮಾತುಗಳನ್ನು ಹೇಳಿ ಪದ್ಮಶ್ರೀಯನ್ನು ಊರಬಿಟ್ಟು ಹೊರಡಿಸಿದರು. ಬುದ್ಧ ಸಂಘನೂ ಅವಳೊಡನೆ ಹೊರಡಲು ಬದ್ಧದಾಸನು ಅವನಿಗೆ ಬೇಕಾದಷ್ಟು ಹಣವನ್ನು ಕೊಟ್ಟು ಕಳುಹಿದನು. ಬರುತ್ತ ದಾರಿಯಲ್ಲಿ ಇಭದತ್ತ ಈಶ್ವರದತ್ತರೆಂಬ ವರ್ತಕರು ವ್ಯಾಪಾರ ಮಾಡಲಿಕ್ಕೆ ಹೊರಟವರು ಇಳಿದಿದ್ದ ಕಡೆ ತಾವೂ ಬಂದು ಇಳಿಯಲು ಇಭ ದತ್ತನು ಇವರನ್ನು ತಕ್ಕ ಮರ್ಯಾದೆಯಿಂದ ಕಂಡು, ಪದ್ಮಶ್ರೀಯನ್ನು ಹೆಂಗಸರೊಡನೆ ಸೇರಿಸಿ, ಬುದ್ಧಸಂಘನಿಗೆ ತನ್ನೊಡನೆ ಭೇದವಿಲ್ಲದೆ ಊಟ ಮೊದಲಾದುಪಚಾರಗಳನ್ನು ಮಾಡುಸುತ್ತಿದ್ದನು. ಆದರೆ ಅವರೊಳಗೆ ಇಭದತ್ತನನ್ನು ಕೊಲ್ಲಬೇಕೆಂದು ಈಶ್ವರದ ತ್ತನು ಎಣಿಸಿ ಅಡುಗೆ ಮಾಡುವವಳಿಗೆ ಗುಟ್ಟಾಗಿ ಹೇಳಿ ವಿಷವನ್ನು ಬೆರಸಿದ ಕೆಲವು

ಖಜ್ಜಾಯಗಳನ್ನು ತೆಗೆದಿಟ್ಟು ಇವನ್ನು ಸೆಟ್ಟರಿಗೆ ( ಇಭದತ್ತನಿಗೆ ) ಅಲ್ಲದೆ ಮತ್ತಾರಿಗೂ ಬಡಿಸಬಾರದು ಎಂದು ಹೇಳಿದನು. ಬಡಿಸುವಾಗ ಪದ್ಮಶ್ರೀ ಪಂಕ್ತಿಭೇದ ಕೂಡ ದೆಂದು ಆ ಮಾತನ್ನು ಕೇಳದೆ ಎಲ್ಲರಿಗೂ ಸರಿಯಾಗಿ ಬಡಿಸಿಬಿಟ್ಟಳು. ಊಟಮಾಡಿ ಕೈ ತೊಳವಾಗ ಎಲ್ಲರೂ ಜ್ಞಾನವು ತಪ್ಪಿ ಬಿದ್ದರು. ಅದನ್ನು ಕಂಡು ಪದ್ಮಶ್ರೀ ಇದು ನನ್ನ ಕರ್ಮ. ಇನ್ನು ನನಗೆ ದೀಕ್ಷೆಯೇ ಮುಂದಿನ ಕೆಲಸವೆಂದು ಜಿನಸ್ಮರಣೆಯನ್ನು ಮಾಡುತ್ತಿದ್ದಳು. ಆಗ ಕೆಲವರು ಪದ್ಮಶ್ರೀ ಮತ್ತೊಬ್ಬನೊಡನೆ ಓಡಿ ಹೋಗಬೇಕೆಂದು ಗಂಡನಿಗೆ ವಿಷವನ್ನಿಕ್ಕಿದಳೆಂದು ಹೇಳಲು ಆ ಸುದ್ಧಿ ಎಲ್ಲೆಲ್ಲಿಗೂ ಹರಡಿತು. ಅದನ್ನು ಕೇಳಿ ಬುದ್ಧದಾಸನು ಕೋಪದಿಂದ ಬಂದು, ಪದ್ಮಶ್ರೀಯನ್ನು ಕೊಲ್ಲಬೇಕೆಂದು ಹರತ ವಾದ ಕತ್ತಿಯನ್ನು ಅವಳ ಕುತ್ತಿಗೆಯ ಮೇಲೆ ಹಾಕಿದನು. ಆಗ ಪದ್ಮಶ್ರೀ ಪಂಚಪದ ಗಳನ್ನು ಸ್ಮರಿಯಿಸುತ್ತಿರಲು, ನಗರದೇವತೆಗಳು ಆ ಕತ್ತಿಯನ್ನು ಹೂಮಾಲೆಯಂತೆ ಮಾಡಿ, ಅವಳಿಗೆ ಪೂಜೆಗಳನ್ನು ಮಾಡುತ್ತಿರಲು ಪಂಚಾಶ್ಚರ್ಯಗಳಾದುವು. ದಾಡಿವಾ ಹನರಾಯನು ಅಲ್ಲಿಗೆ ಬಂದು, ಹಲವು ಬಗೆಯಿಂದ ಕೊಂಡಾಡಿ, ಜಿನದರ್ಶನದ ಮಹಿ ಮೆಗೆ ಮೆಚ್ಚಿ, ತನ್ನ ಮಗನಾದ ನಯವಿಕ್ರಮನಿಗೆ ರಾಜ್ಯವನ್ನು ಕೊಟ್ಟು ಯಶೋಧರ ಮುನಿಗಳಲ್ಲಿ ದೀಕ್ಷೆಯನ್ನು ಪಡೆದನು; ಬುದ್ಧದಾಸನು ಶ್ರಾವಕನಾದನು. ಪಟ್ಟದರಿಸಿ ಪದ್ಮಾವತಿ, ಪದ್ಮಶ್ರೀ ಮೊದಲಾದ ಸ್ತ್ರೀಯರು ಸರಸ್ವತಿಯರೆಂಬ ಕಂತಿಯಿಂದ ದೀಕ್ಷೆ ಯನ್ನು ಪಡೆದರು. ಆಗ ನನಗೂ ಸಮ್ಯಕ್ತ್ವವುಂಟಾಯಿತೆಂದು ಪದ್ಮಲತೆ ಹೇಳಿದಳು. ಈ ಕಥೆಗೂ ಕುಂದಲತೆಯೊಬ್ಬಳೇ ಒಡಂಬಡದವಳು.

## ಹತ್ತನೆಯ ಸಂಧಿ— ಕನಕಲತೆ ಹೇಳಿದ ಉಮಯನ ಕಥೆ.

ಅವಂತಿದೇಶದ ಉಜ್ಜಯಿನಿಯೆಂಬ ನಗರದಲ್ಲಿ ನರಪಾಲಕನೆಂಬ ರಾಯನೂ ಮದನಶಕ್ತಿಯೆಂಬ ರಾಣಿಯೂ, ಮದನದೇವನೆಂಬ ಮಂತ್ರಿಯೂ ಪ್ರಜಾಪಾಲನೆ ಮಾಡುತ್ತಿರುವಂದು ಸಾಗರದತ್ತನೆಂಬ ವೈಶ್ಯೋತ್ತಮನಿಗೂ ಅವನ ಹೆಂಡತಿ ಸಾಗರ ದತ್ತೆಯೆಂಬಳಿಗೂ ಉಮಯನೆಂಬ ಮಗನೂ ಜಿನದತ್ತೆಯೆಂಬ ಮಗಳೂ ಇದ್ದರು. ಗುಣವಂತೆಯಾದ ಜಿನದತ್ತೆ ಕೌಶಂಬಿಯೆಂಬ ಪಟ್ಟಣದಲ್ಲಿ ಜಿನದತ್ತನೆಂಬ ವೈಶ್ಯೋ ತ್ತಮನನ್ನು ಮದುವೆಯಾಗಿ ಸುಖದಿಂದಿದ್ದಳು. ಉಮಯನಾದರೋ ದುರ್ಬುದ್ಧಿಯುಳ್ಳ ವನಾಗಿ ದುರ್ವ್ಯಸನಗಳಲ್ಲಿ ಬಿದ್ದು ತಂದೆತಾಯಿಗಳಿಗೆ ಅಪಕೀರ್ತಿಯನ್ನು ತರುತ್ತಿದ್ದು ದನ್ನು ಕಂಡು ಅವರು ಹಲವುಪರಿಯಿಂದ ಬುದ್ಧಿ ಹೇಳಿದರೂ ಕೇಳದಿದ್ದನು. ಒಂದು ಅಂಗಡಿಯಲ್ಲಿ ಕದ್ದು ಮತ್ತೊಂದಂಗಡಿಯಲ್ಲಿಟ್ಟು ಕಂಡಕಡೆ ಜೂಜಾಡಿ, ಸೂಳೆಯರಿಗೆ ಕೊಟ್ಟು, ಅಲೆಯುತ್ತಿದ್ದುದನ್ನು ತಿಳಿದು ಆ ಊರ ತಳವಾರನಾದ ಯಮದಂಡನು ಅವನನ್ನು ಕರೆದು ಬುದ್ಧಿ ಹೇಳಿದನು. ಎಷ್ಟು ಬಾರಿ ತಪ್ಪು ಮಾಡಿದರೂ ಶಿಕ್ಷೆಯನ್ನು ವಿಧಿಸದೆ ಸಾಗರದತ್ತನ ಮಗನೆಂದು ಬುದ್ಧಿ ಹೇಳಿದನೆಂದು ವಿವೇಕವನ್ನು ತಂದುಕೊ ಳ್ಳದೆ ಉಮಯನು ಬಲಕಾಯಿಸಿಕೊಂಡು ಅರಮನೆಯ ಭಂಡಾರಕ್ಕೆ ಕನ್ನವನ್ನು ಹಾಕಲು ಅಲ್ಲಿದ್ದ ಪಹರಿಯವರು ಹಿಂಗಟ್ಟು ಮುರಿಗಟ್ಟು ಕಟ್ಟಿ ಕಾಲದಂಡನ ಬಳಿಗೆ ತಂದೊಪ್ಪಿಸಿದರು. ಬೆಳಗಾಗಲು ತಳವಾರನು ಅಸ್ಥಾನಕ್ಕೆ ಕರೆತಂದು ಇವನು ಸಾಗರ

ದತ್ತಸೆಟ್ಟಿಯ ಮಗನೆಂದು ಹೇಳಿ ಅರಸನಿಗೆ ಒಪ್ಪಿಸಿದನು. ಆಗ ಅರಸನು ಬಹಳವಾಗಿ ಬುದ್ಧಿ ಹೇಳಿ ಸಾಗರದತ್ತನನ್ನು ಬರಿಸಿ ಏಕಪುತ್ರವಾತ್ಸಲ್ಯದಿಂದ ಮಗನಿಗೆ ತಕ್ಕ ವಿದ್ಯೆಯನ್ನು ಕಲಿಸದೆ ಬುದ್ಧಿ ಹೇಳದೆ ಕೆಡಿಸಿದೆಯೆಂದು ಅವನಿಗೆ ಹೇಳಿದನು. ಸೆಟ್ಟಿ— ಮಹಾಸ್ವಾಮಿ, ತಾವು ನನಗೆ ಈ ರೀತಿಯಿಂದ ನೀತಿಯನ್ನು ಬೋಧಿಸುವುದು ನನ್ನ ಭಾಗ್ಯವೆಂದು ಹೇಳಿ ಮನೆಗೆ ಬಂದು ಮಗನಿಗೆ ಕೆಟ್ಟ ಮಗನಿಂದ ಕುಲನಾಶವಾಗುವುದು. ನೀನು ನಿನ್ನ ಮನಬಂದಂತೆ ಬದುಕು ಹೋಗೆಂದು ಮನೆಯನ್ನು ಬಿಟ್ಟು ಹೊರಡಿಸಿದನು. ಉಮಯನು ಊರನ್ನು ಬಿಟ್ಟು ನಡೆದು ಕೌಶಂಬಿಪುರಕ್ಕೆ ಬಂದು ತನ್ನ ತಂಗಿಯಾದ ಜಿನದತ್ತೆಯ ಮನೆಗೆ ಹೋದನು. ಇವನ ದುಶ್ಚರಿತವನ್ನು ಅರಿತಿದ್ದ ಆ ಗುಣವಂತೆ ಇವನನ್ನು ಮನೆಗೆ ಸೇರಿಸದೆ ಕಳುಹಲು ಆ ಊರೊಳಗಿದ್ದ ಚೈತ್ಯಾಲಯಕ್ಕೆ ಹೋಗಿ ಅಲ್ಲಿದ್ದ ಶ್ರುತಸಾಗರ ಮುನಿಗಳಿಗೆ ವಂದಿಸಿ ಜೈನ ವ್ರತವನ್ನು ಬೇಡಲು ಅವರು ಸಂತೋಷದಿಂದ ಮಗನೆ ಹೆಸರನರಿಯದ ಮರದ ಹಣ್ಣನ್ನು ತಿನ್ನಬೇಡವೆಂದು ಹೇಳಿ ಕಳುಹಿದರು. ಉಮಯನು ಹೀಗೆ ದುಶ್ಚರಿತ್ರವನ್ನು ಬಿಟ್ಟು ಜೈನ ಗುರುಗಳುಪದೇಶದಿಂದ ಸುವ್ರತನಾದುದನ್ನು ಕೇಳಿ, ಜಿನದತ್ತೆಯುವನನ್ನು ಮನೆಗೆ ಕರೆಯಿಸಿ ಉಪಚರಿಸಿ ಬೇಕಾದಷ್ಟು ಹಣವನ್ನು ವ್ಯಾಪಾರಮಾಡೆಂದು ಕೊಟ್ಟಳು. ಆ ಹಣದಿಂದ ರತ್ನಪಡಿ ವ್ಯಾಪಾರವನ್ನು ಮಾಡುವೆನೆಂದು ಆ ಊರ ವರ್ತಕರೊಡನೆ ಹೊರಟು ಉಜ್ಜಯಿನಿಯ ಮಾರ್ಗವಾಗಿ ಬರುತ್ತಿರಲು ನಡುವೆ ದಾರಿ ತಪ್ಪಿ ಒಂದು ಘೋರಾರಣ್ಯವನ್ನು ಹೊಗುವ ಸಮಯಕ್ಕೆ ಸಂಜೆಯಾಯ್ತು. ಜೊತೆಯ ವರ್ತಕರೊಡನೆ ಹೇಗೋ ಆ ರಾತ್ರಿಯನ್ನು ಕಳೆದು ಉದಯವಾಗಲು ಆ ಅಡವಿಯೊಳಗಿದ್ದ ಒಂದು ಕೊಳದಲ್ಲಿ ಸ್ನಾನಸಂಧ್ಯಾವಂದನೆಗಳನ್ನು ಮಾಡಿ ಊರ ದಾರಿ ಯಾವುದೆಂದು ಹುಡುಕುತ್ತ ಮಧ್ಯಾಹ್ನದವರೆಗೆ ಅಲೆದು ಕೊನೆಗೆ ಬಳಲಿ ಸುಂದರವಾಗಿಯೂ ಫಲಭರಿತವಾಗಿಯೂ ಇರುವ ಮರಗಳನ್ನು ಕಂಡು ಆ ಹಣ್ಣುಗಳನ್ನು ತಿಂದು ಹಸಿವಾರಿಸಿಕೊಳ್ಳಬೇಕೆಂದು ಹಣ್ಣುಗಳನ್ನು ಕೊಯ್ಯುವ ಸಮಯಕ್ಕೆ ಅಲ್ಲಿಗೆ ಒಬ್ಬ ಶತವೃದ್ಧೆ ಬಂದು ಆ ಹಣ್ಣುಗಳನ್ನು ಕೊಯ್ದು ತಿಂದೊಡನೆ ಸುಂದರವಾದ ಯೌವನೆಯಾದಳು. ಅದನ್ನು ಕಂಡು ಉಮಯನು ಅವಳು ಈ ರೀತಿಯಾಗಿ ಯೌವನವನ್ನೂ ರೂಪವನ್ನೂ ಪಡೆಯಲಿಕ್ಕೇನುಕಾರಣವೆಂದವಳನ್ನು ಕೇಳಲು ಈ ಹಣ್ಣಿನ ಮಹತ್ತಲ್ಲದೆ ಮತ್ತೇನು ನೀವೂ ತಿನ್ನಿರಿ ಎಂದಳು. ಅದರ ಹೆಸರೇನೆಂದು ಕೇಳಲು, ಹೆಸರೇನೆಂದರಿಯೆನೆಂದಳು. ಆಗ ಹೆಸರನ್ನು ಅರಿಯದ ಮರದ ಹಣ್ಣನ್ನು ತಿನಲಾರೆನೆಂದು ಉಮಯನುತ್ತರಕೊಟ್ಟನು. ಆ ಹೆಂಗಸು ಇವನ್ನು ತಿನ್ನಲಿಕ್ಕೆ ಒಡಂಬಡಿಸಬೇಕೆಂದು ಚರ್ಚೆಮಾಡುತ್ತಿರುವಷ್ಟರೊಳಗೆ ಉಮಯನೊಡನೆ ಬಂದ ವೈಶ್ಯರು ಆ ಹಣ್ಣುಗಳನ್ನು ತಿಂದು ಧೊಪ್ಪನೆ ನೆಲಕ್ಕೆ ಬಿದ್ದುರುಳಿದುದನ್ನು ಉಮಯನು ನೋಡಿ ಇದೇಕೆ ಇವರು ಹೀಗಾದರೆಂದು ಅವಳನ್ನು ಕೇಳಿದನು. ಅದಕ್ಕವಳು ನಗುತ್ತ ಇವು ನೋಟಕ್ಕೆ ಅಂದವಾಗಿದ್ದರೂ ವಿಷದ ಫಲಗಳು ಎಂದಳು. ಹಾಗಾದರೆ ನಿನಗೆ ಮುದಿತನವು ಹೋಗಿ ಹರೆಯವು ಬಂದುದು ಹೇಗೆ ಎಂದು ಉಮಯನು ಕೇಳಿದನು. ಆಗ ಅವಳು ನಾನು ವನದೇವತೆ, ನಿನ್ನ ಮನಸ್ಸನ್ನು ಪರೀಕ್ಷೆಮಾಡಲಿಕ್ಕೆ ಇಲ್ಲಿಗೆ ಬಂದೆನು. ನಿನ್ನ ವ್ರತಕ್ಕೆ ಮೆಚ್ಚಿದೆನು. ನಿನಗೆ ಬೇಕಾದುದನ್ನು ಕೇಳೆನಲು

ಉಮಯನು ತಡಮಾಡದೆ ಈ ಬಿದ್ದಿರುವ ಬಂಧುಗಳನ್ನು ಬದುಕಿಸಿಕೊಟ್ಟು ನಮ್ಮ ಊರಿಗೆ ನಮ್ಮನ್ನು ಸೈರಿಸು ಎಂದು ಕೇಳಿಕೊಂಡನು. ವನದೇವತೆ ಹಾಗೆಯೇ ಮಾಡಲು ನಗರದೇವತೆಗಳೊಡನೆ ಕೂಡಿಕೊಂಡು ಉಮಯನಿಗೆ ಸನ್ಮಾನವನ್ನು ಮಾಡುತ್ತಿರಲು ಪಂಚಾಶ್ಚರ್ಯಗಳಾದುವು. ಆಗ ಊರ ಜನರೆಲ್ಲರೂ ಜಾತ್ರೆಯಾಗಿ ನೆರೆದು ಈ ಸಂಭ್ರಮವನ್ನು ನೋಡುತ್ತಿರಲು, ನರಪಾಲಕರಾಯನು ಜಿನಸಮಯವನ್ನು ನೆರೆನಂಬಿದವನಾಗಿ, ಮಗನಿಗೆ ರಾಜ್ಯವನ್ನು ಕೊಟ್ಟು, ಮಂತ್ರಿಸಹಿತನಾಗಿ ಆ ಶ್ರುತಸಾಗರಮುನಿಗಳಲ್ಲಿ ಉಮಯನೊಡನೆ ದೀಕ್ಷೆಯನ್ನು ಧರಿಸಿದನು. ಮದನಶಕ್ತಿದೇವಿಯೂ ಸಾಗರದತ್ತನ ಹೆಂಡತಿಯೂ ಇನ್ನೂ ಅನೇಕ ಮಹಿಳೆಯರು ಸುಪ್ರಭೆಯರೆಂಬ ಕಂತಿಕೆಯರಲ್ಲಿ ಜಿನದೀಕ್ಷೆಯನ್ನು ಪಡೆದರು. ಇದೆಲ್ಲವನ್ನೂ ನೋಡಿ ನನಗೂ ಸಮ್ಯಕ್ತ್ವವುಂಟಾಯಿತೆಂದು ಕನಕಲತೆ ಹೇಳಿದಳು.

## ಹನ್ನೊಂದನೆಯ ಸಂಧಿ—ವಿದ್ಯುಲ್ಲತೆ ಹೇಳುವ ಕಥೆ.

ಸೌರದದೇಶದಲ್ಲಿ ಸುಬ್ಜಕೌಶಂಬಿ ಎಂಬ ನಗರವುಂಟು. ಅಲ್ಲಿ ಸುದಂಡನೆಂಬವನು ಅರಸನು, ರಾಣಿ ವಿಜಯೆ; ಮಂತ್ರಿ ಸದ್ಬುದ್ಧಿ. ವೈಶ್ಯೋತ್ತಮನು ರಸಿಕಸುರದೇವನೂ ಅವನ ಹೆಂಡತಿ ಗುಣಶ್ರೀಯೊಡನೆ ಸುಖವಾಗಿದ್ದು, ದೇಶಾಂತರಕ್ಕೆ ಹೋಗಿ ಸೂರ್ಯಾಶ್ವಗಳನ್ನು ಮೀರಿಸುವ ಜಾತ್ಯಶ್ವವನ್ನು ತಂದು ಅರಸನಿಗೆ ಕಾಣಿಕೆಯಾಗಿ ಕೊಟ್ಟು ಬಹಳ ಧನಿಕನಾಗಿ ದಿನತಪ್ಪದೆ ಅರ್ಹತ್ಪೂಜೆ, ದಾನಶೀಲೋಪವಾಸಂಗಳನ್ನು ಮಾಡಿ ಲೋಕಸ್ತುತ್ಯನಾಗಿದ್ದನು. ಹೀಗಿರಲೊಮ್ಮೆ ಅಲ್ಲಿಗೆ ಚಂದ್ರಕೀರ್ತಿಗಳೆಂಬ ತಪೋಧನರು ಐನೂರ್ವರು ಋಷಿಯರೊಡನೆ ಬರಲು ಅವರನ್ನು ಸತ್ಕರಿಸಿ ಅನ್ನದಾನವನ್ನು ಮಾಡಲು ಆಶ್ಚರ್ಯಪಂಚಕಗಳಾದುವು. ಅದನ್ನು ಕಂಡು ವಾರಿಧಿದತ್ತನಿಗೂ ಲಕ್ಷ್ಮೀಮತಿಗೂ ಹುಟ್ಟಿದ ಸಮುದ್ರದತ್ತನೆಂಬ ಸೆಟ್ಟಿಗೆ ತಾನೂ ಇವನಂತೆ ಐಶ್ವರ್ಯವನ್ನು ಪಡೆದು ಸತ್ಪಾತ್ರಕ್ಕೆ ದಾನವನ್ನು ಮಾಡಬೇಕೆಂದು ಹುರುಡು ಹುಟ್ಟಿತು. ತನ್ನ ಬಡತನಕ್ಕೆ ಬಹಳ ಮರುಗಿ ಕೂಲಿಯ ಕೆಲಸವನ್ನಾದರೂ ಮಾಡಿ ಹಣವನ್ನು ಪಡೆಯಬೇಕೆಂಬ ಆಶೆಯಿಂದ, ಹಿಂದಕ್ಕೆ ತಾನು ದೊಡ್ಡಮನೆತನದವನೆಂಬ ಬರಿಯ ಬಡಾಯನ್ನು ಬಿಟ್ಟು ಊರಿಂದ ಹೊರಟು ಕೆಲವರು ಸಹಾಯಿಗಳೊಡನೆ ಸಮುದ್ರದ ತೀರಕ್ಕೆ ಬಂದು ಹಡಗಿನ ಸೆಟ್ಟಿಗಳನ್ನು ಬೇಡಿಕೊಂಡು ಉತ್ತರದಿಕ್ಕಿನಲ್ಲಿರುವ ಭಗದತ್ತವೆಂಬ ದೇಶಕ್ಕೆ ಬಂದು ಅಲ್ಲಿಯ ಪಲಾಶಗ್ರಾಮವೆಂಬ ಊರನ್ನು ಹೊಕ್ಕು ಇಂದಿಗೆ ಮೂರು ವರುಷಕ್ಕೆ ಸರಿಯಾಗಿ ನಾವು ತಪ್ಪದೆ ಇಲ್ಲಿಗೆ ಬಂದು ಕೂಡಬೇಕೆಂದು ಸಂಕೇತವನ್ನು ಮಾಡಿಕೊಂಡು ಜೊತೆಗಾರರು ದಿಕ್ಕುದಿಕ್ಕಿಗೆ ಹೊರಟುಹೋದರು. ಸಮುದ್ರದತ್ತನು ಅಂದು ಅಲ್ಲಿಯೇ ನಿಂತಿರಲು ಅಲ್ಲಿಗೆ ಅಶೋಕನೆಂಬನು ತನ್ನ ಕುದುರೆಗಳನ್ನು ಕಾಯಲಿಕ್ಕೆ ಆಳನ್ನು ಹುಡುಕುತ್ತ ಬಂದು ಸಮುದ್ರದತ್ತನನ್ನು ಕೇಳಲು, ನಿನ್ನ ಮನಬಂದುದನ್ನು ಸಂಬಳವಾಗಿ ಕೊಡೆಂದು ಕೇಳಿದನು. ಅಶೋಕನಾಮಾತನ್ನು ಕೇಳಿ ಮೂರು ವರುಷವೂ ನೀನು ಚೆನ್ನಾಗಿ ಕುದುರೆಗಳನ್ನು ಕಾದರೆ ನಿನಗೆ ನನ್ನ ಜಾತ್ಯಶ್ವಗಳೊಳಗೆ ಬೇಕಾದ ಎರಡನ್ನು ಕೊಡುವೆನೆಂದು ಹೇಳಿ ಮನೆಗೆ ಕರೆದುಕೊಂಡು ಹೋದನು.

ಮನೆಯವರಂತೆ ಸಮುದ್ರದತ್ತನಿಗೆ ಉಪಚಾರವಾಗುತ್ತಿತ್ತು. ಅಶೋಕನ ಮಗಳು ಕಮಲೆಯೆಂಬವಳು ಇವನಲ್ಲಿ ಅನುರಾಗಗೊಂಡಿರಲು, ಅವಧಿಯ ಮೂರು ವರುಷವು ಮುಗಿಯುತ್ತ ಬರಲು, ಏಕಾಂತದಲ್ಲಿ ಇನ್ನು ನಾನು ನಮ್ಮ ನಾಡಿಗೆ ಹೋಗುವ ದಿನವು ಬಂತೆಂದನು. ಅದಕ್ಕವಳು ಈ ಜನ್ಮಕ್ಕೆ ನನಗೆ ನೀನೇ ಪತಿ, ನಿನ್ನೊಡನೆ ಬರುವೆನು ಎಂದಳು. ನಮ್ಮ ನಾಡಿಲ್ಲಿಗೆ ಬಹುದೂರ–ಬರುವುದಸಾಧ್ಯವೆಂದು ಸಮುದ್ರದತ್ತನು ಹೇಳಿದನು. ಆಗ ಅವಳು—ಮೊದಲು ನಮ್ಮ ತಂದೆ ನಿನಗೆ ಎರಡು ಜಾತ್ಯಶ್ವಗಳನ್ನು ಆರಿಸಿಕೊಳ್ಳೆಂದು ಭಾಷೆಯನ್ನು ಕೊಟ್ಟಿರುವನಲ್ಲವೆ! ಆ ಕುದುರೆಗಳೊಳಗೆ ಒಂದು ಆಕಾಶಗಾಮಿ ಒಂದು ಜಲಗಾಮಿ ನೀನವನ್ನು ತೆಗೆದುಕೊಂಡರೆ ನಾವು ಬೇಕಾದಲ್ಲಿಗೆ ಹೋಗಬಹುದೆಂದು ಉಪಾಯವನ್ನು ಹೇಳಿಕೊಟ್ಟಳು. ಆ ಕುದರೆಗಳ ಲಕ್ಷಣಗಳನ್ನು ಪರೀಕ್ಷಿಸಿ, ಜೊತೆಗಾರರ ಆಗಮನವನ್ನು ನಿರೀಕ್ಷಿಸುತ್ತಿರಲು ಹಿಂದೆ ಕುರಿತ ಅವಧಿಗೆ ಸರಿಯಾಗಿ ಅವರು ಪಲಾಶಗ್ರಾಮಕ್ಕೆ ಬಂದರು. ಸಮುದ್ರದತ್ತನು ಕೂಡಲೆ ಅಶೋಕನ ಬಳಿಗೆ ಬಂದು ನನ್ನ ಕಾಪಿನ ದಿನಗಳು ಮುಗಿದುವು ಎನಲು ಒಡನೆಯೇ ಕುದುರೆಗಳ ಲಾಯಕ್ಕೆ ಕರೆದುಕೊಂಡು ಬಂದು ನಿನ್ನ ಮನಸಿಗೆ ಬಂದ ಎರಡು ಕುದುರೆಗಳನ್ನು ತೆಗೆದುಕೊಳ್ಳೆಂದನು. ಸಮುದ್ರದತ್ತನು ತನಗೆ ಬೇಕಾದುವನ್ನು ಬೇರೆ ಇರಿಸಲು ಅಶೋಕನು—ಎಲೆ ಹುಚ್ಚಾ! ಸೂರ್ಯಾಶ್ವಕ್ಕೆ ಸಮಾನವಾದ ಕುದುರೆಗಳನ್ನು ಬಿಟ್ಟು, ಸ್ವಲ್ಪಕಾಲಕ್ಕೆ ಸತ್ತು ಹೋಗುವ ಕುದುರೆಗಳನ್ನು ಆಯ್ದುಕೊಂಡೆಯಾ? ಎನಲು ನಾನು ಪುಣ್ಯಹೀನನಾದುದರಿಂದ ಇವು ನನ್ನ ಪಾಲಿಗೆ ಬಂದುವು. ಒಂದು ಬಾರಿ ಆರಿಸಿದ ಬಳಿಕ ಬೇಡವೆಂದು ಮತ್ತೊಂದು ಬಾರಿ ಆಯ್ದುಕೊಳ್ಳುವುದು ಸಜ್ಜನಿಕೆಯಲ್ಲ ಎಂದು ಸಮುದ್ರದತ್ತನು ಹೇಳಿದನು. ಆಗ ಅಶೋಕನು ಅವನೆಂದ ಮಾತಿಗೆ ಸಿಟ್ಟುಗೊಂಡು ಪರಿಚಾರಕರೊಡನೆ ಇವನು ಆಡಿದುದನ್ನು ಕೇಳಿದಿರಾ! ಇವನು ನಮ್ಮ ಊರುಕೇರಿಯನ್ನರಿಯನು; ಹೊಸಬ, ಕುದುರೆಗಳ ಕಾಲುಶೀಲನ್ನು ತಿಳಿಯನು; ಇವನಿಗೆ ಈ ಕುದುರೆಗಳ ಮರ್ಮವು ಹೇಗೆ ತಿಳಿಯಿತು? ಎಂದನು. ಆಗ ಅವರೊಳಗೊಬ್ಬನು ಇವೆಲ್ಲವೂ ತಮ್ಮ ಮಗಳು ಕಮಲೆಯ ಕೆಲಸವೆಂದು ಹೇಳಿದೊಡನೆ ಅಶೋಕನು ಸ್ತ್ರೀಯರನ್ನು ನಿಂದಿಸಿ ಕೊನೆಗೆ ವೈರಾಗ್ಯವನ್ನು ತಾಳಿ, ಮಾತಿಗೆ ತಪ್ಪದೆ ಸುಮುಹೂರ್ತದಲ್ಲಿ ಕಮಲೆ ಸಹಿತವಾಗಿ ಆ ಕುದುರೆಗಳನ್ನು ಕೊಟ್ಟು ಕೆಲವು ದಿನದ ಮೇಲೆ ಅವರನ್ನು ಕಳಹಿಕೊಟ್ಟನು. ಸಮುದ್ರದತ್ತನು ಆಕಾಶಗಾಮಿ ಜಲಗಾಮಿಗಳೆಂಬ ಅಶ್ವಗಳೊಡನೆ ಕಮಲೆಯನ್ನು ಕರೆದುಕೊಂಡು ಸುಜ್ಜಕೌಶಂಬಿಗೆ ಬಂದು ತಂದೆತಾಯಿಗಳಿಗೆ ವಂದಿಸಿ ಸುಖದಿಂದಿದ್ದನು. ಸಮುದ್ರದತ್ತನೇರಿ ಬಂದ ಕುದುರೆಗಳನ್ನು ಕಂಡು ಎಲ್ಲರೂ ಆಶ್ಚರ್ಯಪಟ್ಟು ಅರಸನಿಗೆ ಅವನ್ನು ಕಾಣಿಕೆ ಕೊಡಲು ವಾಹಳಿಯನ್ನು ಮಾಡಿಸಲು, ಆ ವೇಥೆಯವನ್ನು ಕಂಡು ಆನಂದಭರಿತನಾಗಿ ಸುದಂಡಮಹಾರಾಯನು ಸಮುದ್ರದತ್ತನಿಗೆ ತನ್ನ ಮಗಳು ಅನಂಗಸೇನೆಯನ್ನೂ ಅರ್ಧ ರಾಜ್ಯವನ್ನೂ ಕೊಟ್ಟನು. ಸಮುದ್ರದತ್ತನ ದಾರಿದ್ರ್ಯವು ಹೋಗಿ ಕುಬೇರನೈಶ್ವರ್ಯವೊದಗಿ ಸುಖದಿಂದಿದ್ದನು. ಇತ್ತ ರಾಜನು ವೃಷಭದಾಸನೆಂಬ ರಾಜಶ್ರೇಷ್ಠಿಯ ಕೈಗೆ ಆಕಾಶಗಾಮಿಯನ್ನು ಕೊಟ್ಟು ಇದನ್ನು ರಕ್ಷಿಸುತ್ತಿರೆಂದು ಹೇಳಿದನು. ವೃಷಭದಾಸನು ಅದನ್ನು ಒಂದು ನೆಲಮಾಳಿಗೆಯಲ್ಲಿರಿಸಿ

ಜೋಪಾನದಿಂದ ನೋಡುತ್ತಿದ್ದನು. ಒಂದುದಿನ ಆ ಗಗನಗಾಮಿಯನ್ನೇರಿ ಆಕಾಶ ಮಾರ್ಗದಿಂದ ವಿಜಯಾರ್ಧಪರ್ವತದ ಸಿದ್ಧಕೂಟವನ್ನು ಕಂಡು ಕುದುರೆಯಿಂದಿಳಿದು ಚೈತ್ಯಾಲಯಕ್ಕೆ ಪ್ರದಕ್ಷಿಣೆಮಾಡಿ ಒಳಹೊಕ್ಕು ವಂದನೆಯನ್ನು ಮಾಡುವಾಗ ಗಗನ ಗಾಮಿಯೂ ಅವನ ಹಿಂದೆಯೇ ಬಂದು ಪ್ರದಕ್ಷಿಣೆಮಾಡಿ ನಮಸ್ಕರಿಸಿತು. ಆ ಬಳಿಕ ವೃಷಭದಾಸನು ಆಕಾಶಮಾರ್ಗವಾಗಿ ಬಂದು ಮನೆಯನ್ನು ಸೇರಿ ನಿಶ್ಚಿಂತನಾಗಿದ್ದು, ಹೀಗೆಯೇ ಪರ್ವತಿಥಿಗಳಲ್ಲಿ ಆ ಪರ್ವತಕ್ಕೆ ಹೋಗಿ ಜಿನವಂದನೆಯನ್ನು ಮಾಡುತ್ತ ಬಂದನು. ಹೀಗೆ ಇವನು ಪುಣ್ಯೋಪಾರ್ಜನೆಯನ್ನು ಮಾಡುತ್ತಿರಲು, ಸುದಂಡರಾಯನ ಶತ್ರುವಾದ ಜಿತಸತ್ಯನೆಂಬ ರಾಯನು ಸುದಂಡರಾಯನಲ್ಲಿ ಅಂಬರಗಾಮಿಯಾದ ಜಾತ್ಯಶ್ವವಿರುವುದೆಂದು ಕೇಳಿ ಆ ಕುದುರೆಯನ್ನು ತಂದು ಕೊಟ್ಟವರಿಗೆ ತನ್ನ ರಾಜ್ಯದೊಳರ್ಧವನ್ನು ಕೊಡುವೆನೆಂದು ಒಡ್ಡೋಲಗದಲ್ಲಿರುವಾಗ ಹೇಳಲು ಕುಂಡಲನೆಂಬ ಭಟನೆದ್ದು ತಾನು ತಂದೊಪ್ಪಿಸುವೆನೆಂದು ಭಾಷೆಯನ್ನು ಹೇಳಿ ಹೊರಟನು. ದೇಶದೇಶಗಳಲ್ಲಿ ಸುತ್ತಿ ಸಾಗರಚಂದ್ರರೆಂಬ ಯೋಗಿಗಳನ್ನು ಕಂಡು ಅವರಿಂದ ಬ್ರಹ್ಮಚರ್ಯವ್ರತವನ್ನು ಪಡೆದು ಕೌಶಂಬಿಗೆ ಸೇರಿ ವೃಷಭದಾಸನು ಮಾಡಿಸಿದ ಚೈತ್ಯಾಲಯಕ್ಕೆ ರಾತ್ರಿ ಹೊತ್ತಿಗೆ ಬಂದು ಕಣ್ಣುಗಳ ಮೇಲೆ ಒಂದು ಬಟ್ಟೆಯನ್ನು ಕಟ್ಟಿ ಚಕ್ಷುರೋಗ ಬಲವಾಗಿದೆಯೆಂದು ಹೇಳುತ್ತ ಉಪವಾಸದಿಂದಿದ್ದನು. ವೃಷಭದಾಸನು ಬಂದು ನಿಮ್ಮ ಕಣ್ಣರೋಗವನ್ನು ನಮ್ಮ ಮನೆಗೆ ಬಂದರೆ ವಾಸಿಮಾಡುವೆನೆಂದನು. ಕಪಟ ಬ್ರಹ್ಮಚಾರಿ ಒಡನೆಯೆ ಒಪ್ಪದೆ ಕೊನೆಗೆ ಮನೆಗೆ ಬರಲು, ಕೆಲವರು ಇವನು ಹೊಸಬನು, ಯೋಗ್ಯನೋ ಅಯೋಗ್ಯನೋ ಎಂಬುದನ್ನರಿಯದೆ ಮನೆಗೆ ಕರೆತರಬಾರದೆಂದು ಆಕ್ಷೇಪಿಸಿದವರನ್ನು ವೃಷಭದಾಸನು ತಿರಸ್ಕರಿಸಿ ಮಾತನಾಡಿ, ಅವನಿಗೆ ತಕ್ಕ ಸತ್ಕಾರವನ್ನು ಮಾಡುತ್ತಿದ್ದನು. ಹೀಗಿರಲು ಒಂದುದಿನ ರಾತ್ರಿ ವೃಷಭದಾಸನು ನಿದ್ದೆಮಾಡುತ್ತಿರುವ ಹೊತ್ತನ್ನು ಕಾದಿದ್ದು ಎದ್ದು ನೆಲಮಾಳಿಗೆಯೊಳಗಿದ್ದ ಕುದುರೆಯನ್ನು ಅಂಗಳಕ್ಕೆ ಎಳೆತಂದು ಏರಿ ಚಮ್ಮಟಿಯಿಂದ ಹೊಡೆಯಲು, ಇವನನ್ನು ಕೆಳಕ್ಕೆ ಕೆಡವಿ, ಅದು ಪದ್ಧತಿಯ ಪ್ರಕಾರ ವಿಜಯಾರ್ಧಪರ್ವತದ ಬಸದಿಗೆ ಹಾರಿಹೋಯ್ತು. ಆಗ ಸೂರ್ಯೋದಯವಾಗಿರಲು, ಚಾರಣವ್ರತೀಂದ್ರರು ಬಸದಿಯನ್ನು ಹೊಕ್ಕು ದೇವತಾವಂದನೆಗೆಯ್ಯುತ್ತಿರಲು, ಚಿಂತಾಗತಿಯೆಂಬ ವಿದ್ಯಾಧರನು ಅಲ್ಲಿಗೆ ಬಂದು ವಂದಿಸಿ ಕುಳಿತಿದ್ದನು. ಆಗ ಆಕಾಶಗಾಮಿ ಬಸದಿಯನ್ನು ಬಲವಂದು ವೀತರಾಗನಿಗೆ ನಮಸ್ಕರಿಸಿತು. ಇದನ್ನು ಕಂಡು ಆಶ್ಚರ್ಯಪಟ್ಟು ಚಿಂತಾಗತಿ ಗುರುಗಳನ್ನು ಕೇಳಲು, ಅವರು ಅದರ ವೃತ್ತಾಂತವನ್ನು ಹೇಳಿ, ಆರೋ ಕಳ್ಳನು ಇದನ್ನು ಅಪಹರಿಸಬೇಕೆಂದು ಹೊರಡಿಸಿದುದರಿಂದ ಪದ್ಧತಿಯಂತೆ ಇದು ಇಲ್ಲಿಗೆ ಬಂದಿದೆ. ಇದರಿಂದ ಈ ವೃಷಭದಾಸನಿಗೆ ಉಪಸರ್ಗವಾಗಿದೆ ಎಂದು ಹೇಳಿದರು. ಆಗ ತಡೆಮಾಡದೆ ಆಕಾಶಮಾರ್ಗದಲ್ಲಿ ವಾಜಿಯನ್ನೇರಿ ಚಿಂತಾಗತಿ ಕೌಶಂಬಿಗೆ ಬರುತ್ತಿದ್ದನು. ಇತ್ತ ಕುದುರೆಯನ್ನು ಕಾಣದೆ ಕಪಟ ಬ್ರಹ್ಮಚಾರಿ ಕೆಳಗೆ ಕಾಲುಮುರಿದು ಬಿದ್ದುದನ್ನು ಕಂಡು, ಅರಸನಾಗ್ರಹಕ್ಕೆ ಗುರಿಯಾದೆನೆಂದು ಚಿಂತಿಸುತ್ತ ಈ ಉಪಸರ್ಗವು ಹಿಂಗುವವರೆಗೂ ಆಹಾರ ಶರೀರನಿವೃತ್ತಿಯೆಂದು ಕೈಯಿಕ್ಕಿ ಜಿನರಾಜಸ್ಮರಣೆಯನ್ನು ಮಾಡುತ್ತಿದ್ದ ವೃಷಭದಾಸನನ್ನು ದಂಡಿಸಬೇಕೆಂದು ರಾಜ

ಭಟರು ಬರಲು ಬಸದಿಯಲ್ಲಿದ್ದ ಯಕ್ಷರು ಅವರನ್ನು ಸ್ತಂಭನಮಾಡಲು ಮರದ ಬೊಂಬೆ ಗಳಂತಾದರು. ಆಗ ಚಿಂತಾಗತಿ ಬಂದು ಪ್ರದಕ್ಷಿಣೆ ವಂದನೆಯನ್ನು ಮಾಡಿ ವೃಷಭ ದಾಸನನ್ನು ಸ್ತುತಿಯಿಸಲು ಪಂಚಾಶ್ಚರ್ಯಗಳಾದುವು. ಅದನ್ನು ಕಂಡು ಸುದಂಡರಾಯ ನು ಬೆದರುತ್ತ ಬಂದು ವೃಷಭದಾಸನನ್ನು ಕೈಯೆತ್ತಿಸಿ ಕ್ಷಮೆಯನ್ನು ಬೇಡಿ, ವೈರಾಗ್ಯ ವನ್ನು ತಾಳಿ ಗುಣನಂದಿಯೆಂಬ ಮುನಿಗಳ ಸಮಕ್ಷದಲ್ಲಿ, ಮಂತ್ರಿ, ಸುರದೇವ, ವೃಷಭ ದಾಸ ಮೊದಲಾದ ಜನರೊಡನೆ ದೀಕ್ಷೆಯನ್ನು ಧರಿಸಿದನು. ವಿಜಯೆ, ಮೊದಲಾದ ಮಹಿಳೆಯರು ಶ್ರೀಮತಿಯರೆಂಬ ಕಂತಿಯರಲ್ಲಿ ದೀಕ್ಷೆಯನ್ನು ಪಡೆದರು. ಆ ಸಮಯದಲ್ಲಿ ನನಗೂ ಸಮ್ಯಕ್ತ್ವವೊದಗಿತು. ಎಂದು ವಿದ್ಯುಲ್ಲತೆ ಹೇಳಿದಳು.

ಈ ಕಥೆಗೂ ಕುಂದಲತೆಯೊಡಂಬಡದಿರಲು, ಅರಸನೂ ಮಂತ್ರಿಯೂ ಆಗಲಾಗ ಲಿ, ಬೆಳಗಾಗುತ್ತ ಬಂತು. ಅರಮನೆಗೆ ಇವಳನ್ನು ಕರೆಯಿಸಿ ಇವಳಿಗೆ ತಕ್ಕಂತೆ ಅಪಮಾನ ಮಾಡಬೇಕೆಂದು ಹೇಳಿದರು.

## ಹನ್ನೆರಡನೆಯ ಸಂಧಿ:—ಕುಂದಲತೆಯ ಮಾತನ್ನು ಕೇಳಿ ಉದಿತೋದಯನು ಮೆಚ್ಚಿ, ದೀಕ್ಷೆಗೊಳ್ಳುವನು.

ಹೀಗೆ ಕಥೆಗಳನ್ನು ಕೇಳಿ ಅರಸನೂ, ಮಂತ್ರಿಯೂ, ಚೋರನೂ ತಂತಮ್ಮ ಮನೆಗಳಿಗೆ ಹೋಗಿ ಸ್ವಲ್ಪ ನಿದ್ರೆಮಾಡಿ ಉದಯವಾಗಲೊಡನೆ ಎದ್ದು ಕಾಲೋಚಿತ ವ್ಯಾಪಾರಗಳನ್ನು ಮಾಡಿ, ಅರಸನು ಮಂತ್ರಿಯನ್ನೂ ಚೋರನನ್ನೂ ಅರಮನೆಗೆ ಕರೆ ಯಿಸಿ ವೈಶ್ಯಸತಿಯರು ಹೇಳಿದ ಸಮ್ಯಕ್ತ್ವದ ಕಥೆಗಳಿಗೆ ಒಡಂಬಡದ ಆ ಲಂಡೆಯನ್ನು ಕರೆಯಿಸಿ ತಕ್ಕ ಶಿಕ್ಷೆಯನ್ನು ಮಾಡಿಸಬೇಕು ಎಂದನು. ಮಂತ್ರಿ—ಅರಸನೇ ನಿನಗೆ ಅರ್ಹದ್ದಾಸನು ಪರಮಮಿತ್ರನು. ನಾವೇ ಅವನ ಮನೆಗೆ ಹೋಗಿ ಅಲ್ಲಿ ಅವಳು ಒಡಂಬ ಡದೆ ಇದ್ದುದಕ್ಕೆ ಕಾರಣವೇನೆಂದು ಕೇಳಿ, ಆ ಬಳಿಕ ಶಿಕ್ಷೆ ಮಾಡಬಹುದು ಎಂದನು. ಆ ಮಾತಿಗೆ ಒಪ್ಪಿ ಅರಸನು ಮಂತ್ರಿ ಚೋರರೊಡನೆ ಅರ್ಹದ್ದಾಸನ ಮನೆಗೆ ಬಂದು, ಕುಂದಲತೆಯ ನುಡಿಗೆ ತಕ್ಕ ಶಿಕ್ಷೆಯಾಗಬೇಕು. ಅವಳನ್ನು ಕರೆಯಿಸೆನಲು ಅವಳು ಬಂದು—ಮಹಾರಾಜರೇ ಇಷ್ಟೊಂದು ಜಿನದರ್ಶನ ಮಹತ್ವವನ್ನು ಕಂಡ ಮೇಲೆ ಸಂಸಾರಕ್ಕೆ ಹೇಸಿ ತಪಸ್ಸಿಗೊಡಂಬಡುವುದೇ ಸಮ್ಯಕ್ತ್ವವಾದ ಕಾರಣ ನಾನು ಇವರು ಗಳು ಹೇಳಿದ ಕಥೆಗಳಿಗೆ ಒಡಂಬಡಲಿಲ್ಲವೆಂದೆನು. ಎಂದು ಹೇಳಿ ಧರ್ಮೋಪದೇಶವನ್ನು ಮಾಡಿದ ಕುಂದಲತೆಯ ಮಾತಿಗೆ ಮೆಚ್ಚಿ ಅವಳನ್ನು ಬಹಳವಾಗಿ ಸ್ತುತಿಯಿಸಿ, ಪೂಜಿಸಿ, ಅರ್ಹದ್ದಾಸನ ಮನೆಯಿಂದ ಹೊರಟು ಅರಮನೆಗೆ ಬಂದು ಒಡ್ಡೋಲಗದಲ್ಲಿ ಹಿರಿಯ ಮಗನಿಗೆ ರಾಜ್ಯವನ್ನು ಒಪ್ಪಿಸಿ, ಮರುದಿನ ಗುಣಧರರೆಂಬ ನಮೋಸ್ತುಗಳಲ್ಲಿ, ಮಂತ್ರಿ, ಸುವರ್ಣಖುರ, ಅರ್ಹದ್ದಾಸ ಮೊದಲಾದವರೊಡನೆ ದೀಕ್ಷೆಯನ್ನು ಕೈಕೊಂಡನು. ಉದಿ ತಾಮಹಾದೇವಿ, ಮಂತ್ರಿಪತ್ನಿ, ತಸ್ಕರನ ಪತ್ನಿ, ಅರ್ಹದ್ದಾಸನ ಪತ್ನಿಯರೆಂಟು ಮಂದಿ ಇನ್ನೂ ಅನೇಕ ಮಹಿಳೆಯರು ನೀತಿಮತಿಯೆಂಬ ಕಂತಿಯರಲ್ಲಿ ದೀಕ್ಷೆಯನ್ನು ತಳೆದರು, ಇವರೆಲ್ಲರೂ ತಪಸ್ಸಿನ ಅಂತ್ಯದಲ್ಲಿ ಅಚ್ಯುತಕಲ್ಪದಲ್ಲಿ ಜನಿಯಿಸಿದರು. ಈ ಚರಿತ್ರವನ್ನು ವೀರೇಶ್ವರಸಮವಸರಣದಲ್ಲಿ ಗೌತಮಗಣಧರರು ಶ್ರೇಣಿಕಮಹಾರಾಯನಿಗೆ ಹೇಳಿದರು.

---

**ವರ್ಣನೆಗಳು**:—ವರ್ಣನಕ್ಕೆ ತಕ್ಕ ವಿಷಯಗಳೆಲ್ಲ ಚೆನ್ನಾಗಿಯೇ ವರ್ಣಿಸಲ್ಪಟ್ಟಿವೆ. ಅರಸನ ಭೋಜನಶಾಲೆ IV; ಸ್ತ್ರೀರೂಪವರ್ಣನೆ VI (9-16), ಬ್ರಾಹ್ಮಣರ ಭೋಜನ VI (23-28) ಕೋಟಿಕಾಳಗ VIII (27-41, 47-50); ಅಡವಿ X (24-36).

ಶಾಸ್ತ್ರದ ವಿಷಯಗಳು ಸೂಕ್ಷ್ಮವಾಗಿ ತಕ್ಕೆಡೆಗಳಲ್ಲಿ ವಿವರಿಸಲ್ಪಟ್ಟಿವೆ. ಚಂದ್ರಗತಿ V; ದಾತೃವಿನ ಗುಣ VII, ನವವಿಧಪುಣ್ಯ VII-7; ಆಪ್ತ, ಗುರು VII 11; ಪಾತ್ರಗಳು VII 13; ಚತುರ್ವಿಧ ದಾನ VII 74.

ಮೂರನೆಯ ಸಂಧಿಯಲ್ಲಿ ಚಂದ್ರಿಕೆಯ ವರ್ಣನೆಯಲ್ಲಿ ಕವಿತಾಚಾತುರ್ಯವನ್ನು ಚೆನ್ನಾಗಿ ಕವಿ ತೋರಿಸಿರುವನು.

ಈ ಗ್ರಂಥವನ್ನು ದುಷ್ಕೃತವನ್ನು ಹೋಗಲಾಡಿಸುವುದಕ್ಕೆಂದೂ, ಜನ್ಮದ ಸುತ್ತನ್ನು ಕಳೆಯಲಿಕ್ಕೆಂದೂ ಬರೆದನಲ್ಲದೆ ತನ್ನ ಬೇಸರವನ್ನು ಕಳೆಯಲಿಕ್ಕಾಗಲಿ, ವಾಕ್ಚಾತುರ್ಯಪ್ರದರ್ಶನಕ್ಕಾಗಲಿ ಜಾರಚೋರರ ಮೇಲೆ ಬರೆದ ಕಥೆಯುಲ್ಲವೆಂದು ಹೇಳಿರುವನು. ಈ ಗ್ರಂಥವನ್ನು ಓದುವುದರಿಂದ ಧರ್ಮಬುದ್ಧಿ ಹುಟ್ಟುವುದಲ್ಲದೆ, ಭಾಷಾಪರಿಚಯಕ್ಕೂ ಅನುಕೂಲವಾಗುವುದು. ಶೈಲಿ ಸುಲಭವಾದ ದ್ರಾಕ್ಷಾ ಪಾಕವೆಂದು ಹೇಳಬೇಕು. ಆ ಕಾಲಕ್ಕೆ ಬಳಿಕೆಯಲ್ಲಿದ್ದ ಮಾತುಗಳನ್ನೇ ಇಟ್ಟು ಲಕ್ಷಣವು ಕೆಡದಂತೆ ಬರೆದಿರುವುದರಿಂದ ಪ್ರಯಾಸವಿಲ್ಲದೆ ಅರ್ಥವಾಗುವುದು. ಆದರೆ ವಾರ್ಧಿಕಷಟ್ಪದಿಯಲ್ಲಿ ಬರೆದ ಗ್ರಂಥಗಳೊಳಗೆ ಇದೂ ಒಂದು ಉತ್ತಮಗ್ರಂಥವೆಂದು ಹೇಳಲಿಕ್ಕೆ ಅವಕಾಶವುಂಟಾದರೂ, ಸಾಂಗತ್ಯದಂತೆ ಕೇವಲ ರಾಗ ತಾಳಗಳಿಗೆ ಸರಿಬರುವಂತೆ ಕಾಣಲಿಲ್ಲ.

ಪ್ರಯೋಗಗಳಲ್ಲಿ ಷಟ್ಪದಿಯ ಕಾವ್ಯಗಳಿಗೆ ಸಾಮಾನ್ಯವಾದ ಪ್ರಯೋಗಗಳೂ ಇರುವುವಲ್ಲದೆ, ಪುರಾತನ ಚಂಪು ಕಾವ್ಯಗಳಲ್ಲಿಯ ವ್ಯಾಕರಣದ ಮರ್ಯಾದೆಗಳೂ ಹೇರಳವಾಗಿ ಇರುವುವು. ಇವನ್ನು ವಿಸ್ತರಿಸಬೇಕಾಗಿ ತೋರುವುದಿಲ್ಲವಾದುದರಿಂದ ಕೆಲವನ್ನು ಮಾತ್ರ ಇಲ್ಲಿ ಸಂಚಿಸಿದೆ:—

(1). ಶಿಥಿಲ ದ್ವಿತ್ವವು ಪುರಾಣಕಾವ್ಯಗಳಲ್ಲಿರುವಂತೆ ದೊರೆಯುವುದು.

(2). ಪ್ರಕೃತಿಪ್ರಯೋಗವು ಹೊಸರೀತಿಯನ್ನನುಸರಿಸಿರುವುದು.

(3). ಱ ಪ್ರಾಸವು ಕೆಡದಿದ್ದರೂ, ಱಲ, ಳಳ, ಕ್ಷಳ ಗಳ ಪ್ರಾಸ ನಿಯಮ ವಿದ್ದಂತೆ ಕಾಣುವುದಿಲ್ಲ.

(4). ಪದಗಳು ಬಹಳವಾಗಿ ಹಳಗನ್ನಡದ ಪದಗಳಾದರೂ ಕೆಲಕೆಲವೆಡೆಗಳಲ್ಲಿ ಹೊಸಗನ್ನಡದ ಪದಗಳಿವೆ.

(5). ಅತಿನೂತನವಾದ ಷಟ್ಪದಿ ಕಾವ್ಯಗಳಲ್ಲಿರುವ ಅಸಾಧುವಾದ ಪ್ರಯೋಗಗಳು ಇದರಲ್ಲಿ ಕಾಣುವುದಿಲ್ಲ.

ಈಗ ಮುದ್ರಿಸಿರುವ ಈ ಗ್ರಂಥದಲ್ಲಿ ಪ್ರಮಾದಜನಿತವಾದ ದೋಷಗಳೂ ಸಂಪಾದಕರ ಅಲ್ಪಮತಿಯಿಂದಾದ ದೋಷಗಳೂ ಇರಲಿಕ್ಕೆ ಸಾಕು. ಗುಣಜ್ಞರಾದವರು ಅವನ್ನು ತಮ್ಮ ಉದಾರಚಿತ್ತಕ್ಕೆ ತಕ್ಕಂತೆ ತಿದ್ದಿಕೊಂಡು, ಪ್ರಚಾರಕರಿಗೆ ತಿಳಿಸಿದಲ್ಲಿ ಸರಿಮಾಡುವರು.

ಶ್ರೀವೀತರಾಗಾಯ ನಮಃ ।

ಮಂಗರಸಕವಿಕೃತ

# ಸಮ್ಯಕ್ತ್ವ ಕೌಮುದಿ.



## ಮೊದಲನೆಯ ಸಂಧಿ.



### ( ಸುಬುದ್ಧಿಯ ನೀತಿವಚನ. )

( ಉದ್ದಂಡಷಟ್ಪದಿ )

ಶ್ರೀಮದುದಿತೋದಯನೃಪಂ ವೈಶ್ಯವಿಭುವವನ ।
ಕಾಮಿನಿಯರೊರೆದ ಕಥೆಯುಂ ಕೇಳಿ ಸಮ್ಯಕ್ತ್ವ- ।
ವಾಮನದೊಳೊಗೆದು ದೀಕ್ಷೆಯನೊಸೆದು ಕೈಕೊಂಡು ಸಗ್ಗದೊಳ್ ಸಂಜನಿಸಿದಂ ॥ಪಲ್ಲ॥
ಶ್ರೀಮನ್ನತಾಮರೋರಗನರಾಧೀಶ್ವರ ।
ಸ್ತೋಮೋತ್ತಮಾಂಗಭೂಷಣಖಚಿತಮಣಿಗಣೋ- ।
ದ್ದಾಮದಾಮಾರ್ಚಿತೋಲ್ಲಸಿತಮೃದುಪಾದನವರತ್ನರಾಜೀವಯುಗಲ ॥
ಸಾಮಜವಿರೋಧಿವಿಷ್ಟರವಿಭವಸಮುಪೇತ ।
ಸೋಮಾರ್ಕಕೋಟಿಲಲಿತಪ್ರಕಾಶಂ ಮುಕ್ತಿ- ।
ಭಾಮಿನೀವಲ್ಲಭಂ ವೀರಜಿನನೀಗೆಮಗೆ ಸಮ್ಯಕ್ತ್ವಸಂಪದವನು ॥ ೧ ॥
ಪುರುಜಿನಾಜಿತಸಂಭವಾಭಿನಂದನಸುಮತಿ ।
ನಿರಘಪದ್ಮಪ್ರಭಸುಪಾರ್ಶ್ವಚಂದ್ರಪ್ರಭ ।
ಸ್ಮರಮಥನಸುವಿಧಿಶೀತಲಪತಿಶ್ರೇಯಾಂಸವಿಭುವಾಸುಪೂಜ್ಯವಿಮಲ ॥
ನಿರುಪಮಾನಂತಧರ್ಮಸುಶಾಂತಿಕುಂಥುಗುರು- ।
ವರಮಲ್ಲಿಮುನಿಸುವ್ರತಾಧೀಶನಮಿನೇಮಿ ।
ವರವಿಜಯಪಾರ್ಶ್ವಸನ್ಮತಿಜಿನೇಶ್ವರರೀಗೆಮಗೆ ಶಿವಸುಖಪದವನು ॥ ೨ ॥
ತುಂಟಘಂಟಿಕೆಯ ಮಾಳ್ಪೆಂಟುಕರ್ಮಂಗಳಂ ।
ಬಂಟವಿಡಿತದಿ ಹೇಳಹೆಸರಿಲ್ಲದಂತೆ ಬಡಿ- ।
ದೆಂಟನೆಯ ನೆಲೆದುರ್ಗಕಂತವಿಲ್ಲದ ಚತುಷ್ಟಯಬಲಂ ಬೆರಸಿ ಪೋಗಿ ॥
ಕೋಂಟೆಯುಂ ಹರಿದಾಳಿಯೊಳ್ ಕೊಂಡು ಬಳಿಕ ಪಿಡಿ- ।
ದೆಂಟುಗುಣಮಂ ಮುಕ್ತಿಯೆಂಬಬಲೆಯೊಡನೆ ನಿ- ।
ಷ್ಕಂಟಕದಿ ಚಿರಪಟ್ಟದೊಳ್ ನಿಂದ ಸಿದ್ಧರಂ ನೆನೆದು ನಾಂ ಸುಖಿಯಪ್ಪೆನು ॥ ೩ ॥

ಬದ್ಧಕೃತಕರ್ಮಾಂಧಕಾರದಾವರಣದೊಂ- ।
ದುದ್ಧತೆಯನೆಲ್ಲವಂ ನೀಗಬೇಕೆಂದೆನುತ ।
ಶುದ್ಧದರ್ಶನಬೋಧಚಾರಿತ್ರಮೆಂಬ ರತ್ನತ್ರಯದ ದೀಪಿಕೆಯನು ॥
ಉದ್ಧರಿಸಿಕೊಂಡು ಸಂಸಾರದ ಬಳಲ್ಕೆಯ ಸ- ।
ಮೃದ್ಧಿಯಂ ಸಂಹರಿಸಬೇಕೆಂದು ಬಗೆಯೊಳ್ ಪ್ರ- ।
ಸಿದ್ಧವಹಕರುಣಾಂಬುವಂ ತಳೆದ ಸೂರಿಗಳ ಪದಕೆ ವಂದನೆ ಮಾಳ್ಪೆನು ॥ ೪ ॥
ಅಟಮಟದಿನಾಚರಿಪಧರ್ಮಮಂ ಪರಿಪಡಿಸು ।
ದಿಟವನೆ ನುಡಿವ ಧರ್ಮವನೆಯಾಚರಿಸು ಸಂ- ।
ಕಟವ ಮಾಡುವ ಸಂಸೃತಿಗೆ ಪೇಸು ದಯೆಯೆಂಬ ಜಲಧಿಯೊಳ್ ಮೂಡಿ ಮುಳುಗು ॥
ಪಟುವಾಗಿ ಕರ್ಮಭಟನಂ ಜಯಿಸು ಬಯಲ ತಟ- ।
ಹೊಟದ ಕಾಂಕ್ಷೆಯನೆ ಪರಿಹರಿಸೆಂದು ಪೇಳ್ದ ನಿಃ- ।
ಕುಟಿಲಮನದುಪದೇಶಕರ ಪದಕೆ ಪಲವು ಸೂಳೆರಗಿ ಪಡಪೆಂ ಸುಖವನು ॥ [illegible] ॥
ಏಳು ಭಯಗಳನು ಗೆಲ್ದೇಳು ಶುದ್ಧಿಯನು ತಳೆ- ।
ದೇಳು ತತ್ವಂಗಳಂ ಬಗೆಯೊಳಗೆ ಭಾವಿಸು- ।
ತ್ತೇಳನೆಯ ನೆಲೆಯಿಂದ ಮೇಲಣ ನೆಲಕ್ಕೆ ಪೋಪುಜ್ಜುಗವನುಜ್ಜುಗಿಸುತ ॥
ಏಳು ದಾರುಣಪರಾವರ್ತನಾಬ್ಧಿಯೊಳಾಳು ।
ತೇಳಿಸುವ ಘೋರಕರ್ಮಂಗಳಂ ನೆರೆ ಕೆಡಿಸು ।
ವೇಳಿಗೆಯ ಪದದೊಳಾಚರಿಪ ಸಾಧುಗಳ ಪದವೀಗೆ ನಿರ್ವೃತಿಪದವನು ॥ ೬ ॥
ವಾಣಿ ವೀಣಾಪಾಣಿ ಸಂಸಾರಸಾಗರ ।
ದ್ರೋಣಿ ಪರಭೃತವಾಣಿ ಘನದುರಿತವಲ್ಲೀಕೃ- ।
ಪಾಣಿ ನಿಃಶ್ರೇಯೋದ್ಧಮಾರ್ಗನಿಃಶ್ರೇಣಿಯಂಗಜದಂಡಶೂಕವೇಣಿ ॥
ಏಣಲೋಲವಿಲೋಚನೇ ಪಣ್ಯಲಕ್ಕೆ ಕ- ।
ಟ್ಯಾಣಿ ಕಲ್ಯಾಣಿ ವಾಕ್‌ಶ್ರೀಣಿ ಜಿನಮುಖಜನಿತ ।
ವಾಣಿ ಶಾಸ್ತ್ರಕ್ಷೋಣಿ ಮಾಣದೆನ್ನೆದೆಯಲ್ಲಿ ನೆಲಸಿ ಸನ್ಮತಿಯೀವುದು ॥ ೭ ॥
ವಂದಿಸುವೆ ನಾನು ಮುದದಿಂದ ಗೌತಮ ದೇವ ।
ನಂದಿ ಗುಣಭದ್ರ ಜಿನಸೇನರಾವ್ರುಳಕೊಂಡ ।
ಕುಂದ ಭುಜಬಲಿ ಹೇಮದೇವ ಮುನಿಚಂದ್ರ ಪದ್ಮಪ್ರಭ ಮಯೂರಪಿಂಛ ॥
ನಂದಿಮಿತ್ರ ಸಮಂತಭದ್ರ ಕೇಶವ ಮಾಘ- ।
ಣಂದಿಯಕಳಂಕ ನಿಕಳಂಕ ಭದ್ರಬಾಹು ಕುಮು- ।
ದೇಂದು ಪ್ರಭೇಂದು ಮೊದಲಾದ ಸೂರಿಗಳ ಪದಮಂ ನೆನೆದು ಸುಖಿಯಪ್ಪೆನು ॥ ೮ ॥
ಕಲ್ಲಹಳ್ಳಿಯ ಮಹಾಪ್ರಭು ವಿಜಯಭೂವಧೂ ।
ವಲ್ಲಭನ ತನುಜಾತ ಜಿನಪದಾಂಬುಜಭೃಂಗ- ।
ನೆಲ್ಲಕಲೆಯಲ್ಲಿ ಬಲ್ಲಿದನು ಮಂಗರಸ ನಾನೀ ಕೌಮುದೀ ಕಥೆಯನು ॥

ಸಲ್ಲಲಿತಮಪ್ಪ ಸಕ್ಕದದಿ ಪೂರ್ವಾಚಾರ್ಯ- ।
ರುಲ್ಲಸದಿ ಪೇಳ್ದುದಂ ಕರ್ಣಾಟಕೃತಿಬಂಧ- ।
ದಲ್ಲಿಯುದ್ದಂಡಷಟ್ಪದವಾಗಿ ಬರೆದೆನಿಂತಿದನು ಭವ್ಯರು ಕೇಳ್ವುದು ॥ ೯ ॥
ತೆಂಬೆಲರ ಸೋಂಕು ತಕ್ಕರ ಮಾತು ತರುಣಿಯರ ।
ಬಿಂಬಾಧರಂಬೀರುವೊಂದುರುಚಿ ಪೂವಿನ ತೊ- ।
ಡಂಬೆ ಪೀಯೂಷಪಿಂಡಂ ಜೇನಸೋನೆ ಪೊಸಸುಗ್ಗಿ ರಂಜನೆಯ ಹಡೆದಾ ॥
ಕೆಂಬರಲ ತೊಡವು ಚಂದನದಣ್ಪು ಸಿರಿಪಚ್ಚೆ ।
ಯೆಂಬಂಬುಜಾಕಾರ ಕೋಗಿಲೆಯ ನವಪಂಚ- ।
ಮಂಬೊರೆದ ಸುಣ್ಬರಂ ಪ್ರಭುರಾಜ ಮಂಗರಸನೊರೆದ ಕೌಮುದಿಯ ಮಾತು ॥ ೧೦ ॥
ರಸದಾಳಿಯಂತೆ ರಮಣಿಯರ ಚೆಂದುಟಿಯಂತೆ ।
ಪೊಸಜೇನಕೊಡದಂತೆ ಪೊಣ್ಮುವೆಳಜವ್ವನೆಯ- ।
ರೊಸೆದೀವ ತಾಂಬೂಲದಂತೆ ಕಾದಿಳಿಪಿಯಾರಿದ ಬಟ್ಟವಾಲಿನಂತೆ ॥
ಅಸಿಯಳೊಡನಾಟದಂತೆಮಾವಿನ ತನಿವಣ್ಣ ।
ರಸದಂತೆಯಮೃತದಂತತಿರುಚಿಯ ಪಡೆದುದತಿ ।
ರಸಿಕನತಿನಿಪುಣ ಮಂಗರಸನೊಪ್ಪುವ ವಾಕ್ಯಗುಂಫನಂ ಭಾವಿಸಿದೊಡೆ ॥ ೧೧ ॥
ಮಗಧದೇಶದ ಮಧ್ಯದೊಳು ರಾಜಗೃಹಮೆಂಬ ।
ನಗರಿಯೊಳ್ ಶ್ರೇಣಿಕಮಹಾಮಂಡಲೇಶ್ವರನ ।
ನಗೆಗಣ್ಣ ನೀರೆ ಚೇಳಿನಿಮಹಾಸತಿಗೂಡಿಯರಸುಗೆಯ್ಯುತುಮಿರ್ದ್ದ ॥
ಅಗಣಿತಮಹೀಪಾಲಕರ ಮಧ್ಯದೊಳಗೊಂದು ।
ಪಗಲು ಸರ್ವಾವಸರಮೆಂಬೋಲಗಂಗೊಟ್ಟು ।
ಸೊಗಯಿಸುತ್ತಿರಲಲ್ಲಿಗೊರ್ವ್ವ ವನಪಾಲಕಂ ಬಂದು ಸಾಷ್ಟಾಂಗವೆರಗಿ ॥ ೧೨ ॥
ಅರಸ ಚಿತ್ತೈಸು ನಮ್ಮೂರ ಮುಂದಣ ವಿಪುಲ- ।
ಗಿರಿಯ ಶಿಖರದ ಸಸಿನಕಾ ಮಹಾವೀರಜಿನ- ।
ವರನ ರಂಜಿಪ ಸಮವಸರಣಮಾ ಸಾಲ್ದೆರದ ಸುರಸಮಿತಿಯೋಲೈಸುತಾ ॥
ಬರಲೊಡನೆ ಕಾಲವಲ್ಲದಕಾಲದಲ್ಲಿ ವನ- ।
ತರುಗಳೆಲ್ಲಂ ತಳಿರ್ನನೆದೋರೆ ತನಿವಣ್ಣ ।
ಫರಿಸಿದುವು ತೆಂಗಾಳಿ ತೀಡಿದುದು ತಾಮರೆಗೊಳಂಗಳೆಲ್ಲಂ ತಿಳಿದುವು ॥ ೧೩ ॥
ಸಾರಗದ ಕವಲುಗೊಂಬೇರಿದುವು ಸರ್ಪನಾ ।
ಸಾರಗದ ಮರಿಗೆ ಮೊಲೆಯೂವ ಪೆಣ್ಬುಲಿವಿಂಡು ।
ವಾರಣದ ಮರಿಗೆ ಮೋಹಂ ಕೊಡುವ ಸಿಂಹವೆಳಹುಲ್ಲೆಗಳ ಕೂಡಾಡುವಾ ॥
ಸಾರಮೆ ಲುಲಾಯುಗಳಿಗುರುಮುದದಿ ಕುಡುಕೀವ ।
ನೀರಸಾಳುವ ಪಕ್ಕಿಗಳ್ ಕ್ರೂರತೆಯನು ಬಿ- ।
ಟ್ಟೋರಣದಿನಿರ್ಪ ಬಿಸವಂದವಂ ಬಿನ್ನವಿಸೆ ಬಂದೆ ನಾನವನಿಪಾಲಕಾ ॥ ೧೪ ॥

ಎನೆ ಕೇಳುತೆಳ್ದು ಸಿಂಹಾಸನದಿನೇಳಡಿಯ ।
ನನುಮುದದಿ ನಡೆದುದಾದೆಸೆಗೆ ವಂದನೆ ಮಾಡಿ ।
ವನಪಾಲಕಂಗೆ ವೊಲಿದಂಗಚಿತ್ತವನು ಕೊಟ್ಟಾನಂದಭೇರಿವೊಯ್ಸಿ ॥
ವನಿತೆಚೇಳಿನಿಗೂಡಿ ಸಮವಸರಣಕ್ಕೆಯ್ದಿ ।
ಜಿನಪತಿಗೆ ಮಣಿದು ಗೌತಮಗಣಧರರ್ಗೆರಗಿ ।
ಮನುಜಕೋಷ್ಠದೊಳು ಕುಳ್ಳಿರ್ದು ಕೈಮುಗಿದಿಂತು ಬಿನ್ನಪಂಗೆಯ್ದನಾಗ ॥ ೧೫ ॥
ಗುರುಕುಲಲಲಾಮ ಸಮ್ಯಕ್ತ್ವಮುದಯಿಪತೆರದಿ ।
ವರಕಥನಮೊಂದಂ ನಿರೂಪಿಸೆಂದೆನಲು ಗಣ- ।
ಧರರೆಂದರಿಂತು ವಾಯುತ್ರಯಾಧಾರದಿಂ ಕರಯುಗಮನಾಕಟಿಯೊಳು ॥
ಧರಿಸಿ ಪಾದಪ್ರಸರದಿಂ ನಿಂದ ನರ್ತಕನ ।
ದೊರೆಯೆನಲಕೃತ್ರಿಮದೆ ಲೋಕತ್ರಯಂ ವಿಲಯ ।
ವಿರಹಿತಮುಮಾಗಿರ್ಪುದಲ್ಲಿ ಪಲವಬುಧಿಯಿಂ ನಿಡುಪೊಡವಿಯೊಪ್ಪುತಿಹುದು ॥ ೧೬ ॥
ಅಂದಿನಂದದಿನಸುರಬಾಧೆಯಿಂ ಭೂತಳಕೆ ।
ಮುಂದಕೆಯ್ತುರಬಾರದೆಂದಾ ವರಾಹನೆ- ।
ಯ್ತಂದು ಹಸಗೆಯ್ದ ಜಲಖಾತಿಯನೆ ಜಲರಾಶಿಯೆಸೆಯಲಾ ನೆಲದ ನಡುವೆ ॥
ಅಂದವಡೆದಾಕಾಶವೆಂದೆಂಬ ಗೂಡಾರ ।
ದೊಂದು ಮಿಸುನಿಯ ಕಂಭಮೆಂಬಂತೆ ಕಣ್ಬಗೆಗೆ ।
ಬಂದ ಮೇರುವಿನ ಬಲಗಡೆಯಲ್ಲಿ ಭರತಾರ್ಯಖಂಡವೊಪ್ಪುತ್ತಿರ್ಪುದು ॥ ೧೭ ॥
ಅದರೊಳಭಿನವನಾಕದಂತೆಸೆವ ಪೌರಜನ- ।
ಪದದ ಮಧ್ಯದೊಳು ಮಿಸುಪಮರಾವತಿಯನು ಸಂ- ।
ಪದದಿಂದ ಗೆಲ್ವ ಮಧುರಾನಗರಿಯಲ್ಲಿಯಮರೇಂದ್ರಸನ್ನಿಭವಿಭವನು ॥
ಉದಿತೋದಯಾವನೀಪತಿ ಶಚೀದೇವಿಯಂ- ।
ದದಿನೊಪ್ಪುವುದಿತಾಮಹಾದೇವಿಗೂಡಿ ಸಂ- ।
ಮುದದಿಂ ಸುಬುದ್ಧಿಯೆಂದೆಂಬ ಸಚಿವೋತ್ತಮಂಬೆರಸರಸುಗೆಯ್ಯುತಿರಲು ॥ ೧೮ ॥
ತುಳಹಳಚನಾದುದಾಶಾವಲಯ ನಭವೆಂಬ ।
ಲಲನೆ ಸುರಧನುವೆಂಬ ಬೆಸಕೋಲತುದಿಗೆ ।
ತಳತಳಿಪ ವಿದ್ಯುಲ್ಲತೆಯ ತಿರುವನಿಟ್ಟೆಕ್ಕಿದರಲೆಯ ಪುಂಜಮೆಂಬ ತೆರದಿ ॥
ಹಳಿಹಳಿಯೊಳೇಳ್ವ ಘನತತಿ ಚುಮ್ಮುಚುಮ್ಮೆನು- ।
ತ್ತಳುರ್ವ ಬಿಸಿಲತಿನಿರ್ಮಲತ್ವಮಂ ತಳೆದು ತೊಳ- ।
ತೊಳಗುವ ಸುಧಾಂಶುಬಿಂಬಂ ವಿರಾಜಿಸಿದುದಾ ಬಂದ ಶರದಾಗಮದೊಳು ॥ ೧೯ ॥
ತತ್ತಿಗಳನೊಡೆದು ಮರಿಯಂ ಸಾಕಿದುವು ಗಿಳಿಗ- ।
ಳುತ್ತಮದ ಮೌಕ್ತಿಕದ ಬೀಜಮಂ ಬಿಸಡಿಯೊಳ್- ।
ಬಿತ್ತಿದುವು ಮುಗಿಲು ನಳನಳಿಸಿ ನೆರೆ ಬೆಳೆದು ತನಿವಾಲು ತುಂಬಿದ ತೆನೆಯನು ॥

ಹೊತ್ತುಕಳೆಮೆಯ ಹೊಲನ ತಿನಲೆಂದು ವಿಹಗಗಳ ।
ಮೊತ್ತಮೆಲ್ಲಂ ಮುಸುಂಕುತ್ತಿರಲ್ ಪಿರಿದು ಸಂ- ।
ಪತ್ತುವಡೆದುದು ಮೃಗಂಗಳ ಮೈಗಳಾ ಬಂದು ಕಣ್ಗೊಳಿಪ ಕಾರ್ತಿಕದೊಳು ॥ ೨೦ ॥
ಮಿಗಿಲಾಗಿ ಕರೆವ ಕರೆವುಗಳ ಮೊಲೆಯೊಳು ಹಾಲು ।
ಹಗಲಿರುಳು ಹೆಚ್ಚು ಕುಂದಿಲ್ಲವೆಂಬಂತಾಗೆ ।
ಧಗಧಗಿಸಿ ದೇಗುಲಂಗಳೊಳು ದೀಪಾವಳಿ ವಸುಂಧರಾಸತಿಯು ಮೆಯ್ಯಾ ॥
ಮುಗಿಲು ಹೋಹಂತೆ ಮುಗಿಲೆಂಬ ಕೊಡನಂ ಹಿಡಿದು ।
ಗಗನವಧು ಮೀಯುಲೆರೆವವೊಲು ಹನಿಹನಿಯೆ ಭೂ- ।
ಜಗದ ಜನಜಾಲಮೆಲ್ಲಂ ಹರಿಸವಡೆಯೆ ಬಂದಾ ಶರತ್ಕಾಲದಲ್ಲಿ ॥ ೨೧ ॥
ಅಲ್ಲಲ್ಲಿ ಗೆಣ್ಣಿಕ್ಕುವಲ್ಲಲ್ಲಿ ಕರನೀಡು- ।
ವಲ್ಲಲ್ಲಿ ಕದಿರುಗಡೆವಲ್ಲಲ್ಲಿ ಪೂದುಂಬು- ।
ವಲ್ಲಲ್ಲಿ ಪಾಲ್ದೀವುವಲ್ಲಲ್ಲಿ ಕಾಯಾಗುವಲ್ಲಲ್ಲಿ ಪಣ್ಣಾಗುವ ॥
ಅಲ್ಲಲ್ಲಿಯುಕ್ಕಿಮುರಿವಲ್ಲಲ್ಲಿ ಕೆಂಪಾಗು- ।
ವಲ್ಲಲ್ಲಿ ಕುಯ್ಯಲಾಗುವ ಪಲವು ಪೆಸರ್ವಡೆದ ।
ನೆಲ್ಲಗದ್ದೆಗಳತಿಮುದಂ ಬಡಿಸಿದುವು ತಮ್ಮನೋವಿದ ಕುಟುಂಬಗಳಿಗೆ ॥ ೨೨ ॥
ಎಲ್ಲೆಡೆಯೊಳಂ ಬೆಳೆದ ಕಮ್ಮಗಳವೆಯ ಗದ್ದೆ ।
ಯೆಲ್ಲಿ ಹಣ್ಣಾದ ತೆನೆಯಿಂ ಮತ್ತಮಾಶಾಲಿ- ।
ಯುಲ್ಲಸಿತಮಪ್ಪ ಕಂಪಿಂಗೆ ತನ್ಮೂಲದೊಳ್ ಕುಳ್ಳಿರ್ದ ಮಧುಕರಾಳಿ ॥
ಸಲ್ಲಲಿತವಡೆದುದಾ ಉರ್ವೀಸುದತಿ ಹರ್ಷ- ।
ದಲ್ಲಿ ಹರಿನೀಲರತ್ನದ ವಿಭೂಷಣವಿಟ್ಟು ।
ನಿಲ್ಲದೇ ಪೀತಾಂಬರವನುಟ್ಟಳೋ ಎಂಬ ಪರಿಯನಂಗೀಕರಿಸುತ ॥ ೨೩ ॥
ನಳನಳಿಸಿ ಬೆಳೆದ ನವಗಂಧಶಾಲಿವನಕ್ಕೆ ।
ತಳಿಗಳಂ ಹೆಣೆವ ಕಷ್ಟಂ ಕೊಡುಪೆಸಳಿಕದ ।
ಟ್ಟೆಳಿಗೆಯಿಕ್ಕುವ ಬೆಚ್ಚುಗಳನಿರದೆ ನೆಡುವ ಗುಡಿಲಂ ಹೊದಿಸಿ ಹಸಮಾಡುವ ॥
ಕಳನಕೆತ್ತುವ ಮೇಟಿಯುಂ ನೆಡುವ ಕುಡುಗೋಲ- ।
ನುಳಿಯದೇ ಮಸಯಿಸುವಗೊಂದಣಂ ಕುಡಿಯರುಗ- ।
ಳೊಳಗೊಪ್ಪಮಂ ಪಡೆದುದಾ ಬಂದು ಬಂಧುರತೆಯಂ ಪಡೆದ ಕಾರ್ತಿಕದೊಳು ॥ ೨೪ ॥
ಕಡೆಗಣ್ಣ ಕಾಂತಿ ಮುಂಬರಿದು ನಡೆಮಡಿಯಾಗೆ ।
ಕಡುಬೆಳೆದ ಕಳಮೆವೊಲನಂ ನೋಡಲೆಂದೆನುತ ।
ಸಡಗರದಿನೆಯ್ತಂದ ಸಿರಿಯನಿದಿರ್ಗೊಂಬೆವೆಂದಾ ಕಳಸಗನ್ನಡಿಯನು ॥
ಪಿಡಿದು ನಡೆವಂತೆ ಬೆಳೆಯುಂ ಕಾಯಲೆಂದು ಮನ- ।
ಪಿಡಿದು ನೆಲೆವೊಲೆಯ ನಗೆಮೊಗದ ಪಾಮರಿಯರೊಸೆ- ।
ದಡಿಯಿಟ್ಟರಂದು ಪಥಿಕಪ್ರತಾನಂ ಪ್ರಮೋದಮನಾಂತು ನೋಡುತಿರಲು ॥ ೨೫ ॥

ಅಟ್ಟಳೆಯನಡರಿಯತಿಭರದಿ ಕವಣೆಗೆ ಕಲ್ಲ- ।
ನಿಟ್ಟು ಕೈವಳೆ ಘಳಿಲ್ಘಳಿಲೆನಲ್ಕಾಗಾಳಿ ।
ವೆಟ್ಟೆಯಿಂ ಗದ್ದೆಗಳ ಸಾಲಿಗೆರಗುವ ರಾಜಕೀರಪಾರಾವತವನು ॥
ಇಟ್ಟು ಪಾರಿಸುವ ನಿಡುದೋಳ ನೀಲಾಳಕದ ।
ನಿಟ್ಟೆಸಳಕಣ್ಣ ನಿಬಿಡಸ್ತನದ ನಗೆಮೊಗದ ।
ಬಟ್ಟಜವ್ವನದ ಪಾಮರಿಯರಾ ಗದ್ದೆಯೊಳು ಕಣ್ಗೆ ರಂಜಿಸುತಿರ್ದರು ॥ ೨೬ ॥
ರಂಗುರಂಜಿಸುವ ರಾಜೀವಕರತಳದ ಕೂ- ।
ರ್ಮಂಗಳಂ ಗೆಲ್ದ ಪದಯುಗಲದಾವರ್ತದ ಜಿ- ।
ಡಂಗನಾಪರಿಪ ನಾಭಿಯ ತೆರೆಗಳಂ ತೆಗಳ್ವ ವಳಿಯ ನಿರ್ಮಲ ಜಲವನು ॥
ಅಂಗೀಕರಿಸಿದ ಲಾವಣ್ಯದರಗಿಳಿಗಳಂ ।
ಪಿಂಗದೇ ಸೋವ ಪಾಮರಿಯರಾನನದ ನೇ- ।
ತ್ರಂಗಳಂ ಯಮುನೆಯೆಳವಾಳೆಯೆಂದೆರಗಿದುವು ಮಿಂಗುಲಿಯ ಬಗಳಿಶುಗಳು ॥ ೨೭ ॥
ಕರಶಾಖೆಯೊಳಗಿಟ್ಟು ಮಿಡಿವ ಮಿಡಿವಿಲ್ಲ ಹೆದೆ- ।
ಗಿರಿಸಿ ಯೆಸುವಸಿತಮೃತ್ತಿಕೆಯ ಗೋಳಕಂಗಳುರು- ।
ಭರದಿ ಕಳಮೆಯ ಕಣಿಸಗಳ್ಗೆರಗುವರಗಿಳಿಯ ಕಡೆಗೆ ಕಡುಪಿಂದ ಪಾರಿ ॥
ಕರಮೆ ಕಣ್ಗೆಸದುವಾ ಪಾಮರೀ ಜನದರುಣ- ।
ಕರಮೆಂಬ ಕೆಂದಾಮರೆಯ ಮಧುವನಿರದುಂಡು ।
ಪಿರಿದು ಸೊಕ್ಕೇರಿ ಗಗನಕ್ಕೆ ಪಾರುವ ಮಧುವ್ರತಕಳಭಮೆಂಬ ತೆರದಿ ॥ ೨೮ ॥
ಅಂಬರವಧೂಟಿಗಾ ಪಾಮರಿಯರುಗ್ಗ್ರಣ್ಣ ।
ಬೊಂಬೆಗಳ್ ಮನವೊಸೆದು ಪಾಗುಡವನಟ್ಟಿದಸಿ- ।
ತಾಂಬರವದೆಂಬಂತೆ ತತ್ಕಳಮೆಗಳ ತೆನೆಯ ಪಾಲುಣಲ್ಕೆಂದೆರಗುವಾ ॥
ಕೆಂಬಲ್ಲಪಕ್ಕಿಗಳುಮಂ ಸೋವುತಾ ಕಡೆಯೊ- ।
ಳಿಂಬಾಗಿ ನಡೆನೋಡಲಂತದರ ಧವಲಾಯ- ।
ತಾಂಬಕದ ಕಟ್ಟುಕಡೆದಿಳೆಗಿರದೆ ಹರಿದು ಜಾಸಣಿಸಿ ಬಂಧುರವಾದುವು ॥ ೨೯ ॥
ಚೆಂದುಟಿಯ ಕೆಂಪ ತೊಂಡೆಯ ಪಕ್ವಫಲವೆಂದು ।
ಬಂದೆರಗಿದಾ ಮುಗ್ಧಶುಕನನೊರ್ವಳ್ ತರುಣಿ ।
ಕೆಂದಳದಿ ಪಿಡಿಯೆ ಮಾಣಿಕದ ಗಿಣಿಯಾಗಲದನೀಕ್ಷಿಸಲ್ಕಾ ಕರಾಂಶು ॥
ಮುಂದ್ಯೆಸೆ ಮೌಕ್ತಿಕದ ಗಿಳಿಯಮರಿಯಾಗಲಾ ।
ಅಂದಮಂ ನಡೆನೋಡೆ ನಟ್ಟನಡುಗಣ್ಣ ಕ- ।
ಪ್ಪಿಂದ ಹರಿನೀಲಮಣಿ ಶುಕನಾಗೆ ಮಾಯದರಗಿಳಿಯೆಂದು ಬಿಟ್ಟಳಾಗ ॥ ೩೦ ॥
ಈ ತೆರದಿ ಬೆಳೆಗಾಯಲಾ ಪಾಮರೀ ಜನಂ ।
ಬೀತು ಬರೆ ಮಳೆಗಾಲವುಡುಗೆ ನೀರೆರಕೆಗಳ- ।
ನಾ ತಟಾಕಾಳಿ ವನಚರವಿತತಿ ಮಿಗವೇಂಟೆಗೆಂದು ಸಂಭ್ರಮಗೊಳುತಿರೆ ॥

ಆ ತಪಸ್ವಿಗಳಲ್ಲಿ ಸೂಸುತಿರೆ ಕೈಯಿಕ್ಕಿ ।
ಭೂತಳದೊಳನುಮಾತ್ರ ಶೀತಋತುವಂಕುರಿಸೆ ।
ಕಾತರದಿ ವಿಟವಿಟೀಜನವೆಲ್ಲವಾಲಿಂಗನಕ್ಕೆ ಮನವಿಕ್ಕುತಿರಲು ॥ ೩೧ ॥
ಕಾರ್ತಿಕದ ಪುಣ್ಣಮಿಯೊಳಾ ವರ್ಷವರ್ಷಕ್ಕೆ ।
ವರ್ತಿಸುವ ಕೌಮುದೀಪರ್ವ ಬರಲಾಯಿತಾ ।
ಭರ್ತಾರಕಂ ತಳಾರರ ಮುಖದಿ ತನ್ನ ರಾಣೀವಾಸಮೆಲ್ಲ ಸಹಿತ ॥
ಆರ್ತಿಯಿಂ ಬೆಲೆವೆಣ್ಣ ಬಿಡುವೆಣ್ಣ ಮನೆವೆಣ್ಣ ।
ತೊಳ್ತುವೆಣ್ಗಳೊಳೊರ್ವರುಳಿಯದಂತಾ ಹಗಲ ।
ಹೊತ್ತುಹೋಗದ ಮುನ್ನವಾ ನಗರಿಯಿಂದ ನಂದನವನಕೆ ನಡೆಯಿಸಿದನು ॥ ೩೨ ॥
ಇನಿಸಗಲಿಕೂಡಲದು ಸೊಗಸಪ್ಪುದೆನುತ ನ- ।
ಮ್ಮನಿಯರೊಳ್ ನಾಪಗಲ್ದ ಸುಸಂಧಿಯುಂ ಕಂಡು ।
ನನೆಗಣೆಯನಾಳಾಗಿ ನಮಗನುವರವ ಮಾಡದೇ ಮಾಣಪಿಂತಿವೆನುತ ॥
ಬನದ ಶುಕಪಿಕಶಿಖಿಮುಖಸಂತತಿಯ ಮೇಲೆ !
ಮುನಿದು ದಂಡೆತ್ತಿ ನಡೆಪಂದದಿಂದಾ ನಗರ ।
ವನಿತೆಯರ ಬಲಗೂಡಿ ನರನಾಥನರಸಿ ನಂದನವನಕೆ ನಡೆತಂದಳು ॥ ೩೩ ॥
ಪೀಲಿದುರುಬಿನ ಪಿಂಡುತುಂಬಿಗುರುಳೋಳಿಯ ವಿ- ।
ಶಾಲ ವಿಷರುಹ ವಿಲೋಚನದ ದಾಡಿಮದಂತ- ।
ದಾಲವಣ್ಬುಟೆಯ ಪಲ್ಲವಗಂಡಮಂಡಲದ ಮಲ್ಲಿಕಾನಿಭಗಂಧದಾ ॥
ನಾಳಿಕೇರೋಪಮಸ್ತನಯುಗದ ಮದಕೋಕಿ- ।
ಲಾಲಾಪದೆಳವಾಳೆದೊಡೆಯ ಸರಸಿರುಹಾಂಘ್ರಿ- ।
ಮಾಲತಾಂಗಿಯರಾ ಬನಂ ಬನಕೆ ಬಿರ್ದು ನಡೆವಂದದಿಂ ನಡೆಯಲಾಗ ॥ ೩೪ ॥
ನಾನಾದಿಯಾಗಿ ಯಿಾಜಾತ್ರೆ ಮುಗಿವನ್ನೆವರ- ।
ಮಿಾ ನಗರಿಯಂಗನಾಜನಮಿರ್ದ ನಂದನಕೆ ।
ನಾನೇ ನಲುಗೆವಂತನೆಂದಾವನೊರ್ವನೆಯ್ದಿದೊಡವಂ ದ್ರೋಹಿಯೆಂದು ॥
ಆ ನಗರಿಯಲ್ಲಿ ಯೆಡೆಬಿಡದೆ ನೆರೆ ತೀವಿದ ಜ- ।
ನಾನೀಕಮೆಲ್ಲವುಂ ಕೇಳ್ವವಾಳ್ಕೆಯೊಳಾ ಮ- ।
ಹೀನಾಥನಾ ಪುರದ ಕೇರಿಕೇರಿಯೊಳು ಡಂಗುರವೊಯ್ಸಿ ಸಾರಿಸಿದನು ॥ ೩೫ ॥
ಅರಸುತನಕತಿ ಹಾನಿಯಾವುದಾಜ್ಞಾಭಂಗ ।
ನಿರುತಮೆಂದಾ ಜನಂ ಬನದತ್ತಪೋಗಲಂ ।
ಚಿರಲತ್ತ ವನಲಕ್ಷ್ಮಿ ಬಹುರೂಪವಡೆದಂತೆ ಪುರಪುರಂಧ್ರಿಯರು ಕೂಡಿ ॥
ವರಗೀತವಾದ್ಯನರ್ತನಮಾದಿಯಾದ ಬಂ- ।
ಧುರಗೋಷ್ಠಿಯೊಳ್ ಕೌಮುದೀಪರ್ವ ಮುಗಿವನ್ನೆ ।
ವರ ಸುಖಿಸಿರಲಪರದಿಗ್ವಧುವ ಕುಂಕುಮಲಲಾಮಮಾಯ್ತಿನ ಬಿಂಬವು ॥ ೩೬ ॥

ಪಜ್ಜಳಿಸೆ ಪಡುಗೆಂಪು ಪಕ್ಕಿ ಪಕ್ಕೆಗೆ ಸಾರೆ ।
ಜಜ್ಜರಿಯೆ ಜಕ್ಕವಕ್ಕಿಯ ಜೋಡು ಸರಸಿಜಂ ।
ಸಜ್ಜುಕಗಳಾಗೆ ಉರ್ವೀತಳದೊಳುರಿಯಾರೆ ಬಂಧಕೀಜನದೊಡಲೊಳು ॥
ಒಜ್ಜರಿಸೆ ರಾಗರಸ ಸಂಜೆವರೆಗಳ್ ಸಾರೆ ।
ಕಜ್ಜಳಂ ತೊಡೆದ ತೆರನಾಗೆ ನಭಮಾಪಗಲ ।
ಪಜ್ಜೆಪರಿಪಡೆ ಪಶ್ಚಿಮಾಂಬುಧಿಯ ನಡುಮಡುವ ಹೊಕ್ಕನಾ ಪಗಲೊಡೆಯನು ॥ ೩೭ ॥
ಅಮರಲೋಕಾಧೀಶನಾರೋಗಿಸುವುದಕೆನು- ।
ತಮೃತಶರನಿಧಿಯಲ್ಲಿ ಪೊಗೆದಮರದಿಗ್ವನಿತೆ- ।
ಯಮರಲೋಕಕ್ಕೆ ಕೊಂಡೊಯ್ವೆನೆಂದೊಸೆದು ತನ್ನುತ್ತಮಾಂಗದೊಳು ಹೊತ್ತು ॥
ಅಮೃತಘಟಮೋ ಅನನ್ಯಜನಲ್ಲಿ ಮೂಡುವುದು ।
ಸಮಿತಿಯಿಂದೆಳೆಮುತ್ತಿನಕ್ಷತೆಯನಿಟ್ಟು ಸಂ- ।
ಭ್ರಮದಿ ಪೂಜಿಪ ಮಲ್ಲಿಕಾಲಿಂಗಮೋ ಎನಲ್ ಚಂದ್ರನುದಯಂಗೆಯ್ದನು ॥ ೩೮ ॥
ವಿರಹಿಜನದೆರ್ದೆಯಲಗ್ಗಿಯನಿಡುವ ಮನಸಿಜನ ।
ಕರದ ಮೌಕ್ತಿಕದ ಸೆಂಡೊ ವಿಯೋಗಿಗಳ ಶಿರವ ।
ಹರಿಯಿಡುವಕಾವನಾಕಯ್ಯ ಚಕ್ರಮೋ ಓಪರನಗಲ್ದಿರಲವರನು ॥
ಭರದಿನೆಸುವಂಗಜನ ಕುಂಡಲಿತ ಕಾರ್ಮುಕವೊ ।
ಪರನೊಡನೆ ಸೂಡಕಾದುವೆನೆಂದು ಪಲ್ಲಟಿಸು- ।
ವರಲಸರನೆಡಗಯ್ಯ ವಜ್ರಖೇಟಕವೊ ಥಳಥಳಿಪ ಸಂಪೂರ್ಣಶಶಿಯೋ ॥ ೩೯ ॥
ಎಸಳ್ಗೆದರ್ದುವುತ್ಪಲಾವಳಿ ಚಂದ್ರಕಾಂತಶಿಲೆ ।
ಯೊಸರ್ದುವಂಭೋರುಹ ದಳಂಗಳುಡುಗಿದುವು ಸಂ- ।
ತಸವಡೆದುವಾ ಚಕೋರಪ್ರತತಿ ತಾರಗೆಯ ಬೆಳಗು ನಸುಬಲವಾದುದು ॥
ಉಸಿರಿಗುಬ್ಬಸವಾದುದಾ ವಿಯೋಗಿಜನಕ್ಕೆ ।
ದೆಸೆದೆಸೆಗಳೆಲ್ಲ ಚಂದನಚರ್ಚೆಯಿಂದ ಸಾ- ।
ರಿಸಿದಂತುಟಾಯ್ತು ನಲವೇರಿದುದು ಸಸ್ಯಾಳಿಯಾ ಶಶಾಂಕೋದಯದೊಳು ॥ ೪೦ ॥
ಆ ತುಂಬುವೆರೆಯ ತಿಳಿವೆಳಗು ವಿರಹಿವ್ರಜಕೆ ।
ಮಾತೇನವಸ್ಥೆಯಂ ಮಾಡುತಿರಲಾಗಿ ತ- ।
ದ್ಭೂತಳಾಧೀಶನರ್ಧಾಂಗಿ ತನ್ನಂ ತೊಲಗಿ ಪೊರವೊಳಲ ಬನದೊಳಿರಲು ॥
ಕಾತರಂ ತನಗೆ ಪಿರಿದಾಗಿ ಸಂಜನಿಸಲ- ।
ತ್ಯಾತುರದಿನಲ್ಲಿಗೆಯ್ದುವೆನೆಂದು ಪೊರಮಡಲ್ ।
ನೀತಿವಿದನುತ್ತಮಗುಣಾನ್ವಿತ ಸುಬುದ್ಧಿಮಂತ್ರೀಶನಿಂತೆಂದನಾಗ ॥ ೪೧ ॥
ಒಜೆಯಲ್ಲದು ನಿನಗೆ ನಿನ್ನನುಜ್ಞೆಯೊಳಗೀ ।
ರಾಜಧಾನಿಯೊಳುಳ್ಳ ಮಂಡಳಿಕಸಾಮಂತ ।
ರಾಜಾಧಿರಾಜದುರ್ಗಾಧೀಶದಂಡನಾಥಾದಿ ರಾಜಕುಮಾರರ ॥

ತೇಜಿಷ್ಟರತಿರಥಮಹಾರಥರ ಸುಭಟರ ಸ- ।
ತೀಜನರ ನೆರೆದಿರ್ದ ನೆಲೆಗೆ ನೀನೊರ್ವನೇ ।
ರಾಜನೀತಿಯು ಮೀರಿ ಪೋಗಲಪಕೀರ್ತಿಯಹುದದರಿಂದ ಭೂಮಿಪಾಲಾ ॥ ೪೨ ॥
ರತಿರೂಪನಚ್ಚೊತ್ತಿದಂತೆ ಸೊಗಯಿಸುವ ಪುರ ।
ಸತಿಯರುಂಟವರ ನೋಡಿದರೆ ಮೇಲಿಕ್ಕುವುದು ।
ಮತಿಯದರಿನತಿಪಾಪಮಪ್ಪುದಥವಾ ಮೀರಿ ಸಜ್ಜನಿಕೆಯಂ ಮೆರೆದೊಡೆ ॥
ಕ್ಷಿತಿಪ ಕೇಳ್ ಪೊಲನ ಪೊಕ್ಕಾ ಸುರಭಿಯಾ ಪೊಲನ- ।
ನತಿಕೇಡು ಮಾಡದೆ ಯಿರದೆಂಬರದರಂತೆ ।
ಸತಿಯೆಡೆಗೆ ಪೋದ ನರಪತಿಯನ್ಯ ಸತಿಯರಾಸೆಗೆ ಪೋದನೆಂದೆಂಬರು ॥ ೪೩ ॥
ಅದುಕಾರಣದಿಯವನಿಪತಿ ನಿನ್ನ ಪುರಜನದ ।
ಹೃದಯದೊಳಗತ್ಯಂತ ಸಂಶಯಂ ಸಂಜನಿಸಿ ।
ಸುದತಿಯರ ಹರಿಬವೇ ಹರಿಬಮವನೀಮಂಡಲದೊಳು ಜೀವಿಪ ನರರಿಗೆ ॥
ಅದುವೆ ನಿಶ್ಚಯವೆಂದು ತಮ್ಮ ಕೇಡಿಂಗೆ ತಾ- ।
ವೆದೆ ದುಡುಕುಗೊಳ್ಳದೆ ಕಟ್ಟೊಡೆಯನಿವನೆಂದು ।
ಬೆದರದೆ ಬಂದುದಂ ಕಾಣ್ಬೆವಾವೆಂದು ಕೆಟ್ಟೆಣಿಸದಿರದಾ ಲೋಕವು ॥ ೪೪ ॥
ಹೆಚ್ಚಿದುದು ನಿನ್ನ ರಾಣುವೆಯದರಿನವರೊಳಗೆ ।
ಮಚ್ಚರವ ಮಾಡಬೇಡೆಂಬುದನೆ ಬಿಟ್ಟು ನಿ- ।
ನ್ನಿಚ್ಚೆಗಳನದಿ ಬಣ್ಣವಣ್ಣಿಗೆಯ ಮಾತನಾಡುವುದು ನನಗಾದುದಿಲ್ಲ ॥
ಮುಚ್ಚುಮರೆಯೇಕೆ ನಿನ್ನ ದುರಾಗ್ರಹದಿಂದ ।
ವೊಚ್ಚತಂ ನಿನ್ನರಸುತನಕೆ ಕೇಡಹುದು ಪಡಿ- ।
ಪುಚ್ಚವೇಕಿದಕೆಯದರಿಂದ ನೃಪನೀತಿಯಂ ಮೀರಬೇಡವನಿಪಾಲಾ ॥ ೪೫ ॥
ಎನಲೆಂದನಾ ಪ್ರಧಾನಿಯು ಕೂಡಿ ಭೂಮಿಪತಿ ।
ವನಗಜಂಗಳನಲ್ಲಕಲ್ಲೋಲಮಂ ಮಾಡಿ ।
ತನಗೆ ತಾನೇ ಮೃಗಾಧಿಪ ಪಟ್ಟವಂ ಕಟ್ಟಿಕೊಂಡ ಪಂಚಾಸ್ಯದೊಡನೆ ॥
ಮುನಿದು ಬಹು ಮೃಗವೇನಮಾಡುವುವೆನಲ್ ಮಹೀ- ।
ವನಿತೇಶನಿಂತೆಂದನಾ ಸಚಿವನತಿಸೂಕ್ಷ್ಮ- ।
ವೆನಿಸಿದಿರುಪೆಗಳು ಪಲವುಂ ಕೂಡಿ ಸುತ್ತಿ ಫಣಿಪತಿಯ ಜೀವಂಗೊಳ್ಳವೇ ॥ ೪೬ ॥
ಅರಸ ಕೇಳದರಿಂದ ಬಹು ಜನ ವಿರೋಧಮಂ ।
ಪರಿಹರಿಸಲಾರ್ಗಮಳವಲ್ಲವೆನಲಿಂತೆಂದ ।
ವರಮಂತ್ರಿ ಕೇಳೊರ್ವ ಚಂದ್ರಮನ ಕಾಂತಿ ಹಲವುಂ ತಾರಗೆಯ ಬೆಳಗನು ॥
ಹರಿಯಿಸುವ ತೆರದಿ ತಮ್ಮಾ ಬೆಳಗಿನಿಂದ ಶಶಿ- ।
ಕಿರಣಮಂ ಪರಿಪಡಿಸಬಲ್ಲವೇ ಯದರಿಂದ ।
ಪುರದ ಪುಲ್ಮಾನಿಸರ್ ಮುನಿದು ಸನ್ನಂ ಕೆಡಿಸಲಾರ್ಪರೇ ಎನಲೆಂದನು ॥ ೪೭ ॥

ಅರಸ ಕೇಳ್ ನಿನ್ನಂದುದಹುದು ಹಲವುಂ ಹುಲ್ಲ ।
ಹುರಿಗೂಡಿ ಹಗ್ಗಮಂ ಮಾಡಲದು ಗಿರಿವರಕೆ ।
ಸರಿಯೆನಿಪ ಮದಗಜೇಂದ್ರನ ಕಾಲ ಬಂಧನಂ ಮಾಡದೇ ಸುಮ್ಮನಿಹುದೇ ॥
ಪುರಜನಗಳೆಲ್ಲ ಮುನಿದೊಡೆ ಮಹೀಶಗೆ ಶಕ್ತಿ ।
ಯಿರದದನು ಬಲ್ಲೆ ನೀನೇ ಯೆನಲ್ ಕಿರುಕಿಚ್ಚು ।
ಹರವರಿಯ ಬಿಂಜದಡವಿಯು ನಿಮಿಸದೊಳ್ ದಾಮದೂಮಮಂ ಮಾಡದಿಹುದೇ ॥ ೪೮ ॥
ಎಂದು ನರಪತಿ ತನ್ನ ಭುಜಬಲವನೇ ನುಡಿಯು- ।
ತೊಂದಿನಿಸು ನೃಪನೀತಿಯುಂ ಕೇಳದಿರಲು ಮನ- ।
ನೊಂದು ಮಂತ್ರೀಶನಿಂತೆಂದನು ವಿನಾಶಕಾಲಕ್ಕೆ ವಿಪರೀತಬುದ್ಧಿ ॥
ಮುಂದುವಿಡಿದಿಹುದದೆಂತೆನೆ ಹೊಮ್ಮಿಗಂ ಕಪಟ- ।
ಮೆಂದದಂ ಭಾವಿಸದೆ ಬೆನ್ನಟ್ಟಿ ಪೋಗಿ ರಘು- ।
ನಂದನಂ ಹಾನಿವಡೆಯಿತ್ತಿಲ್ಲವೇ ಎಂದು ಮತ್ತಮಿಂತೆಂದನಾಗ ॥ ೪೯ ॥
ಇದರಿಂದ ತಪ್ಪದಹುದರಸುತನಕತಿ ಹಾನಿ ।
ಯಿದನು ನೀನೇ ಬಲ್ಲೆ ಯಿದಿರಿಟ್ಟು ಮಾತಾಡಿ ।
ಬೆದರಿಸುವೆ ನನ್ನನೆನಬೇಡ ಮುನ್ನೊಬ್ಬರಸು ಬಹು ಜನ ವಿರೋಧದಿಂದ ॥
ಒದವಿದೈಸಿರಿಯನೀಗಾಡಿ ದೇಸಿಗನಾದ ।
ಹದನುಮಿನಾಡೊಳಗೆ ಜನಜನಿತಮೆನೆ ಕೇಳಿ ।
ಯದರ ಕಥನವನು ಪೇಳೆನೆ ಪೇಳ್ದನಾ ಸಚಿವನಾ ಮಹೀಪತಿಯೊಳಿಂತು ॥ ೫೦ ॥
ಶುದ್ಧಚಿತ್ತಂ ಸುಜನವಿನುತ ಪ್ರದಾನವಂ- ।
ಶೋದ್ಧಾರಕಂ ಪ್ರಚುರಗುಣಭೂಷಕಂ ಬುದ್ಧಿ- ।
ವೃದ್ಧಂ ಸುಬುದ್ಧಿ ಸಚಿವೋತ್ತಮಂ ನುಡಿದ ನುಡಿಗೇಳಿಯಾಲಿಸುತಿರ್ದನು ॥
ಉದ್ಧತನಿರೋಧಿನಿಕುರುಂಬಕೋಳಾಹಳ ಸ- ।
ಮೃದ್ಧಪ್ರತಾಪಿ ಪರಿವೃಢಕುಲಲಲಾಮಂ ಪ್ರ- ।
ಸಿದ್ಧನುದಿತೋದಯ ಮಹೀಶ್ವರಂ ಜಿನಸಮಯವಾರ್ಧಿವರ್ಧನಚಂದ್ರನು ॥ ೫೧ ॥
ಇದು ವಿಬುಧಜನವಿನುತವಿದು ವಿಬುಧಜನವಿನತ- ।
ಮಿದುವಿದಿತ ಜಿನಸಮಯಶರಧಿಸಂಪೂರ್ಣೇಂದು ।
ಸದಮಲಚರಿತ್ರ ಚೆಂಗಾಳ್ವಭೂವರನ ಸಚಿವಾನ್ವಯಾಂಬರಹಂಸನು ॥
ಮದನಸಮರೂಪನುತ್ತಮಗುಣಕರಂಡಕಂ ।
ಚದುರ ಮಂಗರಸನುಸುರಿದ ಕೌಮುದೀ ಕಥೆಯೊ- ।
ಳೊದವಿದುದು ಸಚಿವಕುಲತಿಲಕನುತ್ತಮನೀತಿವಚನ ತಾನೊಂದು ಸಂಧಿ ॥ ೫೨ ॥

ಸಂಧಿ ೧ಕ್ಕಂ ಪದ ೫೨ಕ್ಕಂ ಮಂಗಳಮಹಾ ॥

# ಎರಡನೆಯ ಸಂಧಿ.

## ಯಮದಂಡನ ಕಥೆ.

ಶ್ರೀಯೊಳಚ್ಯುತಗೆ ಸಮನೆನಿಸುವ ಸುಯೋಧನಂ ।
ನ್ಯಾಯಮಂ ಮೀರಿ ತಾನೆಣಿಸಿದ ಕುಮಂತ್ರದಿಂ- ।
ದಾ ಯಿಳಾಧೀಶತ್ವಮೆಲ್ಲವೊಂದೇ ಕ್ಷಣದೊಳಿಂತುಟಧ್ರುವಮಾದುದು ॥ ಪಲ್ಲ ॥

ಕುರುಜಾಂಗಣಾಖ್ಯವಿಷಯದ ಹಸ್ತಿನಾಗಪುರ- ।
ವರದೊಳ್ ಸುಯೋಧನ ಮಹೀಪಾಲಕನ ಪಟ್ಟ- ।
ದರಸಿಯುತಿ ರೂಪವತಿ ಕಮಲೆಯೆಂಬಳು ಕೂಡಿ ಗುಣಪಾಲನೆಂಬ ಹೆಸರಾ ॥
ವರಕುಮಾರಂಬೆರಸು ಮಾರಾಂತ ಮನ್ನೆಯರ ।
ಶಿರವ ಸೆಂಡಾಡಿ ಮರೆವೊಕ್ಕ ಮಂಡಳಿಕರಂ ।
ಪರಿಪಾಲಿಸುತ್ತ ಜೀಯೆನಿಸಿ ಧರಣೀತಳಮನೆಲ್ಲಮಂ ಸುಖದಿನಿಹನು ॥ ೧ ॥

ಆ ದುಷ್ಟನಿಗ್ರಹ ವಿಶಿಷ್ಟಪಾಲಗೆ ಸಾಮ- ।
ಭೇದ ಪತಿಹಿತಕಾರ್ಯಧುರಧೀರಮಂತ್ರಿಯುತ- ।
ನಾದಿಗೂರ್ಜಿತನು ಪುರುಷೋತ್ತಮವೆಸರ ಮಂತ್ರಿಯುಂ ಸತ್ಯಶೌಚಯುತನು ॥
ವೇದವೇದಾಂಗತತ್ವಜ್ಞನಾಶೀರ್ವ್ವಾದ- ।
ನಾದ ಗುಣಹಿತ ಪುರೋಹಿತ ಕಪಿಲನುಂ ಪುರಮ- ।
ನಾದರದಿ ರಕ್ಷಿಪಂ ಯಮದಂಡನೆಂಬ ನಾಮದ ತಳಾರನುಮಿರ್ಪರು ॥ ೨ ॥

ಆ ಯಿಳಾಧೀಶನೊಂದಾನೊಂದು ದಿವಸದೊಳು ।
ರಾಯರಾವುತರ ಜೋದರರ ರಥಿಕರ ಕಾಲ ।
ಪಾಯಕರ ಪಡಿಯರರ ಸಂಧಿವಿಗ್ರಹಿಗಳ ಪುರೋಹಿತರ ಸಾಮಂತರಾ ॥
ರಾಯಭಾರಿಗಳ ರಾಯಸದವರ ಕರಣಿಕರ ।
ಜೋಯಿಸರ ಜಗಜಟ್ಟಿಗಳ ಪಂಡಿತರ ಗಡಿಯ ।
ನಾಯಕರ ಗಾಯಕರ ನಡುವೆ ವೊಡ್ಡೋಲಗಂಗೊಟ್ಟು ರಂಜಿಸುತ್ತಿರ್ದ್ದನು ॥ ೩ ॥

ಮಂಡಳಿಕಮಂಡಲದ ಮಂತ್ರಿಗಳ ಸಂದಣಿಯ ।
ದಂಡಾಧಿನಾಥರ ಕದಂಬದ ನಿಯೋಗಿಗಳ ।
ಮಂಡಳಿಯ ಮಕುಟವರ್ಧನರ ತಿಂಥಿಣಿಯ ರಾಜಾಧಿರಾಜರ ಸಮಿತಿಯಾ ॥
ಮಂಡನದ ಮಿಸುಪ ನವವಿಧಮಪ್ಪ ಮಾಣಿಕದ ।
ಹಿಂಡುವೆಳಗಾವರಿಸಲಾ ಸಭಾಮಂಟಪಂ ।
ಕಂಡರಗೆಯುಂಗೆಯ್ದು ರೋಹಣಾಚಲದಂತೆ ಕಣ್ಗೆ ರಂಜಿಸುತಿರ್ದುದು ॥ ೪ ॥

ಪಡಿಯರರ್ ತಂದು ಕಾಣಿಸಲು ಪರನೃಪರೆಯ್ದಿ ।
ಕೊಡುವ ಕಪ್ಪದ ಕರಿತುರಂಗರತ್ನಾಳಿಯಿಂ ।
ಬಿಡದೆ ನೋಡುವ ಚತುರ ಕವಿಗಮಕಿವಾದಿವಾಗ್ಮಿಗಳ ಪಿರಿದುಂ ಸೊಗಯಿಪಾ ॥
ನುಡಿಗೆ ಕಿವಿಗೊಡುತೆಡಬಲಂ ಬಿಡದ ನೀರೆಯರ್ ।
ನಿಡುಗಯ್ಯೊಳಿಟ್ಟ ಕಟಕಂ ಝಣಂ ಝಣರೆನಲ್ ।
ಪಿಡಿದು ಬೀಸುವ ಚಮರದೆಲರ್ಗೆ ಮೈಗೊಟ್ಟು ಮನುಜೇಶನೊಪ್ಪುತ್ತಿರ್ದನು ॥ ೫ ॥
ಅಸಮ ಸೌಭಾಗ್ಯಸಮುಪೇತನೀ ತೆರದಿ ಮನ- ।
ಮೊಸೆದು ಸರ್ವಾವಸರಮೆಂಬೋಲಗದೊಳು ಕ- ।
ಗ್ಗಸೆವಸಿಂಹಾಸನಾರೂಢನಾಗಿರಲೊರ್ವನುಬ್ಬಸದಿ ಹರಿದುಬಂದು ॥
ಅಸವಸದಿ ಸಾಷ್ಟಾಂಗವೆರಗಿ ಕೈಮುಗಿದನೆಲೆ ।
ವಸುಧೇಶ ಕೇಳೆಮ್ಮ ಗಡಿವಾಡಗಳನು ಮಾ- ।
ಮಸಕದಿಂ ಪರಭೂಪರಿರಿಯುತಿರ್ದಪರೆಂಬ ಸುದ್ದಿಯಂ ಕೇಳ್ದನಾಗ ॥ ೬ ॥
ನಿಡುನಿದ್ದೆಯಲ್ಲಿ ಗುಹೆಯೊಳಗೆ ಮೆಯ್ಮರೆದಿರ್ದ್ದ ।
ಕಡುಗಲಿ ಮೃಗಾಧೀಶನಾಡುವೊಲನಂ ಮಿಗಗ- ।
ಳೊಡಗೂಡಿಯುಲುಹು ಮಾಡುವ ತೆರದಿನೆನ್ನ ಮರವೆಯೊಳೆನಗೆಯಾಳ್ವೆಸನನು ॥
ಬಿಡದೆ ಮಾಡುವರೀಗ ಬಂದೆನ್ನ ಸೀಮೆಯಂ -
ತುಡುಗಣಿತನದಿ ಹೊಕ್ಕ ತುಂಟಭಂಟಕೆಯುಮಂ ।
ಬಿಡಿಸದೊಡೆಯಾಲಸ್ಯದಿಂದಮೃತ ವಿಷಮಪ್ಪ ತೆರದೊಳಹುದೆನ್ನ ಕಾರ್ಯ ॥ ೭ ॥
ಎನಲೊದರಿ ಕೆಕ್ಕಳಂಗೆದರಿ ಗದ್ದುಗೆ ಪೊಯ್ದು ।
ಕೊನೆಮೀಸೆಗಡಿದು ನಿಸ್ಸಾಣಮಂ ಹೊಯ್ಸಿ ಯನಿ- ।
ತಿನಿತೆಂಬ ಗಣನೆಗೆಯ್ದದ ತೇಜಿಕೂರಾನೆ ತೇರಾಳುಗಳನೆ ಕೂಡಿ ॥
ಇನಿಸು ತಡೆಯದೆ ಪೊಳಲಪೊರಮಟ್ಟು ಪೊರವೊಳಲ ।
ವನದಲ್ಲಿ ಬಿಟ್ಟಾ ತಳಾರ ಯಮಡಂಡನಂ ।
ಮನವೊಸೆದು ಬರಿಸಿ ನಗರಿಯ ರಕ್ಷಿಸಲ್ವೇಳಿ ತೆರಳ್ದನವನೀಶನಿತ್ತ ॥ ೮ ॥
ಉತ್ತಮಗುಣಾಭರಣನಾ ತಳಾರಂ ಮಮತೆ- ।
ವೆತ್ತು ಪುರವರದೊಳುಳ್ಳಷ್ಟಾದಶ ಪ್ರಜೆಯ ।
ವೊತ್ತಮಂ ಪರಿರಕ್ಷಿಸುತ್ತಿರಲ್ಕತ್ತ ಸಾಹಸಿ ಸುಯೋಧನ ಭೂಪತಿ ॥
ದುತ್ತಂಡಿಕೆಯೊಳು ತನಗಿದಿರಾದ ಮನ್ನೆಯರ ।
ತೊತ್ತಳಂದುಳಿದು ನಿರ್ವ್ವಂಶಮಂ ಮಾಡುವೆನೆ- ।
ನುತ್ತಕೋಪಾರೂಢನಾಗಿ ನೆಲಹೊರದ ಚಾತುರ್ದಂತಸೇನೆವೆರಸಿ ॥ ೯ ॥
ಬಿಟ್ಟ ಪಯಣದೊಳು ಬಿಡುವಯಣಮಿಲ್ಲದೆ ದಾಳಿ ।
ಯಿಟ್ಟು ಮಾರ್ಮಲೆತು ಕೆಲಬರು ಬಲಿದುಕೊಂಡಿರ್ದ್ದ ।
ಪಟ್ಟಣಂಗಳನು ಧೂಳೀಪಟ್ಟಮಂ ಮಾಡಿ ನಿರ್ದ್ಧಾಮದೂಮಮಾಗಿ ॥

ಸುಟ್ಟು ಸೂರೆಯಂ ಹೊಯ್ದು ಹುಲಿಕರಡಿಗಳಿಗೆ ಮನೆ- ।
ಗಟ್ಟಿಸಿ ಬಳಿಕ್ಕ ಕಂಡರಸುಗಳಿಗಭಯಮಂ ।
ಕೊಟ್ಟೋಡಿದವರೂರ್ಗೆ ಠಾಣೆಯಮಿಕ್ಕಿಮಗುಳ್ದನಾ ಮಹಿಪಾಲನು ॥ ೧೦ ॥
ಅರಿನೃಪರ ಜಯಿಸಿ ಅರಸೆಯ್ದುವುದನರಿದು ಪುರ ।
ವರದೊಳಿಸೆವಷ್ಟಶೋಭೆಯನು ವಿರಚಿಸಿ ಹಿರಿದು ।
ಹರುಷದಿಂದಿರ್ದಂದು ಕಂಡ ಯಮದಂಡನೊಡನೆಯ್ದಿ ಬಳಿಕಾ ಪುರಜನಂ ॥
ಉರುಮುದದಿನೆರಗಲೊಡನೆಲೆ ಪುರಜನಂಗಳಿರ ।
ಪರಿಣಾಮವೇ ನಿಮ್ಮ ಮಕ್ಕಳೆಂದು ಭೂ- ।
ವರನು ಬೆಸಗೊಳಲವರ್ ಕರಕಮಲಮಂ ಮುಗಿಯುತಿಂತು ಬಿನ್ನಪಗೆಯ್ದರು ॥ ೧೧ ॥
ವಸುಧೇಶ ನಿಮ್ಮ ಬೆಸದಿಂದ ನೀವೆ ನಮಗೆ ।
ಹುಸಿ ತಾನೆ ದಿಟವಾಗಿ ಯಮದಂಡನೆಮ್ಮ ರ- ।
ಕ್ಷಿಸಿದನದರಿಂದೆಮಗೆ ಹಿರಿದು ಸಂತಸವೆಂಬ ನುಡಿ ತನಗೆ ವಿಷಮವಾಗಿ ॥
ಹಸನಾಯ್ತು ಕಾರ್ಯ್ಯಮೆನ್ನರಸುತನಮಿವನ ಕೈ- ।
ವಸಮಾಯ್ತು ನನಗಾಗದಿನ್ನೆಂದು ಪಿರಿದು ಚಿಂ- ।
ತಿಸುತ ಹೊಳಲಂ ಹೊಕ್ಕು ನಿಜ ನಿವಾಸಕ್ಕೆಯ್ದುತಾ ಯಿರುಳೊಳಿಂತೆಣಿಸಿದಂ ॥ ೧೨ ॥
ಜಾಯಾಜನದ ಜಂಗುಳಿಯನು ಜವ್ವನಿಗನಂ ।
ಪಾಯಸದ ಕೊಡದ ಮುದ್ರೆಯನಾ ಬಿಡಾಲಮಂ ।
ಕಾಯಿ ನೀಮೆಂದು ಕೈವರ್ತಿಸಿ ವಿಚಾರಮಂ ಮಾಡಲೊಲ್ಲದ ಮೂಢನಾ ॥
ಆ ಯಿರವಿನಂತಾದುದ ವಿನೇಕತನದಿ ಮ- ।
ತ್ತೀಯೆನ್ನ ಸಿರಿಯಂ ನಿಯೋಗಿ ಹಸ್ತಾರ್ಪಿತ ಮ- ।
ನೋಯುರಂಗೆಟ್ಟು ಮಾಡಿದುದೆಂದು ಬಗೆದು ಬಳಿಕಾ ಯಿರುಳ ಕಳೆದುಬಂದು ॥ ೧೩ ॥
ಬರಿಸಿ ಸಂಶಯಹೃದಯನಂದು ಮಂತ್ರಾಲಯಕೆ ।
ಭರದಿಂದಮಾ ಸಚಿವನಂ ಪುರೋಹಿತನುಮಂ ।
ಧರಣಿಪಾಲಕನತಿ ಕುಮಂತ್ರದಿಂದಿಂತೆಂದನಾನನ್ಯ ಭೂಮಿಪರೊಳು ॥
ಧುರಮುಖದೊಳಳಿವೆನೆಂದೇ ಬಗೆದು ನಮ್ಮ ಪುರ- ।
ವರವನೆಲ್ಲವ ತನ್ನ ಕೈವಶಂ ಮಾಡಿ ನಾ- ।
ನರಸಪ್ಪೆನೆಂದಿರ್ದನೀ ದ್ರೋಹಿ ಯಮದಂಡನಿದಕೇನುಪಾಯವೆಮಗೆ ॥ ೧೪ ॥
ಎಂದೊಡಾ ಯಮದಂಡನೀ ದ್ರೋಹಮಂ ಮಾಡು- ।
ವಂದಮಿದು ಸಂದೇಹಮೆಂದವರು ನುಡಿಯಲಿಂ- ।
ತೆಂದನಾ ನೃಪತಿ ಸತ್ಯಂಧರ ಮಹಾರಾಜನಂದು ಕಾಷ್ಠಾಂಗಾರಗೆ ॥
ಮುಂದ ನೋಡದೆ ಮಂತ್ರಿಪದವನಿತ್ತೊಡೆಯವನ ।
ಕೊಂದುದಿಲ್ಲವೆಯೆಂದು ನಾನಾ ಕುದೃಷ್ಟಿಂದ ।
ಮಂದಭಾಗ್ಯಂ ಮತ್ತಮವರನೊಡಬಡಿಸಿ ಯೀ ಕಾರ್ಯಕಿನ್ನಾವುದೆಣಿಕೆ ॥ ೧೫ ॥

ಎನಲಿಂತು ಬಿನ್ನಪಂಗೆಯ್ದುರವರರಸಂಗೆ ।
ಜನತಾಧಿನಾಥ ನೀವೆಣಿಸಿದುದು ತಪ್ಪದಿದ- ।
ಕನುಮಾನವೇತಕೀ ಕಾರ್ಯ ಹುರಿಗೂಡಿದೊಡೆ ಮುಂದಕ್ಕೆ ನಮಗಶಕ್ಯ ॥
ಅನಿತರಿಂದಿನಜಾಪ್ಯಮಂ ಮಾಡದಿವಗಾಜ್ಞೆ- ।
ಯನು ಮಾಳ್ಪುಪಾಯಂ ಸ್ವಾಮಿ ನೀವೇ ಅರಿವಿ- ।
ರೆನೆಯವನ ಮೇಲೊಂದು ನೆವವಿಲ್ಲದಾಜ್ಞೆಯಂ ಮಾಡೆ ಬಹುಜನವಿರೋಧ ॥ ೧೬ ॥
ಅದರಿಂದ ನಾನವನ ಮೇಲೆಯಪರಾಧಮಂ ।
ಚದುರತನದಿಂ ಹೊರಿಸಿ ಸಕಲರಾಣುವೆಯುಮನ- ।
ಕಿದು ಕಾರ್ಯ್ಯವೆನಿಸಿ ಯಿವಗಾಜ್ಞೆಯಿಕ್ಕುವ ತೆರನ ತೋರ್ಪೆ ನಾನಿಂದಿರುಳೊಳು ॥
ಪದೆದು ಮತ್ತಾ ಯಿರ್ವರುಂಬೆರಸು ತನ್ನ ನಿಜ ।
ಸದನದೊಳ್ ಕನ್ನಮಂ ಸಮೆದು ಭಂಡಾರದೊಳ- ।
ಗೊದವಿದ ಸುವಸ್ತುವಂ ಕಳ್ದು ಬೇರೊಂದೆಡೆಯೊಳಿರಿಸಿಯಾಸ್ಥಾನಕೆಯ್ದಿ ॥ ೧೭ ॥
ನೆರೆದ ನೃಪವರರ ಮಧ್ಯದೊಳೋಲಗದೊಳಿರ್ದು ।
ಕರಸಿ ಯಮದಂಡನಂ ಭೂಪನವಗಿಂತೆಂದ ।
ನರಮನೆಗೆ ಕನ್ನಮಂ ಸಮೆದು ಕಳ್ಳರು ಹೊಕ್ಕು ಭಂಡಾರದಲ್ಲಿ ಬಹಳ ॥
ವರವಸ್ತುವಂ ಕಳ್ದುಕೊಂಡೊಯ್ದುರವರನತಿ ।
ಭರದಿಂದ ತಂದುಕೊಡು ತಂದುಕೊಡದೊಡೆ ನಿನಗೆ ।
ಪಿರಿದೆನಿಸುವಾಜ್ಞೆಯಂ ಮಾಡಿಸುವೆನೆನೆ ಕೇಳಿ ಮನದೊಳಿಂತೆಂದನಾಗ ॥ ೧೮ ॥
ಕ್ಷಿತಿಪರವಿವೇಕತನದಿಂದೊಗೆದ ಮುನಿಸು ತಮ- ।
ಗತಿಹಿತವರಂ ದ್ರೋಹಿಯೆಂಬುದು ಚಿರಾಯುವಂ ।
ಗತಜೀವಿಯೆಂಬುದುದಿತ ಪ್ರತಾಪಿಗಳನತ್ಯಂತ ಭೀರುಗಳೆನಿಪುದು ॥
ಅತಿಸಿದ್ಧಮಾಯ್ತು ನಮ್ಮೀ ನೃಪನೊಳೆಂದು ಕು- ।
ತ್ಸಿತವನ ಕುಠಾರ ಯಮದಂಡನೆಣಿಸುತ್ತಿರಲ್ ।
ಕೃತಕಮಾನಸನಾ ಸುಯೋಧನ ನೃಪಾಲನವಗಂದಿಂತು ನುಡಿದನಾಗ ॥ ೧೯ ॥
ನಾಡುಬೀಡೆಲ್ಲಮಂ ನಲ್ಮೆಯಿಂ ರಕ್ಷಣೆಯು ।
ಮಾಡುವೆಡೆಯೊಳ್ ಧುರಂಧರತೆ ನಿನ್ನೊಳಗೆ ಒಡ- ।
ಗೂಡಿರ್ದು ಬಳಿಕ ನಮ್ಮರಮನೆಯು ಪರಿಹರಿ ಪಡಕಣದ ಕಾವಲನಿನಿಸನು ॥
ನೋಡಿ ರಕ್ಷಿಸಲು ಬೇಕೆಂದು ಮನದೊಳ್ ಸಡ್ಡೆ ।
ಮಾಡದಾದೆ ಯೆಲಾ ಯೆನುತ್ತ ಪಿರಿದಾಗ್ರಹಂ ।
ಮಾಡಿದ ಮಹೀಪತಿಗೆ ಮೆಯ್ಯಡುಗುತಿಂತೆಂದು ಬಿನ್ನಪಂಗೆಯ್ದನಾಗ ॥ ೨೦ ॥
ನಾನಿನ್ನ ರಾಜಧಾನಿಯು ರಕ್ಷಿಪಂದಿಂದ ।
ಹಾನಿಯಾಯ್ತಿಲ್ಲೆನ್ನ ಕಾವಲ ವಿಚಾರವೆಲೆ ।
ಭೂನಾಥ ಕೇಳೆನ್ನ ಪಾಪದ ಫಲವಿದ್ಯೆಸೆಯೆಂದು ಕಡು ಭೀರುವಾಗಿ ॥

ಮಾನನಿಧಿ ಯಮದಂಡನಾ ಕಳ್ಳರಂ ನೋಳ್ಪೆ ।
ನಾನತಿ ತ್ವರಿತದೊಳಗೆಂದು ನೃಪತಿಗೆ ನಮಿಸಿ ।
ತಾನೊಬ್ಬನೇ ಕನ್ನಮಂ ಸಮೆದ ಬಟ್ಟೆಯೊಳು ಭಂಡಾರಕೆಯ್ತಂದನು ॥ ೨೧ ॥
ಬರುತ ಕಳ್ಳರ ಹೆಜ್ಜೆ ಹದನಮಂ ನೋಳ್ಪಾಗ- ।
ಲರಸು ಮೆಟ್ಟುವ ಪಂಚರತ್ನಮಯ ಪಾದುಕಂ ।
ವರ ಸಚಿವನಿಕ್ಕುವುಂಗುರಮಾ ಪುರೋಹಿತನ ಹೊನ್ನಯಜ್ಞೋಪವೀತಂ ॥
ಉರುಕೋಶಗೃಹದ ಕನ್ನದ ಬಾಯೊಳಿರೆ ಕಂಡು ।
ಪಿರಿದು ವಿಸ್ಮಯನಾಗಿ ನಿರಪರಾಧಿಯನೆನ್ನ ।
ಕರುಣವಿಲ್ಲದೆ ಕೆಡಿಸಬೇಕೆಂದು ಮೂವರುಂ ಬಂದು ಭಂಡಾರವೊಕ್ಕು ॥ ೨೨ ॥
ವಿತ್ತಮಂ ಕಳ್ದೊಯ್ವ ಸಂಭ್ರಮದೆ ಮರೆದರೆಂ- ।
ದೆತ್ತಿಕೊಂಡತಿ ಗುಪ್ತದಿಂ ತನ್ನ ಮನೆಗೆಯ್ದಿ ।
ಮತ್ತಾರುಮರಿಯದಂತಿರಿಸಿ ಹಸನಾಯ್ತೀ ಕಾರ್ಯಮೆಂದಾ ನೃಪತಿಯಾ ॥
ಹತ್ತಿರಕ್ಕೆಯ್ದುವಾ ಸಮಯದೊಳಗಾ ಹಸೆಯ ।
ಹೊತ್ತರೊಳಗಾ ಗಜಬಜೆಯ ಕೇಳಿ ಪುರಜನಂ ।
ಮತ್ತಲ್ಲಿಗೆಯ್ದಲಾ ನೃಪತಿಯಾ ವೃತ್ತಾಂತವೆಲ್ಲವನವರೊಳುಸಿರ್ದನು ॥ ೨೩ ॥
ಅರಸು ನುಡಿದಾ ದುರಾಗ್ರಹದ ನುಡಿಯುಂ ಕೇಳಿ ।
ಪುರಜನಗಳಿಂತೆಂದರೆಲೆ ಮಹೀಪಾಲಕಾ ।
ಅರಮನೆಯ ಕಾವಲಂ ಮಾಡದ ತಳಾರನೇ ದ್ರೋಹಿಯಿವಗಾಜ್ಞೆ ಬೇಕು ॥
ಧರೆ ಮೆಚ್ಚುವಂತೆ ಕಳ್ಳರನರಸಿತಹುದಕ್ಕೆ ।
ತರಹರದಿನೆಂಟು ದಿನದವಧಿಯುಂ ಕೊಡು ಮೇಲೆ ।
ತರದಾದೊಡಾಜ್ಞೆಯುಂ ನಾವಿವಗೆ ಮಾಳ್ಪೆವಿಂತಿದಕೆ ಸಂದೇಹಬೇಡ ॥ ೨೪ ॥
ಎನೆ ಕೇಳಿಯಾ ನುಡಿಗೊಡಂಬಟ್ಟು ಬಳಿಕ ಪುರ ।
ಜನಮನಾದರದಿಂದ ಬೀಳ್ಕೊಡಲ್ಕವರೊಡನೆ ।
ಜನವಿನುತ ಯಮದಂಡನೆಯ್ದಿಯರಸಿನ ದುರಾಗ್ರಹಕೆ ನಾನೇ ಗೆಯ್ವೆನು ॥
ಎನೆ ಚಿಂತೆ ನಿನಗೇಕೆ ಬಾಧಕಗೆ ಬಾಧೆಯೇ ।
ಜನಿಯಿಸುವುದದರಿಂದ ತರಹರಂ ಮಾಡು ನೀ- ।
ನೆನುತ ಕಳುಹಲು ತನ್ನ ಮನೆಗೆ ತಳ್ಳಂಕದಿಂ ಪೋಗಲಾ ಪಗಲಳಿದುದು ॥ ೨೫ ॥
ರಾಯನಾ ವುದಯದೊಳ್ ತಳಾರನ ಬರಿಸಿ ।
ಚೋರನಂ ತಂದುದಿಲ್ಲವೆ ಯೆನಲ್ಕೆಂದನೀ ।
ಊರಂಗಡಿಯೊಳೊರ್ವನೊಂದು ಕಥೆಯುಂ ಪೇಳುತಿರ್ದ ನಾನಾ ಕಥೆಯನು ॥
ಭೂರಿಜನಗಳ ಮುಂದೆ ಕೇಳುತ್ತಮಿರ್ದೆನದು ।
ಕಾರಣದಿ ಕಳ್ಳರನು ತಪ್ಪುದಂ ಮರೆದೆನೆನ- ।
ಲಾರ್ವೆದು ನೀ ಕೇಳ್ದ ಕಥೆಯನುಸಿರೆಂದೆನಲ್ ಬಿನ್ನಪಂಗೆಯ್ದನಿಂತು ॥ ೨೬ ॥

ಚಿತ್ರೈಸು ನೃಪತಿಯೊಂದಾನೊಂದು ಕೊಳದ ತಡಿ- ।
ಯೊತ್ತಿನೊಳ್ ಮುಗಿಲನೀರಂ ಬಯಸಿ ಪೋದಂತೆ ।
ತುತ್ತತುದಿಯೊಳಗೆ ಪಲ್ಲವಶಾಖೆವಡೆದು ಸತ್ತಿಗೆಯುಂತಿರೊಂದು ಮರನು ॥
ಹತ್ತಲಾರ್ಗಳವಲ್ಲದಿರಲಲ್ಲಿ ಮನೆಗಟ್ಟಿ ।
ಮುತ್ತಹಂಸನುವೊಂದು ತನ್ನ ಸಂತಾನದು- ।
ನ್ಮತ್ತ ಹಂಸಗಳು ಹಲವುಂ ಸಹಿತಮಿರಲೊರ್ವ ಧೀವರಂ ಕಂಡನದನು ॥ ೨೭ ॥
ಆವುದ್ದವೇರಿ ಹಂಸೆಯ ಹಿಡಿವ ತೆರನನಾ ।
ಧೀವರಂ ಹಡೆಯದಾ ಬಳಿಕವಾ ತರುಮೂಲ- ।
ದಾ ವಸುಧೆಯೊಳ್ ಬಲ್ಲಿ ತಪ್ಪಬಳ್ಳಿಯನರಸಿಯದರ ಬೀಜವನೆ ಬಿತ್ತಿ ॥
ಓವುತಿರಲದು ಬೆಳೆದು ಕುಡಿನಡೆವುದಂ ಕಾಣು- ।
ತಾ ವೃದ್ಧಹಂಸನಿದರಿಂ ಕೇಡು ನಮಗೆಂದು ।
ಭಾವಿಸಿ ಬಳಿಕ್ಕ ತನ್ನಾ ಪುತ್ರಪೌತ್ರಾದಿ ವಿಹಗಗಳೊಳಿಂತುಸಿರ್ದುದು ॥ ೨೮ ॥
ಇದು ಬೆಳೆದು ಬಲಿದೀ ಮರದ ತುದಿಗೆ ಬಂದೊಡವ- ।
ನಿದನೊತ್ತಿ ಹಿಡಿದು ನಾವಿರ್ಪೀ ನೆಲೆಗೆ ಬಂದು ।
ಮುದದಿ ಬಲೆಯುಂ ಬೀಸಿ ನಮ್ಮೆಲ್ಲರಂ ಪಿಡಿದು ಕೊಲ್ಲದೇ ಬಿಡುವನಲ್ಲಾ ॥
ಅದರಿಂದ ಪೋಗಿ ನೀಮೀಲತಿಕೆ ಯೆಳೆಗುಡಿಯ ।
ತುದಿಮೊದಲನೆಲ್ಲವಂ ಕಡಿಕಡಿದು ಬಿಸುಡಿ ಯೆನು- ।
ತದು ಬುದ್ಧಿವೇಳೆ ಕೇಳುತ್ತುಳಿದ ಬಾಲಹಂಸಗಳು ನಗುತಿಂತೆಂದುವು ॥ ೨೯ ॥
ಎಂದಿಗೀ ಲತೆ ಬೆಳೆವುದೆಂದಿಗಿವನಿದನಡರಿ ।
ಯೆಂದಿಗೆಮ್ಮಂ ಪಿಡಿವನೆಂದೆಂಬ ಗುಡ್ಡೆಣಿಕೆ ।
ಯಿಂದು ಶತವೃದ್ಧನಾಗಿಯುಮಿನ್ನು ಬದುಕಬೇಕೆಂಬ ಬಯುಲಾಸೆ ನಿನಗೆ ॥
ಬಂದುದಲ್ಲಾ ಎನುತ ಗಹಗಹಿಸಿ ನಗುವ ಖಗ- ।
ವೃಂದದಜ್ಞತೆಯ ಬುದ್ಧಿಯ ಮಾತು ಕಂಡು ಕಡು ।
ನೊಂದು ಮತ್ತಾ ವೃದ್ಧ ಹಂಸನವರೊಳಗಿಂತು ನೀತಿಯುಂ ನುಡಿದುದಾಗ ॥ ೩೦ ॥
ಕೇಳದ ಕುದೃಷ್ಟಿಗ್ಗೆ ಸಜ್ಜನರ್ ಬುದ್ಧಿಯಂ ।
ಪೇಳಲಾಗದು ಪೇಳೆ ನುಡಿಗೂಹೆಯುಂ ಮೀರಿ ।
ಪೇಳೆ ಮುನಿವರು ಮೀರಿ ಪೇಳೆ ಬಯ್ವರು ಮೀರಿ ಪೇಳೆ ದಂಡಿಸುವರೆಂದು ॥
ಆಳೋಚನೆಯುನಿರದೆ ಮಾಡೆಯಾ ಬಾಲಹಂ- ।
ಸಾಳಿಯೊಳ್ ನುಡಿಯಲೊಲ್ಲದೆ ಮೌನಗೊಂಡಿರ- ।
ಲ್ಕಾ ಲತಿಕೆ ಬೆಳೆದು ದಿನದಿನಕೆ ಮತ್ತಾ ಮರದ ತುತ್ತತುದಿಯುಂ ಹಬ್ಬಿತು ॥ ೩೧ ॥
ಅದನು ಕಂಡಾ ಧೀವರಂ ನಲಿಯುತೊಂದು ದಿನ- ।
ದುದಯದೊಳಗಾ ಹಕ್ಕಿ ದೆಸೆದೆಸೆಗೆ ಮೇಬೊಲಕೆ ।
ಹದವು ಮಿಗೆ ಹಾರಿಹೋದುದನರಿತು ಬಳಿಕಾ ಲತೆಯುನು ಹಿಡಿದಾ ತರುವಿನಾ ॥

ತುದಿಯೇರುತಲ್ಲಿ ಬಲೆಯಂ ಬೀಸುತಿಳಿಯಲಾ ।
ಮದಹಂಸನಿಕುರುಂಬಮೆಲ್ಲ ಮೋಹಂ ಕೊಂಡು ।
ಪೊದವಿದ ಸರಾಗದಿಂದಾ ನೆಲೆಗೆ ಬಂದು ಬೀಸಿದ ಜಾಲಕೊಳಗಾದುವು ॥ ೨೨ ॥
ಅನಿತರೊಳಗಾ ವೃದ್ಧಹಂಸ ಶಂಕಾಹೃದಯ ।
ನಿನಿಸು ತಡೆದೆಯ್ತಂದು ಬೇರೊಂದು ಭೂರುಹದ ।
ಕೊನೆಯಲ್ಲಿ ಕುಳ್ಳಿರ್ದು ವೃದ್ಧವಾಕ್ಯೋಲ್ಲಂಘನದಿ ಸಲೆ ಕೇಡು ಬಂದಿತೆಂದು ॥
ಘನದುಃಖವಡುವ ತರುಣಿ ಮಹಂಸೆಯಂ ಕಂಡು ।
ಮನದೊಳಗೆ ಮಲಮಲನೆ ಮರುಗಿ ದುಃಖಿಸುತಿರಲ್ ।
ಜನಕ ನಮ್ಮಪರಾಧಮಂ ಮನದೆ ಕೊಳ್ಳದಿನ್ನೊಂದುಪಾಯವನುಸಿರ್ವುದು ॥ ೨೩ ॥
ಅತಿಕರುಣದಿಂದೆಂಬ ದೈನ್ಯವಚನಕ್ಕೆ ನಗು- ।
ತತಿಗಳೆಯುಮಾದ ಕಾರ್ಯಂ ಹದಕೆ ಬರ್ಪ್ಪುದೇ ।
ಗತಜೀವನೇನ ಖಲು ಸೇತುಬಂಧವೆಂಬ ನೀತಿಯಿಂ ಬಾಲಕರಿರಾ ॥
ಮತಿಗೆಟ್ಟು ಮೊದಲೆನ್ನ ಸಡ್ಡೆಗೊಳ್ಳದೆ ವಂಶ- ।
ಹತಮಪ್ಪುದಂ ಮಾಡಿಕೊಂಡಿರಲ್ಲಾ ಎನಲ್ ।
ಸುತಸಮಿತಿಯೆಲ್ಲನಾ ವೃದ್ಧಹಂಸನೊಳಿಂತು ಬಿನ್ನಪಂಗೆಯ್ದುವಾಗ ॥ ೨೪ ॥
ಅರೆದರೆದು ಸುಡೆ ಕರ್ವು ಕಡುಸೊಗಸುವಡೆದ ಸ- ।
ಕ್ಕರೆಯಪ್ಪ ತೆರದಿ ದುರ್ಜನರೇಸು ಬಾಧೆಯಂ ।
ವರಸಜ್ಜನರ್ಗೆ ಮಾಡಿದೊಡವರ್ಲೋಕಹಿತಕಾರ್ಯಮನೆ ಮೆರೆವರ್ಕೈಸೆ ॥
ಗುರುವೆಯೆಂದೆಂಬ ಹಿಳ್ಳೆಗಳ ಮಾತಂ ಕೇಳಿ ।
ಕರುಣಾರ್ದ್ರಹೃದಯನಾ ಸುತಸಮಿತಿಗಹ ಕೇಡ ।
ಪರಿಹರಿಪ ತೆರದಿನಿಂತೆಂದವರ ಕೂಡೆ ಸದ್ಬುದ್ಧಿಯಂ ಪೇಳ್ದುದಾಗ ॥ ೨೫ ॥
ಹಸುಳೆಗಳಿರಾ ಕೇಳಿ ನೀವೀ ಬಲೆಯೊಳು ಬಿ- ।
ದ್ದಸುಹೋದ ತೆರದಿನಿರದೊಡೆ ಕಂಡು ಧೀವರಂ ।
ಮುಸಕದಿಂ ನಿಮ್ಮೆಲ್ಲವರ ಗೋಣ ಮುರಿದು ವಸುಧಾತಳಕ್ಕೀಡಾಡುವಂ ॥
ಅಸುವಿಲ್ಲದಂತಿರ್ದೊಡಿವು ಸತ್ತುವೆಂದು ಭಾ- ।
ವಿಸಿ ಬರಿದೆ ನೆಲಕೆ ಹಾಕದೆ ಮಾಣನಾಗಳಸ- ।
ವಸದಿಂದ ದೆಸೆದೆಸೆಗೆ ಪಾರಿ ನೀವೆಂದೆಂಬ ಬುದ್ಧಿಗೆ ಒಡಂಬಟ್ಟುವು ॥ ೨೬ ॥
ವರವೃದ್ಧನೊರೆದ ಬುದ್ಧಿಯ ಕೇಳಿ ಹಂಸಾಳಿ ।
ಮರಣವಡೆದಂತಿರಲ್ಕೆಯ್ತಂದು ಧೀವರಂ ।
ಮರುದಿನದ ಹಿಪ್ಪಲಿಕೆಹೊತ್ತು ಹರಿಯದ ಮುನ್ನನಾ ಮರಕೆ ಬಳ್ಳಿವಿಡಿದು ॥
ಹರಿಸದಿಂ ಹತ್ತಿ ಬಲೆಯೊಳು ಬಿದ್ದ ಹಕ್ಕಿಗಳು ।
ಮರಣವಂ ದಿಟವಾಗಿ ಹಡೆದವೆಂದೇ ಬಗೆದು ।
ಪಿರಿದಾಗಿ ಮನನೊಂದು ತಾನೊಂದನೆಣಿಸಿದೊಡೆ ದೈವ ತಾನೊಂದೆಣಿಸಿತು ॥ ೨೭ ॥

ಈಯುಂಚೆಗಳನು ಹಿಡಿತಂದು ನಾನೊಬ್ಬೊಬ್ಬ ।
ರಾಯರಿಗೆ ಕೈಗಾಣಿಕೆಯನಿತ್ತು ವಿತ್ತದಾ- ।
ದಾಯಮಂ ಪಡೆವೆನೆಂದನುದಿನಂ ನಚ್ಚಿರ್ದ್ದ ಸಾಯುಕವೆ ಕೈಗೂಡಿತು ॥
ಆಯಿತಿಲ್ಲಾ ಎನ್ನ ಕಾರ್ಯ್ಯವೆಂದಂಚೆಯು ನಿ- ।
ಕಾಯವೆಲ್ಲವನು ಬಿಟ್ಟೋಡಾಡಲವು ತಮಗೆ ।
ದಾಯಮಾಯ್ತೆಂದುವಾ ನೆಲಕೆ ಬೀಳದ ಮುನ್ನ ದೆಸೆದೆಸೆಗೆ ಪೋದುವಾಗ ॥ ೩೮ ॥
ಈ ತೆರದ ಕಥೆಯುನಂಗಡಿಬೀದಿಯೊಳು ಜನವಿ- ।
ನೂತನೊರ್ವ್ವಂ ಪೇಳೆ ಕೇಳುತ್ತುಮಿರ್ದ್ದುದರಿ- ।
ನಾ ತಸ್ಕರರನರಸಿ ತಪ್ಪ್ದದಂ ಮರೆದೆನಾನಿಂದಿನೀ ಪಗಲೊಳೆಂಬ ॥
ಆ ತಳಾರನ ನುಡಿಯು ಕೇಳಿ ತಾನಿಂತೆಂದ- ।
ನೀತಂ ಮೊದಲ್ ನಷ್ಟಕಾರ್ಯ್ಯಾಭಿವಚನಮಂ ।
ಮಾತೇನು ಸೂಚಿಸಿದನೆಂದು ಬಗೆದಾತನಂ ಬೀಳ್ಕೊಟ್ಟು ಮನೆಗೆ ಬಂದು ॥ ೩೯ ॥
ಬರಿಸಿ ಮಂತ್ರಿಯನಾ ತಳಾರನುಸಿರಿದ ಕಥೆಯು ।
ನೊರೆಯುಲಿಂತೆಂದು ಬಿನ್ನವಿಸಿದಂ ವೊಳೆಯುಲ್ಲಿ ।
ಮುರುಟುವುದನದು ಬೆಳೆದ ಬಳಿಕ ಮುರುಟಲ್ ಬಹುದೆ ಏಕಾಕಿಯುಲ್ಲ ನಾನು ॥
ಪುರಮೆಲ್ಲ ನನ್ನ ಕೊಲೆಗಡಬಡದು ನಿನಗಿನ್ನು ।
ಪಿರಿದು ಕಕ್ಕಸಮೆಂದು ನುಡಿದ ಕಟಕಿಯದೈಸೆ ।
ಯರಸ ಕೇಳೆಂದು ಬಿನ್ನವಿಸಿ ಬೀಳ್ಕೊಂಡು ತನ್ನಾಲಯುಕವಂ ಪೋಗಲು ॥ ೪೦ ॥
ಮರುದಿನದ ಹರೆಯು ಹೊತ್ತರೊಳಗೋಲಗಕೆಯ್ದಿ ।
ಯರಗುಲಿನೃಪಾಲನಾ ಯಮದಂಡನಂ ಬರಿಸಿ ।
ಮರೆದೆಯಾ ಕಳ್ಳರಂ ತಹುದನೆನೆ ಬರಸಿಡಿಲ ದನಿಗೇಳ್ದ ಹಂಸೆಯುಂತೆ ॥
ನೆರೆ ಬೆದರಿ ನಾನೆಸಗಿದಾ ಸ್ವಾಮಿಕಾರ್ಯ್ಯಮದು ।
ಬರಿಯ ಬೂದಿಯ ಹೋಮವಾಯ್ತೆನುತ ಹಿರಿದಾಗಿ ।
ಮರುಗುತ್ತ ಮನದೊಳಗೆ ಎಲೆ ದೇವ ಎಂದಿಂತು ಮಾಡಿದಂ ಬಿನ್ನಪವನು ॥ ೪೧ ॥
ಕರಯುಗದೊಳೆರಡು ಕೈಮಣಿವಿಡಿದುಕೊಂಡು ಪುರ- ।
ವರದ ಬೀದಿಯೊಳೊರ್ವ್ವ ಕುಂಭಕಾರಂ ಕೆಮಳಿ ।
ಬರುತಿರಲ್ಕವನನಾ ಪುರಜನಂ ನೆರೆದರೆಲೆ ಕುಂಬಾರ ಮುನ್ನ ನೀನು ॥
ಸಿರಿವಂತನಾಗಿ ಬಲಯುತನಾಗಿ ಬಹುಜನದೊ- ।
ಳುರುಕೀರ್ತಿಯುತನಾಗಿ ಬಾಳುತಿರ್ದ್ದೀಗಳೀ ।
ಪರಿಯೊಳಗೆ ಬರ್ಪ್ಪ ಕಾರಣವನುಸಿರೆಂದೆನಲ್ ನುಡಿದನವನವರೊಳಿಂತು ॥ ೪೨ ॥
ಪಲಕಾಲದಿಂದ ನಾನೆಗೆವುದಕ್ಕೊಳಗಾಗಿ ।
ಯಲಸದತಿವಿನ್ನಾಣದಿಂ ಗೆಯ್ದ ಘಟವಾಗಿ ।
ಬೆಲೆವಡೆದು ಬಹಳವಸ್ತುವ ಗಳಿಸಿಕೊಟ್ಟು ಸಿರಿವಂತನಂ ಮಾಡಿ ಬಳಿಕಾ ॥

ಸಲಹುತ್ತುಮಿರ್ದೊಂದು ದಿವಸದೊಳು ತಾನಿರ್ಪ್ಪ ।
ನೆಲದ ಡೊಗರೊಳಗೆ ಹೊಕ್ಕಗೆಯುತ್ತುಮಿರೆ ಜರಿದು ।
ಬಲುಹೆಂಟೆಯಾಗಿ ಮೇಲಿಪ್ಪೆರೆಯ ಮಣ್ಣೆನ್ನ ಬೆನ್ನನೋವದೆ ಮುರಿದುದು ॥ ೪೩ ॥
ಪೊಲೆವಾಲೆ ನಂಜಾಗೆ ತಾಯೆ ರಕ್ಕಸಿಯಾಗೆ ।
ಸಲೆ ಕಾವ ಬೇಲಿಯೆದ್ದೆಳವೆಳೆಗಳಂ ಮೇಯೆ ।
ಸಲಹುವೊಡೆಯನೆಯಾಳ ತಲೆಗೊಳ್ವಡದನಾರು ಬಾರಿಪರಿಳಾತಳದೊಳು ॥
ಎಲೆ ಜನಮೆ ಅದರಂತೆ ನನ್ನನೀ ವಿಧಿಗೆಯ್ದು ।
ನೆಲದೆರೆಯ ಮಣ್ಣಿಂದಮುದ್ಯೋಗಮಿಲ್ಲದೀ ।
ಬಲುಬಡತನಂ ಬಂದಿತೆಂಬ ಕುಂಬರನ ನುಡಿಯುಂ ಕೇಳುತಿರ್ದನರಸಾ ॥ ೪೪ ॥
ಎನೆ ನಾಳಿನುದಯಕ್ಕೆ ಕಾಲತ್ರಿಕಂ ಮಾಡ- ।
ದಿನಿಸು ಬೇಗದಿ ಕಳ್ಳರಂ ತಂದು ಕೊಡುವುದೆನೆ ।
ಮನದೆಗೊಂಡಾತ ನುಡಿಗೆ ನೃಪತಿಯುಂ ಬೀಳ್ಕೊಂಡು ಮನೆಗೆ ಚಿಂತಿಸುತೆಯ್ದಲು ॥
ಅನಿತರೊಳಗಾ ದಿನಂ ಕಳೆಯಲುದಯದೊಳೆದ್ದು ।
ಘನಕುಪಿತಹೃದಯನಾಸ್ಥಾನಮಂಡಪಕೆಯ್ದಿ ।
ಜನವಿನುತ ಯಮದಂಡನಂ ಕರಸಿಯವನೊಳಿಂತೆಂದು ನಿರವಿಸಿದನಾಗ ॥ ೪೫ ॥
ತಂದೆಯಾ ತಸ್ಕರರನೆನೆ ಕೇಳುತೆದೆಹಾರು- ।
ತಂದು ವಿಜ್ಞಾಪನಂಗೆಯ್ದನಾನಾವ ತೆರ- ।
ದಿಂದವರನರಸಿ ಬರಲೆಂದು ಪುರಮಂ ಬಳಸಿ ಬರ್ಪಾಗಲೊಂದೆಡೆಯೊಳು ॥
ಗೊಂದಣಂಗೊಂಡು ಜನಗಳು ಕೇಳುವಂತೆ ಮನ ।
ಸಂದೊರ್ವನೊಂದು ಕಥೆಯುಂ ಪೇಳ್ದುದನು ಕೇಳಿ ।
ತಂದುದಿಲ್ಲೆನಲಾ ಕಥೆಯನೆಮಗೆ ಪೇಳೆನಲ್ಪೇಳ್ದನವನಿಂತುಟೆಂದು ॥ ೪೬ ॥
ಒಂದಡವಿಯೊಳಗೊಂದು ಹರಿಣಿ ತನ್ನಯ ಪರಿ- ।
ಸ್ಪಂದಸಹಿತೆಯ್ದುತಿರೆ ಪರಿವರಿಪ ಕಾಳ್ಕಿಚ್ಚು ।
ಮುಂದುಗಡೆ ಕಾಲ್ಕರಿಣಿ ಕಪ್ಪು ಬಲಗಡೆ ಬಿಟ್ಟ ಬೆಳ್ಬಾರ ಬಲೆಯೆಡಗಡೆ ॥
ಸಂದಣಿಸಿ ಬಿಲ್ಕೋಲ್ವಿಡಿದು ಬರ್ಪ ವನಚರರ್ ।
ಪಿಂದುಗಡೆ ಈ ಅನುವರವನು ಮಾಣಿಪರಿಲ್ಲ ।
ಹಿಂದಣಘವಶದ ಫಲವೈಸೆಯೆಂದೆಂಬ ಹುಲ್ಲೆಯ ಕಥೆಯ ಪೇಳ್ದನಾಗಾ ॥ ೪೭ ॥
ನೀತಿಯುಂ ತನಗೆ ಹುಲ್ಲೆಯ ಕಥೆಯ ನೆವದಿ ಮ- ।
ತ್ತಾ ತಳಾರಂ ತಿಳಿಯಬೇಕೆಂದು ಮಿಗೆ ಪೇಳ್ದ ।
ಮಾತು ಮನಮಂ ಪೊಕ್ಕುದಿಲ್ಲ ಕೃತಕೋದ್ರೇಕಮಾ ಮನದೊಳಾವರಿಸಲು ॥
ಓತೆರಡು ಕೂರಸಿಗಳೊಂದೊರೆಯ ಹೊಗದಂತೆ ।
ಭೂತಳಾಧೀಶನಿಂತೆಂದನಾ ಕಳ್ಳರಂ ।
ಮಾತೇನೊ ನಾಳೆ ತಂದೊಪ್ಪಿಸೆನಲಂತೆ ಮಾಡುವೆನೆಂದು ಬೀಳ್ಕೊಂಡನು ॥ ೪೮ ॥

ಬಳಿಕ ಬಲ್ಲಾಳಿಟ್ಟಗೊಂಡಂತೆ ಯಮದಂಡ- ।
ನುಳಿವು ತನಗಿನ್ನಿಲ್ಲ ಕಟಿಟ್ಟೊಡೆಯನೇ ಪಿರಿದು ।
ಮುಳಿದನೆನುತಿರಲು ಮರುದಿನದೊಳವನಂ ಕರಸಿ ಕಳ್ಳರಂ ತಪ್ಪರ್ದರ್ಕೈ ॥
ಅಳುಗಜಗುಳಂ ಮಾಡಿಕೊಂಡೆಯಲ್ಲಾ ಎನಲ್ ।
ಪೊಳಲ ಮಧ್ಯದೊಳೊರ್ವನೊಂದು ಕಥೆಯುಂ ಪೇಳ- ।
ಲೆಳಸಿ ಕೇಳುತ್ತಿರ್ದ್ದನೆನಲದಂ ಪೇಳೆನಲ್ ಪೇಳ್ದನವನೀಶಗಿಂತು ॥ ೪೯ ॥
ಪರಿರಂಜಿಸುತ್ತಿರ್ಪ ಪಾಂಚಾಳದೇಶದೊಳ್ ।
ವರಶಕ್ತಿನಗರಮುಂಟೆಂಬುದಂತದನಾಳ್ವ ।
ಪರಮಧಾರ್ಮಿಕನು ಜೈನಮತಾನುಸಾರಿ ಸದ್ಗುಣಯುತ ಸುಧರ್ಮನೆಂಬ ॥
ಅರಸು ಜಿನದತ್ತೆಯೆಂದೆಂಬ ಸತಿಗೂಡಿ ಸು- ।
ಸ್ಥಿರನಾಗಿ ಭೂಭಾರಮಂ ನಿಜಭುಜದೊಳಾಂತು ।
ಸುರಪತಿಸಮಾನವೈಭವದಿಂದ ಸುಖಸಂಕಥಾವಿನೋದದೊಳಿರ್ಪನು ॥ ೫೦ ॥
ಪರಮಂಡಲವನು ಸಾಧಿಸುವೆನೆಂಬೊಂದಿಚ್ಛೆ ।
ಪಿರಿದಾಗಿ ಪುಟ್ಟಲುತ್ತಮಲಗ್ನದೊಳ್ಪರಮ- ।
ನಿರದೆ ಪೊರಮಟ್ಟು ದಂಡೆತ್ತಿ ನಡೆದಂಗಕಾಶ್ಮೀರಘೂರ್ಜರಕೇರಳ ॥
ವರಕೋಸಲಾದಿ ಛಪ್ಪನ್ನದೇಶದ ಮಹೀ- ।
ವರರನೆಲ್ಲರನು ಕಾಣಿಸಿ ಕಪ್ಪಮಂ ಕೊಂಡು ।
ಹರಿಸದಿಂ ಮಗುಳ್ದು ಮಹದೈಶ್ವರ್ಯಯುತನಾಗಿ ನಗರಿಯಂ ಪುಗುವಾಗಳು ॥ ೫೧ ॥
ಘೋಳಿಡುತ ಬಿಟ್ಟು ಬಿಳ್ವಂತೆ ನಗರಿಯ ಕೋಂಟೆ ।
ಬೀಳಲದ ಕಂಡು ಶಕುನಿಗರೆಂದರೆಲೆ ಮಹೀ- ।
ಪಾಲಕಾ ಅದ್ಭುತದ ಶಕುನಮಂ ನೋಡಿ ನೀಂ ನಗರಿಯಂ ಪುಗಲು ಬೇಡಾ ॥
ನಾಳಿನುದಯಕ್ಕೆ ಕೋಂಟೆಯನಿಕ್ಕಿಸಿದ ಬಳಿಕ ।
ಪಾಳೆಯಂ ಸಹಿತ ಬಿಜಯಂಗೆಯ್ವುದೆಂಬ ನುಡಿ- ।
ಗೇಳಿಯಂತೆಯೆ ಗೆಯ್ವೆನೆಂದು ತಡಗೆಯ್ದು ಮರುದಿನದೊಳತಿರಚನೆಯಿಂದ ॥ ೫೨ ॥
ಚೆನ್ನಾಗಿ ಕೋಂಟೆಯಂ ಹಸಗೆಯ್ಸಿ ಪುಗುವಾಗ ।
ಮುನ್ನಿನಂದದಿ ಮೂರು ದಿನ ಬೀಳೆ ಕಾಣುತತಿ ।
ಖಿನ್ನಮಾನಸನಾಗಿ ಬಿರುಮಳೆಯೆ ಹತ್ತಿದಂದದಿನಾ ಮಹೀಪಾಲನು ॥
ತನ್ನ ಜಯದೇವನೆಂದೆಂಬ ಮಂತ್ರಿಯ ಕರಸಿ ।
ಯಿನ್ನಿದಕ್ಕಾವುದೊ ಉಪಾಯಮೆನೆ ಚಾರ್ವಾಕ- ।
ಮನ್ನೆಮ್ಮಿದವನಾಗಿಯರಸನೊಡನವನಿಂತು ಬಿನ್ನಪಂಗೆಯ್ದನಾಗ ॥ ೫೩ ॥
ನರಬಲಿಯನಿತ್ತ ಬಳಿಕಾ ಬಿಸಿಯ ನೆತ್ತರಂ ।
ಪೊರೆದ ಮಣ್ಣಿಂದಲ್ಲದೀ ಕೋಂಟೆ ನಿಲ್ಲದೆನೆ ।
ಕರುಣಾರ್ದ್ರಹೃದಯನಾ ನುಡಿಗೇಳಿ ಕಿವಿಮುಚ್ಚಿಯಿಂತಪ್ಪ ಹಿಂಸೆಯಿಂದ ॥

ಸಿರಿಹಾರಿಯಾಯುಷ್ಯವಡಗಿ ಸದ್ಗತಿ ಕೆಟ್ಟು ।
ನರಕದೊಳ್ ಜನಿಸಿ ಕೋಟಲೆಬಡುವುದದರಿಂದ ।
ವರಮಂತ್ರಿ ಕೇಳಿದಕ್ಕಾನೊಡಂಬಡುವುದಿಲ್ಲೆನಲು ಜಯದೇವಮಂತ್ರಿ ॥ ೫೪ ॥
ಎಲ್ಲಿಯದು ಪಾಪಮೆಲ್ಲಿಯದು ಪುಣ್ಯಂ ಸ್ವರ್ಗ- ।
ಮೆಲ್ಲಿಯದು ನರಕಮೆಲ್ಲಿಯದು ಜೀವನವು ತಾ- ।
ನೆಲ್ಲಿಯದು ನೋಡೆ ಭೌತಿಕಯೋಗದಿಂದಾದ ದೇಹಕ್ಕೆ ಮರುಜನ್ಮವು ॥
ಎಲ್ಲಿಯದಿದೆಂದು ಬಗೆಯೊಳಗೆ ಬಗೆಯದೆ ಬರಿದೆ ।
ಗೊಲ್ಲಸಂಗೊಂಡು ದೇಹವನು ದಂಡಿಪುದು ಜಗ- ।
ಮೆಲ್ಲಮೆನಲಾ ನುಡಿಯ ಕೇಳಿ ಮತ್ತಾ ನೃಪತಿಯಿಂತೆಂದು ನುಡಿದನಾಗ ॥ ೫೫ ॥
ಪಾಪಮುಂ ಪುಣ್ಯಮಿಲ್ಲದೊಡೆ ಭೃತ್ಯರ್ಕೆಲರ್ ।
ಭೂಪತಿಗಳುಂ ಕೆಲಬರಾಗಿ ಪುಟ್ಟಲದೇಕೆ ।
ಆಪತ್ತುಸುಖಮದೇತಕ್ಕೆ ಮರುಜನ್ಮಮಿಲ್ಲದೊಡೆ ಸತ್ತಾ ಗ್ರಹಗಳಾ ॥
ರೂಪಾಗಿ ಮುನ್ನೆನ್ನ ಕೊಂದೆಯಲ್ಲಾ ಎನುತ ।
ಕೋಪದಿಂ ಬಂದು ಪಗೆವರ ಕಾಡುತಿರಲೇಕೆ ।
ಈ ಪರಿಯನರಿದಿರ್ದು ಚಾರ್ವಾಕಮಂ ನಂಬಿ ಹಿಂಸೆಯುಂ ಮಾಡಬಹುದೇ ॥ ೫೬ ॥
ವರಸುಜನರೆಂಬ ನುಡಿಗುತ್ತರಮನರಿಯದೇ ।
ಪುರಜನವ ಬರಿಸಿಯವರುಂ ತಾನುಮಿಂತೆಂದ- ।
ರರಸ ನೀವೆಸಗಿಸಲ್ವೇಡ ನಾವೇ ಮಾಳ್ಪೆವೆನೆ ಕೇಳುತಿಂತೆಂದನು ॥
ನಿರುತದಿಂ ಪ್ರಜೆ ಮಾಡಿದಾ ಪುಣ್ಯಪಾಪಫಲ- ।
ಮಿರದಹುದು ಷಡ್ಭಾಗದೊಳಗೊಂದು ಭಾಗಮಾ ।
ನರಪಾಲಕರ್ಗೆಂಬ ನಾಣ್ಣುಡಿಯನರಿದಿರ್ದ್ದವೊಡಬಡುವುದಿಲ್ಲವೆನಲು ॥ ೫೭ ॥
ಅರಸೊಬ್ಬನಲ್ಲದಾ ಊರೊಳಿರ್ಪವರೆಲ್ಲ ।
ನೆರೆದಿಂತು ತಮ್ಮೊಳಾಲೋಚನೆಯ ಮಾಡಿದರ್ ।
ಪುರದ ಕೋಂಟೆಗೆ ಬಲಿಯ ಕೊಡದೊಡರಸಗೆ ಕೇಡು ಮುಂದಕ್ಕೆ ತಪ್ಪದಹುದು ॥
ಅರಸು ಕೆಟ್ಟೊಡೆ ಕೇಡು ನಮಗೆಯದರಿಂದಮಿ ।
ಯರಸನಂ ಮೀರೆ ರಾಜದ್ರೋಹಮಿಲ್ಲೆಂದು ।
ಪಿರಿದಾಗಿ ನಿಶ್ಚಯಿಸಿ ತತ್ಪುರದೊಳಾ ನೃಪತಿಯಲ್ಲಿಗಾರ್ಪೋಗದಂತೆ ॥ ೫೮ ॥
ಮೊರೆದೆದ್ದು ಸಕಲ ರಾಣುವೆಯೊಂದು ಹುರಿಯಾಗಿ ।
ಪುರವರದೊಳೆತ್ತಿ ಹದಿಕೆಯನು ತನ್ನಿತ್ತದಿಂ ।
ನರರೂಪನೊಂದನನುಗೆಯ್ಸಿ ಮಣಿದೊಡವಿಟ್ಟ ಬಳಿಕೊಂದು ರಥದ ಮೇಲೆ ॥
ಇರಿಸಿ ಕೆಲದೊಳಗೊಂದು ಲಕ್ಕ ಪೊನ್ನಂ ಸುರಿದು ।
ಪುರದ ಬೀದಿಯೊಳದಂ ನಡೆಯಿಸುತ್ತಿಂತೆಂದು ।
ಪರಿದು ಸಾರಿಸಿದರೀ ಪೊನ್ನ ಪುತ್ಥಳಿಯನೀ ಪೊನ್ನ ರಾಸಿಯನೆ ಕೊಂಡು ॥ ೫೯ ॥

ಹಡೆದ ಮಗನಂ ಕೊಟ್ಟು ವಿಷಮನಾತನ ಜನನಿ ।
ಕುಡಿಯೆಂದು ಕೂರಸಿಯನಾ ತಂದೆ ಹಿಡಿದವನ ।
ಕಡಿದು ನರಬಲಿಯನೀ ಕೋಂಟೆಗೆ ಕೊಡುವರುಂಟೆ ಎಂದು ಡಂಗುರವ ಹೊಯ್ಸಿ ॥
ಪೊಡವಿಯೊಳಗಿಂತಪ್ಪ ಘಾತಮಂ ಮಾಡುವುದ- ।
ಕೊಡಬಡುವ ಪಾತಕಿಗಳುಂಟೆ ಎನುತೆಲ್ಲರೆಡೆ- ।
ವಿಡದೆ ಕಿವಿಯಂ ಮುಚ್ಚುತಿರಲದಂ ಕೇಳಿ ಬಳಿಕದರೊಳತಿದಾರಿದ್ರನು ॥ ೬೦ ॥
ವರದತ್ತನೆಂಬ ಪಾರ್ವ್ವಂ ತನ್ನ ನಿಜಸುದತಿ ।
ವರದತ್ತೆಯೆಂಬಳೊಳಗಿಂತೆಂದು ನುಡಿದನೀ ।
ಪುರದೊಳುಳ್ಳಷ್ಟಾದಶಪ್ರಜೆಯು ಬಡವರೊಳ್ನಾಡೆ ನಾನೇ ಬಡವನು ॥
ತಿರಿದಾವ ತೆರದಿ ಹೊಟ್ಟೆಯ ಹೊರೆವುದಕ್ಕೆ ನಾ- ।
ವೆರಡೆಯೊಡಲಲ್ಲ ಕಿರುಮಕ್ಕಳಿವರೆಣ್ಬರೀ ।
ಪರಿಯಾದ ಬಹುಕುಟುಂಬವ ಪೊರೆವುದಕ್ಕಾವ ತೆರನೆಂದು ನುಡಿದನಾಗ ॥ ೬೧ ॥
ಸಿರಿಯುಳ್ಳವನೆ ಶೀಲನಿಧಿ ಸುಗುಣಿ ಸುವಿವೇಕಿ- ।
ಯುರುಪುಣ್ಯವಂತನಭಿಮಾನಿಯುತ್ತಮಗುಣಾ- ।
ಭರಣನತಿಬುದ್ಧಿವಂತಂ ಗುರುವನೇಕವಾಕ್ಯಪ್ರತಿಷ್ಠಾಚಾರ್ಯನು ॥
ಸಿರಿಯಿಲ್ಲದವನು ಕುಲಹೀನನವಿವೇಕಿ ದು- ।
ಶ್ಚರಿತನಾರಡೆಕಾರ ಭೂಭಾರಕಂ ಪಿಸುಣ- ।
ನುರುತರದ್ರೋಹಿಯನ್ನೆಯಕಾರನೆಂದು ನೆಲನೆಲ್ಲ ನುಡಿಯುತ್ತುಮಿಹುದು ॥ ೬೨ ॥
ಹೊತ್ತುಗಳೆವನ್ನೆವರವಿೀ ಪುರದ ಕೇರಿಯೊಳ್ ।
ಸುತ್ತಿ ಮುಷ್ಟಿಯ ಬೇಡಿ ತಂದಕ್ಕಿಯಡುಗೆಯೊಂ- ।
ಬತ್ತೊಡಲಿಗರ್ಧವರಿಗುಂಟರ್ಧವರಿಗಿಲ್ಲವೊಡಲಾರಿ ನವೆದು ಬಳಿಕ ॥
ಸತ್ತು ಸುಡುಸುಣ್ಣವಪ್ಪುದರಿಂದವಿೀ ತಂದ ।
ವಿತ್ತಮಂ ಕೊಂಡು ನಮ್ಮಾ ಕಿರಿಯ ಮಗನಿಂದ್ರ- ।
ದತ್ತನಂ ಕೊಟ್ಟು ನಾವೆಲ್ಲರುಂ ಬದುಕುವುದುಪಾಯಮೆಂದಾ ಪಾರ್ವ್ವನು ॥ ೬೩ ॥
ಆ ಸತಿಯನೊಡಬಡಿಸಿ ಪರಿದು ಬೀದಿಗೆ ಬಂದು ।
ಘೋಷಣೆಯ ನಿಲಿಸಿಯಾ ಬೊಂಬೆಯಾ ಹೊನ್ನ ಬಲು ।
ರಾಶಿಯಂ ಕೊಂಡು ಕೊಕ್ಕರಿಸದೇ ತನುಜನಂ ಕೊಟ್ಟು ಶಕಟಮನೇರಿಸಿ ॥
ಓಸರಿಸದಾ ತಾಯಿ ವಿಷಮನಾ ನಿಜಜನಕ- ।
ನಾ ಸುರಗಿವಿಡಿದು ಬಂಡಿಯ ಬಳಿಯೊಳೆಯ್ದುತಿರೆ ।
ದೇಶಮೆಲ್ಲಾ ವಿಸ್ಮಯವನು ನೋಡುವೆನೆಂದು ಜನಜಾತ್ರೆಯಾದುದಾಗ ॥ ೬೪ ॥
ಹಡೆದ ಮಗನಂ ಪೆತ್ತ ತಂದೆತಾಯ್ಗಳು ಮರುಕ- ।
ವಡೆಯದರ್ಥವ ಬಯಸಿ ಕಯ್ಯಾರೆ ತಲೆಯ ಹರಿ- ।
ಗಡಿದು ಕೋಂಟೆಗೆ ಬಲಿಯ ಕೊಡುವರಗುಲಿಯನು ಬಿಡಿಸುವೆನೆಂದು ಭೂಪಾಲನು ॥

ನಡೆದು ಕೋಂಟೆಯ ಮುಂದೆ ಕುಳ್ಳಿರ್ದ್ದ ಕಡುಹರಿಸ ।
ವಡೆದು ಹೃದಯದೊಳಿನಿಸು ದಬ್ಬುದಲೆಯಿಲ್ಲದೇ ।
ನುಡಿಯುತೊಳ್ನುಡಿಯು ನಸುನಗೆಯಿಡುವ ಮಾಣವಕನಂ ಕಂಡು ತಾಂ ನುಡಿದನಿಂತು॥೬೫॥
ಈಗಳೊಂದಿನಿಸು ಹೊತ್ತಿಗೆ ಹರಕೆದೆಗೆದ ಕುರಿ- ।
ಯಾಗಿ ಕೊರಲಂ ಕೊಯ್ಸಿಕೊಂಡು ಭೂತಕ್ಕೆ ಬಲಿ- ।
ಯಾಗುತಿದೆಯೆನ್ನ ಮೆಯ್ಯೆಂಬುದೊಂದೆದೆ ಹಾರುತನದ ಸಂಕಟವ ಮರೆತು ॥
ಬೇಗೆಯಿಂ ಕಾದುಕ್ಕುವುದಕದೊಳ್ಕಮಲವಲ ।
ರಾಗುವಂದದೊಳು ನಗೆಮೊಗವೇಕೆನಲ್ ಸಾನು ।
ರಾಗದಿಂದಾ ಮಹೀಪಾಲಕನ ಕೂಡೆಯವನಿಂತೆಂದು ನುಡಿದನಾಗ ॥ ೬೬ ॥
ಜನಪ ಕೇಳ್ ಜನನಿ ಮುನಿದೊಡೆ ಜನಕನೇ ಶರಣು ।
ಜನಕ ಮುನಿದೊಡೆ ಜನನಿಯೇ ಶರಣು ಪರಿಜನಂ ।
ಮುನಿಯೆ ಜನಪಾಲಕನೆ ಶರಣು ಜನನಾಥ ಮುನಿಯಲ್ಕೆ ಪರಿವಾರ ಶರಣು ॥
ಜನನಿ ಜನಕಂ ಪರಿಜನಂ ಭೂಮಿಪಾಲಕರು ।
ಮುನಿಯೆ ದೈವವೆ ಶರಣು ತದ್ದೈವಮುಂ ಮುನಿಯೆ ।
ನನಗಿನ್ನದಾರು ಶರಣೆಂಬ ಬಿಸವಂದಮಂ ಕಂಡಿಂತು ಚಿಂತಿಸುವೆನು ॥ ೬೭ ॥
ಎಂದು ಪರಮಾರ್ಥವನೆ ನುಡಿವ ಭೂಸುರಸುತನ- ।
ದೊಂದು ಧೈರ್ಯವ ಕಂಡು ನಗರದೇವತೆಗಳೆ- ।
ಯ್ತಂದು ಕಡುಬೆಚ್ಚಿಯಾ ಕೋಂಟೆಯುಂ ನಿರ್ಮಿಸಿ ಬಳಿಕ್ಕೆ ಪೂಮಳೆಯ ಕರೆದು ॥
ಅಂದವನನೊಸೆದು ನವರತ್ನಭೂಷಣವಸ್ತ್ರ- ।
ದಿಂದ ಪೂಜಿಸಿ ಲೋಕದೊಳಗೆ ನೀನಲ್ಲದೇ ।
ಸಂದ ಸಾಹಸಿಗರಾರೆಂದು ಬಾಯೆತ್ತಿ ಜಗವರಿವಂತೆ ಪೊಗಳ್ದುವಾಗ ॥ ೬೮ ॥
ಎಂದೆಂಬ ಕಥೆಗೇಳುತಿರ್ದ್ದನದುಕಾರಣದಿ ।
ತಂದುದಿಲ್ಲಾ ಚೋರರಂ ನೃಪತಿ ಕೇಳೆನಲ್ ।
ಮಂದಮತಿಯಾ ಸುಯೋಧನನೃಪಂ ಕಗ್ಗಲ್ಲ ಜೀಟೆಯುಂದದಿ ಮುನಿಸನು ॥
ಒಂದಿನಿಸು ಮುಚ್ಚದಾ ಕಳ್ಳರಂ ನಾಳೆ ನೀಂ ।
ತಂದೊಪ್ಪಿಸೆಂದು ಯಮದಂಡನಂ ತನ್ನ ನಿಜ ।
ಮಂದಿರಕೆ ಕಳುಹಿ ಬಳಿಕಾ ರಾತ್ರಿಯಂ ಕಳೆದು ಮರುದಿನದೊಳವನ ಕರಸಿ ॥ ೬೯ ॥
ಕಳವು ಸಹಿತಾ ಕಳ್ಳರಂ ಬೇಗ ತರ್ಪ್ಪೆನೆಂ- ।
ದಳುಕದೇ ಸಾಮಮುಂ ಮಾಡಿದೆಯಲಾ ನಮಗೆ ।
ಇಳೆಯಾದಿನಾಥತ್ವಮಿಲ್ಲೆಂದು ಮಿಗೆ ಕೀರಿ ನುಡಿದ ಜನತಾಧಿಪತಿಗೆ ॥
ತುಳಿಲಾಳು ಯಮದಂಡನಿಂತೆಂದನಾ ತುಂಬು- ।
ವೊಳೆಗೆ ಇದಿರಾಗಿ ಈಸುವರುಂಟೆ ನಿನ್ನಾಜ್ಞೆ- ।
ಗಳಿಮನಸುಮಾಡಿ ನಾನಿನ್ನಾರ ಮರೆಹೊಗುವೆನೆಂದು ಮತ್ತಿಂತೆಂದನು ॥ ೭೦ ॥

ಜಿನ್ನಪ ಮಹೀಪಾಲ ನಾನೀ ನಗರಿಯೊಳಗೆ ।
ಕನ್ನಗಳ್ಳರನರಸಿ ಕೇರಿಕೇರಿಯೊಳೆಯ್ದು ।
ವನ್ನೆವರವೊಂದಂಗಡಿಯ ಮುಂದೆ ನೆರೆದ ಪುರಜನವೆಲ್ಲ ಕೇಳುವಂತೆ ॥
ಬಿನ್ನಣದಿನೊರ್ವನೊಂದಾನೊಂದು ಕಥೆವೇಳೆ ।
ಚೆನ್ನಾಗಿ ಕೇಳುತಿರಲದುಕಾರಣದಿ ಕಳ್ಳ ।
ರನ್ನಾನು ತಪ್ಪದಂ ಮರೆದೆನೆನಲಾ ಕಥೆಯನುಸಿರೆನಲ್ಪೇಳ್ದನಿಂತು ॥ ೭೧ ॥
ಮಾನಿತಂಬಡೆದವಂತೀವಿಷಯದಲ್ಲಿ ಉ- ।
ಜ್ಜೈನಿಯೆಂದೆಂಬ ಪೊಳಲೊಳ್ ಯಶೋಭದ್ರನೆಂ- ।
ಬಾ ನಾಮವಡೆದ ವೈಶ್ಯಂ ಸುಖದಿನಿರ್ದೊಂದು ದಿನ ಪರದುಗೆಯ್ವೆನೆಂದು ॥
ಸಾನಂದದಿಂ ತನ್ನ ತಾಯ ಕರೆದೆಲೆ ಜನನಿ ।
ಈ ನಿನ್ನ ಸೊಸೆವಿರಂ ನೆರೆ ರಕ್ಷಿಸೆಂದೆನುತ ।
ನೂನಶುಭಲಗ್ನದೊಳ್ ಪೊರಮಟ್ಟು ಪೊರವೊಳಲ ಬನದಲ್ಲಿ ಬಿಟ್ಟು ಬಳಿಕ ॥ ೭೨ ॥
ಮನೆಯೊಳ್ಮರೆದಲ್ಮರೆದು ಬಂದುಂಗುರವನಿರುಳು ।
ನೆನೆದೊರ್ವನೇ ಬಿಟ್ಟ ಬೀಡಿನಿಂ ಪುರಕೆಯ್ದಿ ।
ಮನೆಯ ಬಾಗಿಲ್ಗೆ ಬಂದಾದ್ವಾರಬಂಧಮಿಕ್ಕಿರ್ದುದನೆ ಕಂಡು ಬಳಿಕ ॥
ಜನನಿ ಜನನೀ ಕದವ ತೆಗೆಯೆಂದು ಕೂಗಿ ಕರೆ- ।
ವನಿತರೊಳಗವಳೊರ್ವ ಪಾಣ್ಬನೊಡಗೂಡಿಯಾ ।
ಮನೆಯಂಗಣದೊಳು ಬೆಳೆದವುಡಲದ ಕಾಪಿನೊಳ್ ತಾಂ ಕ್ರೀಡಿಸುತ್ತುಮಿರ್ದ ॥ ೭೩ ॥
ಮುಗಿಲ ದನಿಯುಂ ಕೇಳ್ದ ಮುದಿಹಂಸೆಯಂತೆಯಾ ।
ಮಗನ ದನಿಯುಂ ಕೇಳಿ ಕೈಯ ನೆಟ್ಟೆಯ ಮುರಿದು ।
ಮಿಗೆ ಬೆದರುತೇವೆನೆಂದೆನುತ ಪಾಣ್ಬನನೊಂದು ಗೊಂದಿಯೊಳಗಿರಿಸಿ ಬಳಿಕ ॥
ತೆಗೆಯಲಾ ಕದವನೊಳಹೊಕ್ಕು ಬೆದರುವ ತಾಯ ।
ಮೊಗ ನೋಡಿ ಸಂದೇಹಮಂ ಮಾಡಿಯಂಗಣವ ।
ಹೊಗುವಾಗಲಾ ಮರದ ಮೇಲಿರ್ದ ಹಚ್ಚಡವನೀಕ್ಷಿಸುತ್ತಿಂತೆಂದನು ॥ ೭೪ ॥
ಮನೆಯ ಬಾಗಿಲ ಬೀಯಗದ ಕಾಪನೆಲ್ಲಮಂ ।
ಜನನಿ ಜತನಂಮಾಡಿಕೊಂಡಿರಲ್ವೇಳಿ ನಾಂ ।
ಮನನಿರ್ಮಳದಿ ಪರದುಗೆಯ್ಯೆ ಪರದೇಶಕ್ಕೆ ಪೋಪುದಿದು ಹಸನಾದುದು ॥
ಜನಪನಾರಡಿಯನಾನೆಯದೊಂದು ತೊಂಡ ಗುರು- ।
ವಿನ ದುರಾಚಾರಮಂ ಮಾಣಿಸಲ್ಬಲ್ಲರೇ ।
ಮನೆಯೊಡತಿ ಕಳಕಳವ ಮಾಣಿಸಲ್ಬಪ್ಪದೇ ಎಂದೆಣಿಸುತಿರ್ಪ್ಪಾಗಳು ॥ ೭೫ ॥
ಮುಂದೊಂದು ಮುದಿಸೊಣಗನಾ ಮುಗ್ಗಿದೊಡೆ ಬದುಕ- ।
ದಂದದ ಬಡವು ಹುಳಿತ ಹುಣ್ಣಾವರಿಸಿದಂಗ- ।
ವೊಂದು ಕಣ್ಣೊಂದು ಕಾಲ್ಕುಂಟು ಹರಿಗಿವಿ ಮೊಂಡುಬಾಲ ಕೊರಲೊಳ್ ಸಿಕ್ಕಿದ ॥

ಒಂದು ಬಾಯೊಡದುದಂ ನೋಡದೇ ತನ್ನ ಮುಂ- ।
ದೊಂದು ಸುನಿ ಸುಳಿಯೆ ಕಾಮಾತುರದಿ ತಾನದರ ।
ಪಿಂದೆ ಪೋಗಲ್ಕಂಡು ಮನಸಿಜನ ಗೊಡ್ಡಾಟವಲ್ಲಾ ಎನುತ ಪೋದನಾಗ ॥ ೭೬ ॥
ಎಂದುಸಿರ್ವ ಕಥೆಯ ಕೇಳುತ ಕಳ್ಳರಂ ತಹುದ- ।
ನಿಂದು ನಾ ಮರೆವೆನೆನಲಾ ನಾಳಿನುದಯಕ್ಕೆ ನೀಂ ।
ತಂದೀವುದೆಂದು ಬೀಳ್ಕೊಟ್ಟು ಮನೆಗೆಯ್ದಿಯಾರಾತ್ರೆಯುಂ ಕಳಿದುಬಳಿಕಾ ॥
ಬಂದು ಮರುವಗಲುದಯದಲ್ಲಿ ಯಮದಂಡನಂ ।
ಮುಂದೇತರಕ್ರೋಧದಿಂ ಕರಸಿ ಕಳ್ಳರಂ ।
ತಂದೆಯಾ ಎಂದು ಕೇಳಲ್ಕವಂ ಕರಯುಗಳವಂ ಮುಗಿಯುತಿಂತೆಂದನು ॥ ೭೭ ॥
ಅರಸ ಕೇಳೆಂದಿನಂದದಿನೊಂದು ಕಥೆಯನಾ- ।
ದರದಿನೀ ನಗರಿಯೊಳ್ಕೇಳ್ವ ಕಾರಣದಿ ತ- ।
ಸ್ಕರರನರಸುವುದುಳಿಯಿತೆನಲು ನೀಂ ಕೇಳ್ದ ಕಥೆಯುಂ ಪೇಳೆನಲ್ಕೆಂದನು ॥
ಪಿರಿದು ರಂಜನೆವಡೆದ ಪಾಟಲೀಪುತ್ರಪುರ- ।
ವರದೊಳ್‌ಸುಭದ್ರನೆಂದೆಂಬ ಭೂಪಾಲಕಂ ।
ಹರಿಸದಿಂದೊಂದುದಿನದುದಯದೊಳು ತತ್ಪುರದ ನಂದನಕೆ ಪೋಗಲಾಗ ॥ ೭೮ ॥
ವನಪಾಲಕಂ ಕಂಡು ಕರಯುಗಳಮಂ ಮುಗಿದು ।
ಮನುಜೇಶ ಕೇಳು ನಿನ್ನೀ ನಂದನದೊಳು ಬೆಳೆ- ।
ದಿನಿಮಾವುನೇರಿಲೆಳನೀರ್ನಿಂಬೆಖರ್ಜೂರಕದಳಿದಾಡಿಮಮಾದಲಾ ॥
ಪನಸಫಲಗಳನೆಲ್ಲವಂ ತಾಳಭೂರುಹದ ।
ಕೊನೆಯ ಕಳ್ಳಂ ಕುಡಿದು ಕಡುಸೊಕ್ಕಿನಿಂ ಬಾಲ- ।
ವನಚರವಿತಾನಮೆಲ್ಲಂ ತಿಂದು ಕೆಡಿಸುತಿವೆಯೆಂಬ ವಾತಂ ಕೇಳ್ದನು ॥ ೭೯ ॥
ಮನೆಯೊಳಗೆ ಕಟ್ಟಿರ್ದುದೊಂದು ಮುದಿಗೋಡನಂ ।
ಬನಕೆ ಪಿಡಿತರಿಸಿ ಎಲವೋ ವೃದ್ಧಬಲಿಮುಖಾ ।
ಬನವನರೆಮಾಡುವೀ ದುಷ್ಟಮರ್ಕಟತತಿಗೆ ಬುದ್ಧಿಯುಂ ಹೇಳಿಕೊಂಡು ॥
ಬನಕೊಡೆಯನಾಗಿ ರಕ್ಷಿಸಿಕೊಂಡಿರೆಂದದಂ ।
ಬನದೊಳಗೆ ಬಿಡಲವೆಲ್ಲವು ಕೂಡಿಕೊಂಡು ತ- ।
ದ್ವನಮನೆಲ್ಲವನು ಲಯಮಾಡಲಾ ವನಪಾಲಕನಿಂತೆಂದು ನುಡಿದನಾಗ ॥ ೮೦ ॥
ಅವಿವೇಕಮನೃತಮತ್ಯಂತಾಗ್ರಹಂ ಕುಹಕ- ।
ಮವಿಚಾರಮಪ್ರಬುದ್ಧಿಕೆಯನ್ನೆಯಂ :
ಕುಟಿಲಮವಿನೀತಮತಿಮೂರ್ಖತನಮೆಂಬಿವುರ್ವೀಶ್ವರರ್ಗೆ ಸಂಜನಿತಮಾಗೆ ॥
ಅವನಿಯೊಳಗಾರ್ಬದುಂಕುವರೆಂದು ಚಿಂತಿಸು- ।
ತ್ತವನು ಪೋಗುತ್ತಿರ್ದನೆಂಬ ಕಥೆಯುಂ ಕೇಳಿ ।
ಯವನಿಪತಿಯಾ ಕಳ್ಳರಂ ತಹುದ ಮರೆದೆನೆನೆ ಮನೆಗೆ ಬೀಳ್ಕೊಟ್ಟನಾಗ ॥ ೮೧ ॥

ಬಳಿಕುದಯುಮಾಗಲೊಡನೋಲಗಕ್ಕೆಯ್ತಂದು ।
ತಳುವದವನಂ ಕರಸಿ ಎಲವೊ ಯಮದಂಡ ನೀ ।
ಕಳವುಸಹಿತಾ ಕಳ್ಳರಂ ತಂದುಕೊಡುವೆನೆಂದೆಮ್ಮೊಳಗೆ ಹುಸಿವಮಾತಸು ॥
ಗಳಪಿದೆಯುಲಾ ಎನಲ್ಕೆಂದನೆಲೆ ದೇವ ನಿ- ।
ನ್ನೊಳಗೆ ಹುಸಿವೊಡೆ ನನಗೆ ತಲೆಯೆರಡೆ ನಾಂ ನಮ್ಮ ।
ಪೊಳಲಂಗಡಿಯೊಳೊಂದು ಕಥೆಯನೊರ್ವ್ವಂ ಪೇಳುತಿರ್ದ್ದನದು ಕಾರಣದೊಳು ॥ ೮೨ ॥
ಅರಸ ಕೇಳ್ತಂದುದಿಲ್ಲೆನೆ ತತ್ಕಥೆಯನು ಬಿ- ।
ತ್ತರಿಸಿ ಪೇಳೆನಲೆಂದನಾ ತಳಾರಂ ಮಹೀ- ।
ವರನೆ ಚಿತ್ತೈಸು ಪಾಟಲಿಯೆಂಬ ನಗರಿಯೊಳು ವಸುಪಾಲನೆಂಬ ನೃಪತಿ ॥
ವರಸಚಿವ ಭಾರತೀಭೂಷಣಂ ಕೂಡಿ ಸು- ।
ಸ್ಥಿರನಾಗಿಯರಸುಗೆಯ್ಯುತ್ತಿರ್ದ್ದಿರ್ಪ್ಪವೊಂದು ಪಗ- ।
ಲುರುಮುದದಿ ತಾಮಿರ್ವ್ವರುಂ ಕವಿಗಳಾದಕಾರಣದಿನಾ ಭೂಪಾಲನು ॥ ೮೩ ॥
ಮುದದಿಂದ ತಾನೊಂದು ಕೃತಿಬಂಧಮಾಡ- ।
ಲದನು ತದ್ಭಾರತೀಭೂಷಣಂ ದೇವಕೇ- ।
ಳಿದರೊಳಗೆ ತಪ್ಪುಂಟೆನುತ್ತದಂ ತೋರಲಂತದಂ ಕೇಳಿ ಭೂಪಾಲನು ॥
ಒದವಿದ ದುರಾಗ್ರಹದಿನೀ ಸಚಿವನೆನ್ನಿಂದ ।
ಚದುರನಾದನಲಾ ಎನುತ್ತ ಕಡುಮಚ್ಚರದಿ- ।
ನಿದರೊಳಗೆ ತಪ್ಪುಂಟೆನಲ್ಬಹುದೆಯೆಂದವನ ಕೈಕಾಲು ಬಿಗಿದುಕಟ್ಟಿ ॥ ೮೪ ॥
ಹರಿವ ಹೊಳೆಯೊಳ್ ಬಿಡಿಸಲಾ ದೈವವಶದಿನವ- ।
ನುರುಳ್ದೊಂದು ಮಳಲ ತಿಟ್ಟೆಗೆ ಸೇರಲದನು ಕಂ- ।
ಡಿರದೆ ಪುರಜನವೆಯ್ದಿ ನಿರ್ದೋಷಿಯಪ್ಪ ಮಂತ್ರಿಯನಿಂತು ಮಾಡಬಹುದೇ ॥
ಧರಣಿಪಾಲಕರುಕ್ತಿಹೀನರಲ್ಲಾ ಎಂದು ।
ಪಿರಿದು ಚಿಂತಿಸುವುದಂ ಕೇಳಿ ತದ್ಭೂಮಿಪತಿ ।
ಕರುಣದಿಂದಾ ತೊರೆಯ ತೀರಕ್ಕೆ ಬಂದವನ ನುಡಿಸಲಿಂತೆಂದನಾಗ ॥ ೮೫ ॥
ವಾರಿನಿಧಿಯುಗ್ರಮೆಂದೆನಿಪಗಾಧಂಬೊಗಲೀ ।
ಕ್ರೂರತರಮಪ್ಪ ಮೃಗಸಂಕುಲಂ ತೀವಿದಾ ।
ಘೋರವಿಪಿನಂಬೊಗಲೀಯತಿಕಠೋರಂಬಡೆದ ಸಂಗ್ರಾಮದೊಳ್ ಸಿಲುಕಲಿ ॥
ಧಾರುಣೀಶರ್ಮುನಿಯೆಲೆಲೆ ರಾಯ ಕೇಳು ಮೊದ- ।
ಲಾರೈದು ಸಂಜನಿಸುವಲ್ಲಿ ಈನಿಟಿಲದೊಳ್ ।
ನೀರಜೋದ್ಭವನಂಕಿಸಿದ ಬರೆಪಮಂ ಮೀರಲೀಸದಾ ಪುಣ್ಯದೊದವು ॥ ೮೬ ॥
ಎಂಬ ನೀತಿಯನೆ ಭಾವಿಸಿ ನೃಪತಿ ಕರುಣಾವ- ।
ಲಂಬಮಾನಸನಾಗಿಯಾ ಮಂತ್ರಿಮುಖ್ಯನಂ ।
ತುಂಬುಹೊಳೆಯಿಂದ ತೆಗೆಯಿಸಿ ಬಿಡಿಸಿ ಬಂಧನವನವನ ಮನದುಮ್ಮಳಿಕೆಯ ॥

ಹಂಬಲಂ ಬಿಡಿಸಿ ಮುನ್ನಿನ ಪದವನವನಮನ- ।
ಕಿಂಬಾಗುವಂದದಿಂ ಕೊಟ್ಟನುತ್ತಮರ ಮುನಿ- ।
ಸೆಂಬುದದು ಮಳಲೊಳುದಿಸಿದ ಬೀಜ ಮುಗಿಲೊಡ್ಡು ಮುಂಬಿಸಿಲೊಳಿಟ್ಟರಿಸಿನಂ ॥ ೮೭ ॥
ಎಂದೆಂಬ ಕಥನಮಂ ಪುರಜನದ ಕೂಡೆ ಮನ- ।
ಸಂದು ಲಾಲಿಸಿ ಕೇಳ್ವ ಕಾರಣದಿ ಕಳ್ಳರಂ ।
ತಂದೊಪ್ಪಿಸಿದುದಿಲ್ಲವೆನೆ ಕೇಳಿ ನಾಳೆ ತಂದೀವುದೆಂದವನ ಕಳುಹಿ ॥
ಮಂದಿರಕ್ಕೆಯ್ದಿ ಮರುವಗಲೊಳೋಲಗಕೆಯ್ದಿ- ।
ದಂದಹ್ಯಮಾನವಾದತಿಕುಪಿತಶಿಖಿ ಮನದೊ- ।
ಳೊಂದಿ ತಡವಂ ಮಾಡದೇ ನಿರಪರಾಧಿಯುಂ ನಿಷ್ಠುರದಿ ಕರಸಲಾಗ ॥ ೮೮ ॥
ಜಡಧಿಯೊಳ್ ಜನಿಸಿ ಬೆಳೆದಾ ಮೌಕ್ತಿಕಂ ಹೊಳಹ ।
ಹಡೆದಾವ ಯತ್ನದಿಂ ಹತ್ತಿಯುತ್ತಮಗುಣ- ।
ಕ್ಕೆಡೆಯಾಗದಂತೆ ನಾನಾವಾವ ತೆರದ ದೃಷ್ಟಾಂತಮಂ ಪೇಳಿಪೇಳಿ ॥
ನುಡಿದೊಡಂ ಭೂಮಿಪತಿ ನನ್ನೊಳಗೆ ಮುನ್ನಾತ- ।
ನೊಡೆದ ಮನವಂ ಮೆಚ್ಚಲಿಲ್ಲವದರಿಂದ ಕೇ- ।
ಡಡಸುವುದು ತನ್ನರಸುತನಕೆಂದು ಚಿಂತಿಸುತ ಯಮದಂಡನೆಯ್ತಂದನು ॥ ೮೯ ॥
ಇಂದಿಗೆಂಟನೆಯದಿನದಲ್ಲಿಯಾ ಕಳ್ಳರಂ ।
ತಂದೀವೆನೆಂದೆಮ್ಮೊಳುಸಿರಿದಂಕೆಯ ದಿನಂ ।
ಬಂದಿತ್ತಿದೇಕೆಯಟಮಟವನೆಮ್ಮೊಳಗಾಡಿಯಶುಭಸ್ಯಕಾಲಹರಣ ॥
ಎಂದು ದಿನಮಂ ನೂಂಕುವಂದವೈಸೆ ನಿನ್ನ ।
ದೊಂದು ಪರಿಯೆಂಬವನ ಬೆಟ್ಟತಟ್ಟೆಯ ಮಾತಿ- ।
ಗೆಂದನೆಲೆ ನೃಪತಿ ನಾನಾವ ತೆರದಿಂ ವಿಚಾರಿಸಲವರ್ಸಿಕ್ಕಿತಿಲ್ಲಾ ॥ ೯೦ ॥
ಎನೆಭೂವರಂ ಬಹತ್ತರನಿಯೋಗವನು ಪುರ- ।
ಜನವೆಲ್ಲವಂ ಬರಿಸಿ ಯಿಂತೆಂದನೆಲೆ ಮಹಾ ।
ಜನವೆ ಕಳ್ಳರನು ಹಿಡಿತಹೆನೆಂಬ ಟಂಕೋತ್ತರವನು ತಾ ಮಾಡಿಕೊಂಡು ॥
ದಿನವೆಂಟುಬಂದಿತಿದನಿನ್ನು ಸೈರಿಸುವುದೆಮ- ।
ಗನುಚಿತಂ ನಮ್ಮ ಭಂಡಾರದೊಳು ಬಹಳ ।
ಧನಹಾನಿಯಾಯಿತದರಿಂದವನೆ ನಮಗೆ ಪರಮದ್ರೋಹಿಯದುಕಾರಣ ॥ ೯೧ ॥
ಇಂದಿವನಸುಗಿದು ತೋರಣಗಟ್ಟಿಸದೆ ಮಾಣೆ- ।
ನೆಂದು ಶಪಥವನೆ ಮಾಡಿದ ನೃಪನ ನುಡಿಗೇಳಿ ।
ಮಂದಸ್ಮಿತಾನನಂ ಯಮದಂಡನೆಳ್ದು ಕೈಮುಗಿದು ಸಭೆಗಿಂತೆಂದನು ॥
ಸಂದಣಿಸಿದೀ ಓಲಗದ ನಡುವೆ ಕಳ್ಳರಂ ।
ತಂದೊಡಾಜ್ಞೆಯನರಸು ಮಾಡದೊಡೆ ನೀವೆ ಬಲು ।
ಹಿಂದಮಾಡಿಸಬೇಕೆನುತ್ತವರ ಕಯ್ಯಿಂದ ತಪ್ಪದೆಂದೆನಿಸಿಕೊಂಡು ॥ ೯೨ ॥

ತನ್ನ ಮಡಿಲೊಳ್ ಮರಸಿಕೊಂಡಿರ್ದ ಪಾವುಗೆಯ ।
ರನ್ನದೂರ್ಮಿಕೆಯ ಯಜ್ಞೋಪವೀತಮನಿರಿಸಿ ।
ಕನ್ನಗಳ್ಳರನಿವರ ಮೊಗದಿ ಪೈಸರವಮಾಡದೆ ವಿಚಾರಿಸುವುದೆಂದು ॥
ಬಿನ್ನಪಂಗೆಯ್ದು ಯಮದಂಡನ ನುಡಿಯು ಕೇಳಿ ।
ಚೆನ್ನಾಯ್ತು ಕಾರ್ಯಮೆನುತವರು ಬೆಕ್ಕಸಬಡುವು- ।
ತಿನ್ನೇಕೆ ಸಂದೇಹಮೀ ಕುಟಿಲಬುದ್ಧಿಯಿಂ ನೃಪನ ಪುಣ್ಯಂ ಪಾರಿತು ॥ ೯೩ ॥
ಎನುತವರು ನಿಶ್ಚಯಿಸುತೀ ರತ್ನಪಾದುಕದಿ ।
ಜನನಾಥನೇ ಚೋರನೀ ಹೊನ್ನಮುದ್ರಿಕೆಯು- ।
ದನುಮಾನವೇಕೆ ಮಂತ್ರಿಯೆ ಚೋರನೀ ಯೆಸೆವ ಯಜ್ಞೋಪವೀತದಿಂದಾ ॥
ಜನದರಿಕೆಯೊಳ್ ಪುರೋಹಿತನು ತಾನೇ ಚೋರ- ।
ನಿನಿತು ಕುಟಿಲತೆಯನಿವರೆಸಗಬಹುದೇ ಎಂದು ।
ತನತನಗೆ ಸಭೆಯೆಲ್ಲಗಜಬಜಿಸಿ ವಿಸ್ಮಯಂಬಟ್ಟು ಮತ್ತಿಂತೆಂದುದು ॥ ೯೪ ॥
ಬಲ್ಲಿದಂ ಯಮದಂಡ ಕಂಡ ನಮ್ಮಂ ಕೂಡೆ ।
ಹೊಲ್ಲದುದನೆಣಿಸಿದಂ ತಮಗೆನುತ ಬಗೆದು ತಾ- ।
ನಿಲ್ಲದ ನೆವವನಿಕ್ಕಿ ದುರುದುಂಬಿತನದಿನಿವನಂ ಕೊಲಿಸಿ ಬಳಿಕ ತಮ್ಮ ॥
ಎಲ್ಲರಂ ದಂಡಿಸುವೆನೆಂದೀನೃಪಂ ಬಗೆದು- ।
ದಲ್ಲದೇ ಮತ್ತೊಂದು ತೆರನಲ್ಲವೆನುತ ಸಭೆ- ।
ಯಲ್ಲಲ್ಲಿ ಗುಜ್ಜುಗುರುಕಲ್ಲಲ್ಲಿ ಗುಡ್ಡೆಣಿಕೆಯುಂ ಮಾಡುತಿರ್ದ್ದರಾಗ ॥ ೯೫ ॥
ಕ್ಷಿತಿಪನತಿರೇಕ ಮಂತ್ರಿಯ ದುರಾಗತ ಪುರೋ- ।
ಹಿತನನ್ನೆಯಂ ಮಾಡೆ ಭಸ್ಮೀಕೃತವನು ಜನ- ।
ತತಿಗೆ ಮಾಡದೆ ಸುಮ್ಮನಿರದೆನುತ್ತವರ ತನುಜರ್ಗವರ ಸಂಪದವನು ॥
ಅತಿಹರ್ಷದಿಂ ಕೊಟ್ಟು ತತ್ಪ್ರಜೆಗಳೆಲ್ಲ ಸ- ।
ಮ್ಮತವಾಗಿ ನಾಡುಬೀಡೊಳಗಿಲ್ಲದಂತೆ ಭೂ- ।
ಪತಿ ಮಂತ್ರಿಯಾ ಪುರೋಹಿತರ ಪೊರಮಡಿಸಿ ಯಿಂತೆಂದುಲಿಯುತಿರ್ದ್ದರಾಗ ॥ ೯೬ ॥
ಇಂತೆಂಬ ಕಥೆಯುನಾ ಸಚಿವೋತ್ತಮುಂ ಧರಾ- ।
ಕಾಂತನುದಿತೋದಯಂಗತಿಹಿತದಿನುಸಿರ್ದು ಮ- ।
ತ್ತಿಂತೆದನೆಲೆ ದೇವ ಮುನ್ನೊಂದು ಟಿಟ್ಟಿಭ ವಿಹಂಗನಂಭೋರಾಸಿಗೆ ॥
ಚಿಂತೆಯುಂ ಮಾಡಿದಂತಹುದು ಲೋಕದೊಳು ಬಲ- ।
ವಂತನಾನೆಂದು ಸಾಮಾನ್ಯರೊಳ್ ಕಕ್ಕಸವ ।
ನೆಂತಾನುಮಾಡಿದೊಡೆನಲ್ ಮಹೀಪಾಲಕಂ ಮನದೆಗೊಂಡಿಂತೆಂದನು ॥ ೯೭ ॥
ಆ ಸುಯೋಧನವಸುಮತೀಶನ ಕುಮಂತ್ರದಿಂ ।
ವಾಸವಂಗೆಣೆಯೆನಿಪ ತನ್ನ ಮಹದೈಶ್ವರ್ಯ ।
ಮೋಸರಿಸಿತೆನಲೆಂದನೆಲೆ ದೇವ ಪಂಚಾಂಗನುಂತ್ರಯುತನಲ್ಲದವನ ॥

ಆ ಸೇನೆಯಾ ರಾಜ್ಯಮಾ ನಗರಿಯಾ ಕೀರ್ತಿ- ।
ಯಾಸತ್ವಮಾ ಪರಾಕ್ರಮಮೆಲ್ಲಮ್ನಳಲೇರಿ- ।
ಯಾ ಸಂಜೆಗೆಂಪು ಮುಗಿಲೊಡ್ಡು ಕಾಮನಬಿಲ್ಲು ಶಬದೊಡಿಗೆ ಪುಲ್ಲಕಿಚ್ಚು ॥ ೯೮ ॥
ಎಂದೆನಲನರ್ಥಕಾರ್ಯಮದಾವನಾನೊರ್ವ- ।
ನಿಂದುರೆ ನಿವಾರಿಸುವುದವನೇ ಪ್ರಧಾನಿಯದ- ।
ರಿಂದವನ ಮಂತ್ರಮಂ ಮೀರದ ಮಹೀಶ್ವರನ ಸರ್ವಕಾರ್ಯಗಳು ಸಿದ್ಧಿ ॥
ಮುಂದಕ್ಕೆ ಕೀರ್ತಿ ಪುಣ್ಯಂ ಸಮನಿಸದೆ ಮಾಣ- ।
ದೆಂದು ನೀನೀ ನೀತಿಗನುಗುಣಂಬಡದೆ ಗುಣ- ।
ವೃಂದಾರಕಾ ನನ್ನ ನಲ್ಲಳನಗಲ್ದ ಬೇಸರನೆಂತು ಕಳೆವೆನೆನಲು ॥ ೯೯ ॥
ಎಲೆ ದೇವ ದೇವಾದಿದೇವನಮರಾವತಿಗೆ ।
ಸಲೆ ಸೊಬಗಿನಿಂದ ಸಾಸಿರತೂಕವಾಗಿ ಸ- ।
ಲ್ಲಲಿತವಡೆದೀ ನಮ್ಮ ರಾಜಧಾನಿಯ ಕೇರಿಕೇರಿಯೊಳಿರುಳೊಳು ॥
ಅಲವರಿಕೆಯಿಲ್ಲದೊಂದೆರಡು ಜಾವಂ ಜನಗ- ।
ಳುಲುಹಡಗುವಲ್ಲಿಪರಿಯಂತರಂ ನಾಮಿರ್ವ- ।
ರೊಲಿದು ವಿಹರಣೆಗೆಯ್ಯಲೇನಾನುಮೊಂದು ಬಿಸವಂದಮಂ ಕಾಣಬಹುದು ॥ ೧೦೦ ॥
ಇತರಜನಸಮುದಾಯಮೀ ಯಿಳಾತಳದಲ್ಲಿ ।
ಮತಿವಿಕಳರಾಗಿ ಸಪ್ತವ್ಯಸನಕಲಹಕು- ।
ತ್ಸಿತವಾಕ್ಯಸಂಗಪತಿನಿದ್ರೆಯೊಳ್ದಿನವನೂಂಕುವರ ತೆರನಾಗದೆ ॥
ಮತಿವಂತರಾ ಧರ್ಮಶಾಸ್ತ್ರಪ್ರಸಂಗ ಸ- ।
ನ್ನುತಗೀತವಾದ್ಯನರ್ತನಸರಸಕವಿಜನ- ।
ಪ್ರತತಿಯ ಸುಗೋಷ್ಠಿಯೊಳ್ ಮನಮಿತ್ತು ಕಾಲಮಂ ಕಳೆಯಬೇಕವನಿಪಾಲಾ ॥೧೦೧॥
ತಳುವದದುಕಾರಣಂ ಚಂದ್ರಿಕಾವಿಹರಣಮ- ।
ನುಳಿಯದೇ ಮಾಡಬೇಕೆಂದು ಬಗೆದಾ ರಾಜ ।
ನಿಳಯಮಂ ಪೊರಮಟ್ಟು ರಾಜವೀಥಿಗೆ ಬಂದು ಹಾಲಂತೆ ಹಳಹಳಚನೆ ॥
ಹೊಳೆವ ಹುಣ್ಣಿಮೆಯ ತಿಂಗಳ ಬೆಳಗಿನೊಳ್ ತಮ್ಮ ।
ಪೊಳಲಕೇರಿಯ ಕಣ್ಮನಂಗೊಳಿಪ ಸುಭಗತೆಯ- ।
ನೆಳಸಿ ನಡೆನೋಡುತಂ ನಡೆತಂದರಾ ಮಹೀವಲ್ಲಭನುಮಾ ಸಚಿವನು ॥ ೧೦೨ ॥
ಸತ್ಯನಿಧಿ ಸದ್ಗುಣಕರಂಡಕಂ ಸಜ್ಜನ ।
ಸ್ತುತ್ಯನನುಪಮಚರಿತನಾಶ್ರಿತಜನಾಧಾರ- ।
ನತ್ಯಂತಶುದ್ಧನಭಿನವಮದನನುತ್ತಮಕುಲಾತ್ಮಕನುದಾರಮೂರ್ತಿ ॥
ಪ್ರತ್ಯಕ್ಷಮನು ಮಾನಿನೀಜನಮನೋಹರಂ ।
ಪ್ರತ್ಯಂತಭೂಪಾಲಹತಶೌರ್ಯಶಾಲಿಯಾ ।
ಮಾತ್ಯಸಹಿತಂ ನಡೆದನಾನೃಪತಿ ಜಿನಸಮಯವಾರ್ಧಿವರ್ಧನಚಂದ್ರನು ॥ ೧೦೩ ॥

ಇದು ವಿಬುಧಜನವಿನುತವಿದು ವಿಬುಧಜನವಿನತ ।
ವಿದು ವಿದಿತಜಿನಸಮಯಶರಧಿಸಂಪೂರ್ಣೇಂದು ।
ಸದಮಲಚರಿತ್ರ ಯದುವಂಶಭೂವರರ ಸಚಿವಾನ್ವಯಾಂಬರಹಂಸನು ॥
ಮದನಸಮರೂಪನುತ್ತಮಗುಣಕರಂಡಕಂ ।
ಚದುರಮಂಗರಸನುಸಿರ್ದೀ ಕೌಮುದೀಕಥೆಯೊ- ।
ಳೊದವಿರಂಜನೆಯ ಪಡೆಯಿತ್ತು ಸಚಿವೋತ್ತಮನ ವಚನವೆರಡನೆಯ ಸಂಧಿ ॥ ೧೦೪ ॥

ಅಂತು ಸಂಧಿ ೨ ಕ್ಕೆ ಪದ ೧೫೬ ಕ್ಕಂ ಮಂಗಲಮಹಾ.

---



# ಮೂರನೆಯ ಸಂಧಿ.

## ಚಂದ್ರಿಕಾವಿಹರಣ.

ಶ್ರೀಮದರ್ಹದ್ಧಾಸವೈಶ್ಯವಿಭುವಿನ ಗೃಹ- ।
ಕ್ಕಾ ಮಂತ್ರಿಯಾಚೋರನುಂ ಬೆರಸಿ ವಿರಹದಿಂ ।
ಭೂಮೀಶನುದಿಶೋದಯಂ ಪುರದ ಶೋಭೆಯುಂ ನೋಡುತ್ತೆ ನಡೆತಂದನು ॥ ಪಲ್ಲ ॥

ಆಮೋದದಿಂದಮರಪತಿ ಸೊಗಸುಗಡಲ ದಿ- ।
ವ್ಯಾಮೃತಮನಬ್ಜಮಂಡಲವೆಂಬ ಕೊಡದಿನು- ।
ದ್ದಾಮಭಕ್ತಿಯೊಳುಮೊಗೆದೊಸೆದು ಮಾಡಿದ ಸುರುಚಿರಾಭಿಷೇಕಂ ನಿಲ್ಲದೆ ॥
ಶ್ರೀಮನ್ಮಹಾವ್ಯೋಮಕೇಶೋತ್ತಮಾಂಗಮಂ ।
ಭೂಮಂಡಲಕ್ಕೆಸುರಿತಂದುದೋ ಎಂಬಂತೆ- ।
ರಾಮಣೀಯಕಮಾದ ಜೊನ್ನದೊಳ್ ಪುರವೀಥಿವಿಡಿದು ನಡೆದಂ ಭೂಪನು ॥ ೧ ॥

ಅವನೀಶನಾಜ್ಞೆಯಿಂದಾ ನಂದನಕೆ ಪೋದ ।
ಯುವತಿಯರ ವಿರಹದಿಂದಾ ಜನಂ ತಂತಮ್ಮ ।
ಭವನದಂಗಣದಗ್ರಶಾಲೆಯೊಳ್ತೆಟ್ಟೆತೆಟ್ಟೆಯೊಳು ನಿಂದವರ ರೂಪು ॥
ಅವರ ರಸಿಕತೆಯವರ ನೋಟಬೇಟಂ ಕೂಟ- ।
ವವರೊಲುಮೆಗಲಹದ ವಿಲಾಸದೊಂದೊದವು ಮ- ।
ತ್ತವರ ನೆವವವರ ಮುನಿಸವರ ಮಮತೆಯುದಿಂತು ನುಡಿಯುತ್ತಮಿದ್ದರ್ದಾಗ ॥ ೨ ॥

ಕಾಣ್ಬೆ ನಾನೆಂದಿಂಗೆ ತಣ್ಪಿಡುವ ಮಾಳ್ಕೆಯೊಳು ।
ತಣ್ಬುಳಿಲ ತಾಣದಂದದ ನಿತಂಬದ ತೊಂಡೆ- ।
ವಣ್ಬಾಯದೆರೆಯ ಬಲ್ಲ ವ್ವನದ ಬಟ್ಟವೆರೆಮೊಗದ ವೀಣಾಲಾಪದ ॥
ಜಾಣ್ಬಡೆದ ನುಡಿಯ ಜಂಬೀರೋಪಮಸ್ತನದ ।
ನುಣ್ಬೊಗರ ಚಂಚರೀಕಾಳಕದ ಪೊಸವಾಳೆ ।
ಗಣ್ಬೊಣರ ನಿಂಬಪತ್ರೋಪಮಭ್ರೂಲತೆಯ ಲಲನಾಮಣಿಯ ಮುಖವನು ॥ ೩ ॥

ಸಾರಂಗಶಾಬಲೋಚನದ ನವಕಾಂಚನಸ- ।
ರೋರುಹಾನನದ ಪ್ರವಾಳಾಂಘ್ರಿಯ ಮ- ।
ಯೂರಸನ್ನಿಭಕೇಶಬಂಧನದ ಕಲ್ಪಲತಿಕಾಹಸ್ತದರನೇರಿಲಾ ॥
ದೋರೆದುಟಿಯುಗಲದಮಳ್ಪಕ್ಕಿಯಂದದ ಕುಚದ ।
ಚಾರುಚಂಪಕದ ಬಿರಿಮುಗುಳನಾಸಿಕದ ಮದ- ।
ವಾರಣೋಪಮಗತಿಯ ಗರುವೆಯಂ ಬಿಟ್ಟು ಜೀವಿಪರಾರಿಳಾತಳದೊಳು ॥ ೪ ॥

ನಿಡುದೋಳನೀರೆ ನೀಲಾಳಕಂಗಳಸುಭಗೆ ।
ಕುಡಿತೆಗಣ್ಗಳಕುಶಲೆ ಕುಂದಕುಟ್ಮಳರದದ ।
ಕಡುಚದುರೆ ಚಂದ್ರವದನದ ಚೆಲ್ಲಕಾರ್ತಿ ಮಾಧುರ್ಯವಚನಗಳ ಮಾನಿನಿ ॥
ಬಡನಡುವಿನಬಲೆ ಬಣ್ಣಿಗೆದುಟಿಯ ಚೆನ್ನೆ ಪೊಂ- ।
ಗೊಡವೊಲೆಯುಮುಗ್ಧೆ ಪೊಂಗುವಜವ್ವನದ ಜಾಣೆ ।
ಬಿಡುಮುಡಿಯಬಿಂಕಗಾರ್ತಿಯ ಸುರತಸೌಖ್ಯಮದು ಸುರಲೋಕಸುಖಮಲ್ಲವೇ ॥ ೫ ॥
ನೋಡಲೆಳಸುವ ಕಣ್ಗೆ ಜನ್ಮಸಾಫಲ್ಯಮಂ ।
ಮಾಡುವ ವಿಲಾಸವಲರ್ಗಣೆಯನತಿಶಲ್ಯಮಂ ।
ಮೂಡುವ ಕಟಾಕ್ಷಮುನ್ನತಮಪ್ಪ ಜಾಣ್ಮೆಯಿಂ ಗಂಡರಂ ಗಂಡುದೊಳ್ತು ॥
ಮಾಡುವಗುಣಂ ಕೂಡುವಲ್ಲಿ ಪರವಶತೆಯುಂ ।
ಮಾಡುವೆಸಕಂಬಡೆದು ಸಮಸುಖವನಿರದೀವ ।
ಗಾಡಿಕಾರ್ತಿಯನಗಲಿ ಜೀವಿಸುವ ಜನ್ಮ ತಿರ್ಯಗ್ಜನ್ಮ ತಾನಲ್ಲವೇ ॥ ೬ ॥
ಬಚ್ಚಬಯಲಂತೆ ಬಗೆಗೊಳಿಪ ಬಡನಡುವಿನ ಪ- ।
ಳಚ್ಚನೊಪ್ಪುವ ಪೂರ್ಣಚಂದ್ರಮಂಡಲಕೆ ಪಡಿ-
ಯಚ್ಚಾದ ಮುಖದ ಮುಗ್ಧಾಕ್ಷಿಗಳ ಮುಗುಳ್ವಡೆದ ಮಿಸುನಿದಾಮರೆ ಮೊಲೆಗಳಾ ॥
ಹೊಚ್ಚಹೊಸಪೊನ್ನ ಹೊಗರಂಗೆಲ್ವ ತನುರುಚಿಯು ।
ಮಚ್ಚರಮನತಿರೂಪಿನಿಂದ ರತಿಯೊಳ್ಮಾಳ್ಪ ।
ಮೆಚ್ಚುವೆಂಗಳ ಮೋಹವೇ ಮುಕ್ತಿಯಲ್ಲವೇ ಭಾವಿಸಲ್ ಬಲ್ಲವರಿಗೆ ॥ ೭ ॥
ನೆವವನೊಂದಿನಿಸು ನೆನೆಯಲ್ಬಲ್ಲಳೇ ಮುನಿಸು ।
ವಿವರಿಸಿದೊಡೊಂದಿನಿಸು ನೆನಹುಮಾತ್ರದೊಳುಂಟೆ ।
ಸವಿಗೆ ಸವಿಯಂ ಪಿರಿದನೀವಗುಣಮಲ್ಲದೇ ಮತ್ತೊಂದು ಭಾವಮುಂಟೇ ॥
ತವಕಮಲ್ಲದೆ ತನುವಿನೊಳಗೆಯಲಸಿಕೆಯುಂಟೆ ।
ನವರತಿಯ ಸೌಖ್ಯಮಲ್ಲದೆ ಮತ್ತೆ ಪೆರತುಂಟೆ ।
ಯವಿರತಂ ಸೋಲಮಲ್ಲದೆ ಗೆಲವು ತಾನುಂಟೆಯಾಮಾನಿನೀರತ್ನಕೆ ॥ ೮ ॥
ಅಲಘುಕುಚವೆದೆಯೊಳಂಕುರಿಸುವಂದಿಂದವೊದ- ।
ಲಳಿಕುಲನಿಭಾಳಕಂ ನಿಮಿರದಂದಿಂ ಮೊದ- ।
ಲ್ಗೆಲವೆಂಬ ಹೊಲೆಹೊದ್ದದೊಂದಸುವಿಗೆರಡಂಗವಡೆದಂತಿರಿರ್ದ್ವನ್ನೊಳು ॥
ಒಳಗಿಗೊಳಗಾಗಿಯರೆಘಳಿಗೆಯಗಲದೆ ಸಕಲ ।
ಕಲೆಗಳಂ ಧರಿಸಿ ಯೇರುಂಜವ್ವನಂದಳೆದ ।
ಲಲನಾಕುಲಕ್ಕೆ ಚೂಡಾಮಣಿಯು ಮೋಹನದ ಕಣಿಯುನಾನೆಂತಗಲ್ವೆನು ॥ ೯ ॥
ಆ ತನೂದರಿಯು ಕಡುಚೆಲ್ವಿಕೆಯುಲಜ್ಜಣಂ ।
ಕಾತರಿಪ ಕಣ್ಗೆ ಕರ್ಣದ್ವಯಕ್ಕಾ ಸೊಗಸು ।
ವಾತಿನ ಸುಮುದ್ರೆ ವಾಸಿಸುವುಸಿರ್ಗೆ ಮಗಮಗಿಪಮೈಗಂಪಿನೊಂದು ಕುರುಹು ॥

ಪ್ರೀತಿಯಿಂ ತಳ್ಕೆಗಿಚ್ಛೈಸುವೀ ಭುಜಯುಗ- ।
ಕ್ಕಾತನುವಿನೊಪ್ಪವುಂಡೆಗೆನಾಲಗೆಗೆ ಚಿತ್ತ ।
ವೋತಿವ ಚೆಲ್ವ ಚೆಂದುಟಿಯಾಣತಿಯಿನಿಂದು ಮನಮನುರೆ ಸೆರೆವಿಡಿದಿರೆ ॥ ೧೦ ॥
ಅತ್ತತ್ತ ತೊಲಗಿತ್ತ ಬರಬೇಡಬೇಡೆಂಬ ।
ಹತ್ತಿರಕೆ ಬರೆ ಮೊಗಂದಿರಿಗಿ ಕಿಕ್ಕಣ್ಣಿಡುವ ।
ವೃತ್ತಸ್ತನದ ಮೇಲುದಂ ಸೆಳೆಯೆ ಲಜ್ಜೆ ನಿನಗಿಲ್ಲವೇ ಬಿಡುಬಿಡೆಂಬ ॥
ಒತ್ತಿಬಿಗಿಯಪ್ಪಲಿನ್ನೇಕೆನುತ ಮೈಗೊಡುವ ।
ಮತ್ತೆ ಮೊಗವೆತ್ತಿ ಚುಂಬನಂಗೆಯ್ಯಲುಹುಹೆಂದೆ- ।
ನುತ್ತ ಸವಿದುಟಿಯೀವ ಸೋಲಗಾರ್ತಿಯನೇಹಗಲಹೆಮತಿಸುಖಮಲ್ಲವೇ ॥ ೧೧ ॥
ಒಳಸುತ್ತನೊತ್ತಿಬಿಗಿವನಿತರೊಳ್ಬಾಗಿಲಿಂ- ।
ದೊಳಹೊಗುವುದಂ ಕಂಡು ಹಿಡಿವ ನಿರಿಯಂ ಮರೆದು ।
ತಳುವದಂಗಣಕೆಯ್ದಿ ನಿಲುಕುಗಾಲೊಳ್ನಿಂದುನಿಗುರಿ ನಗೆಮೊಗವನೆತ್ತಿ ॥
ಪುಳತತಿ ಝುಮ್ಮೆನಲ್ ಬಿಗಿಯಪ್ಪಿ ಕರ್ಪೂರ ।
ವಳಿಕುದಂಬುಲಗೊಂಡು ಮದುರಾಧರವನು ಮನ- ।
ವೆಳಸಿ ಚುಂಬಿಸಲೆಂದು ನೀಡಿ ಹರವಸಗೆಯ್ವ ಸತಿಯ ಸೌಖ್ಯಂ ಸಾಲದೇ ॥ ೧೨ ॥
ವರವಜ್ರಮಣಿಭೂಷಣಮನಿಟ್ಟು ನಿಡುದೋಳ- ।
ನೆರಡನುಪರಿಮಕೆತ್ತಿ ಬೆಳಗಾಗುವನ್ನೆವರ- ।
ಮುರುಮುದದಿ ರತಿಕೇಳಿಯೊಳಗಿರ್ದ್ದ ನಸುನಿದ್ರೆಗೆಯ್ದು ಕಣ್ಗಳನೆ ತೆರೆದು ॥
ತರುಣಹರಿಣವಿಲೋಲನೇತ್ರೆ ಕುಳ್ಳಿರ್ದ್ದ ಮೈ- ।
ಮುರಿಯುಲಾ ನಿಜವದನಮಂಡಲಂ ಸೊಗಯಿಸಿತು ।
ಪರಿವೇಷಮಧ್ಯದೊಳ್‌ಪರಿರಂಜಿಸುತ್ತಿರ್ಪ್ಪ ಪರಿಪೂರ್ಣಚಂದ್ರನಂತೆ ॥ ೧೩ ॥
ಬೆಳಗುಜಾವದೊಳೆಳ್ದು ಬೇರೂರ್ಗೆ ಪೋಗಿ ಪಗ- ।
ಲಳಿವುದಕೆ ಮುನ್ನಮೆಯ್ದುವೆನೆಂದು ಪೊರಮಡಲ್- ।
ಬಳಿವಳಿಯೊಳೆಯ್ದಿ ಬೀಳ್ಕೊಡುತ ಪಶ್ಚಿಮದಿಶಾವಲ್ಲಭೆಯ ವದನದಂತೆ ॥
ತೊಳಗುವ ಶಶಾಂಕಮಂಡಲದೊಡಲಕರೆ ಮನಂ- ।
ಗೊಳಿಪುದಂ ನೋಡೆಂದು ಪಯಣಮಂ ನಿಲಿಸಿ ನಿಜ ।
ನಿಳಯಕ್ಕೆ ನಿಡುದೋಳೊಳಮರ್ದಪ್ಪಿಕೊಂಡೊಯ್ದು ಬಂದಿವಿಡಿದಳ್ ಬಗೆಯನು ॥ ೧೪ ॥
ಅಣಕಮೇ ಎನ್ನೊಳಗೆನುತ್ತ ನಾನೆಯ್ದುವಂ- ।
ಗಣಕೆಯ್ದುತಿನ್ನೊಮ್ಮೆ ಮಾತಾಡಿನೋಡೆಂದು ।
ಕೆಣಕಿ ಕಲಹಂಗೆಯ್ದು ಮಣಿಕರ್ಣಿಕೆಯ ನವೋತ್ಪಲನಾಳದಿಂದ ಪೊಯ್ದು ॥
ಹೆಣಗುತೆಳೆದೊಯ್ದು ಬಾಗಿಲ್ಗೆ ಬಗ್ಗಿಸಿಕೊಂಡು ।
ಮಣಿಮಂಚಕೆಯ್ದಿಸುವ ಲಲನೆಯರ ಕುಲಕೆ ನವ- ।
ಮಣಿಯ ಮೋಹದ ಕಣಿಯ ಮುನಿಸೆಂಬುದದು ಮುನಿಸೆ ಭಾವಿಸಲ್ ಬಲ್ಲವರಿಗೆ ॥ ೧೫ ॥

ಕಾಣುತಿದಿರೆಳ್ದು ಕಳಶಸ್ತನದೊಳೆಸೆವ ಕ- ।
ಟ್ಟಾಣಿಮೌಕ್ತಿಕದ ಮಣಿಪೂರಮಂ ಪೊರನೂಂಕಿ ।
ಮಾಣದೆಯ್ತಂದು ಮೇಲ್ವಾಯ್ದು ಚುಂಬಿಸಿಕೊಂಡು ಕೊಟ್ಟರಸದಂಬುಲವನು ॥
ಪ್ರಾಣೇಶಯೆಂದು ಹರವಸಗೆಯ್ವ ಫಣಿಸದೃಶ- ।
ವೇಣಿ ಪಲ್ಲವಪಾಣಿ ಮಧುರಕೋಕಿಲರುಚಿರ- ।
ವಾಣಿ ಮೋಹನಮುಕ್ತಿಗಿಟ್ಟನಿಶ್ರೇಣಿಯಂ ತೊಲಗಿಯಸುವಿಡಿಯಲುಂಟೇ ॥ ೧೬ ॥
ಸಾತ್ವಿಕದ ಸಂಜಾತಮಲ್ಲದೆ ಭಾವಮು- ।
ಸ್ಯತ್ವಮುಂಟೇ ನಿರೀಕ್ಷಣಮಾತ್ರದಲ್ಲಿ ಭಿ- ।
ನ್ನತ್ವಮುಂಟೇ ಅಭಿನ್ನತ್ವಮಲ್ಲದೆ ಮನಸಿನಲ್ಲಿ ನಿಡ್ಡಳಮಲ್ಲದೆ ॥
ಸತ್ವವಿನಿಸುಂಟೆಯೆಡೆಯಲ್ಲಿ ಮಾತಿನೊಳು ದೀ- ।
ನತ್ವಮಲ್ಲದೆಯುಂಟೆ ನಿಷ್ಠುರಂ ನೋಡೆ ನಿಜಪರವ- ।
ಶತ್ವಮಲ್ಲದೆ ರತಿಯೊಳೆಚ್ಚರುಂಟೇ ಮನ್ಮನೋವಲ್ಲಭೆಗೆ ಭಾವಿಸೆ ॥ ೧೭ ॥
ಕರುಣವೆದೆಯಲ್ಲಿ ಕೋಪಂ ಕಪಟದಲ್ಲಿ ಪರ- ।
ಪುರುಷರೀಕ್ಷಣದಲ್ಲಿ ಬೀಭತ್ಸಮುಪಹಾಸ್ಯ- ।
ದಿರವು ಸರಿಸೋಲವಿಲ್ಲದರಲ್ಲಿ ಭೀತಿಯಲರ್ಗಣೆಯಲ್ಲಿ ಬೀರದೇಳ್ಗೆ ॥
ವಿರಹದಿಂ ಬಾಳ್ದುದಿಲ್ಲೆಂಬಲ್ಲಿ ಸಿಂಗರಂ ।
ವರತನುವಿನಲ್ಲಿ ಶಾಂತಂ ವದನದಲ್ಲಿಯ ।
ಚ್ಚರಿ ಸುರತಬಂಧದೊಳಗದರಿಂದ ನವರಸದ ಕರುವಿನಂತೆಸೆದಳವಳು ॥ ೧೮ ॥
ಇಂತು ತಂತಮ್ಮಿನಿಯಳಂ ನೆನೆದು ಪುರಜನಂ ।
ಮಂತಣಂಗೊಂಡು ಮರುಗುತ್ತಿರಲ್ಕಾಣುತಾ ।
ಕಂತುಮಾಡುವ ತೇರುತೆಕ್ಕೆಯಿಂದಾ ಮಲಯಮಂದಮಾರುತನ ದಾಳಿ ॥
ಅಂತರಿಸದವನೀತಳಂ ಹೊರದವೊಲ್ ನಿಶಾ- ।
ಕಾಂತಪ್ರಭೆಯದಂಡು ಶುಕಪಿಕಮಧುವ್ರತದ ।
ತಿಂತಿಣಿಯ ಪಾಳೆಯಂ ಬಿಡೆ ಕಂಡು ಕೆಟ್ಟೆವಿನ್ನೇವೆವೆನುತಿರ್ದರಾಗ ॥ ೧೯ ॥
ನಂದನಕೆ ನಲ್ಲಳಿರ್ದೆಡೆಗೆಯ್ದಲೆಳಸುವೆವೆ ।
ಇಂದಿಳಾಧೀಶನಿಂ ತಳ್ಳುಬಳ್ಳಿಯದಹುದ- ।
ರಿಂದಿಲ್ಲಿ ಜೀವಿಸುವೆವೆಂಬೆವೇ ಕಾವನಬ್ಬರಂ ಪಿರಿದಾಗಿಪ್ಪುದು ॥
ಮುಂದೆಮಡು ಹಿಂದೆ ತಗರಾಯೆರಡರೆಡೆಯಲ್ಲಿ ।
ನಿಂದು ನಿತ್ತರಿಸಬಹುದೇ ಅದು ನಿಮಿತ್ತವೆಮ- ।
ಗಿಂದು ಹುಟ್ಟಿದ ದಿನಂ ಬಂದಿತೆಂದಾ ಜನಂ ತಳ್ಳಂಕಗೊಂಡುದಾಗ ॥ ೨೦ ॥
ಕಟಾಕಟಾ ನಸುತೊಲಗಿ ಕೂಡೆ ಕಡವಿಯೆಂದು ।
ಸಟಿಗೆ ನಮ್ಮೊಳುಮುನಿಯೆ ತಾವಿರ್ಪ ಬನದಿನಾ- ।
ರ್ಭಟೆಯಿಂದ ಕೂಗಿಯುಬ್ಬರಿಸನ್ಯಭೃತಭೃಂಗಕೀರಪಾರಾವತಗಳು ॥

ದಿಟವಾಗಿ ಮತ್ತಮೀ ಹಗಲಿಂದ ತಾವಿರ್ಪ್ಪ ।
ಕಟಕಕ್ಕೆ ನಮ್ಮ ಬಿಟ್ಟೆಯ್ದಿದಬಲೆಯರ ಸಂ- ।
ಕಟಬಡಿಸದೆ ಬಿಡುವುದಿಲ್ಲೆಂದು ಬಿಸುಸುಯ್ಯುತಿರ್ದ್ದರಲ್ಲಲ್ಲಿ ಕೆಲರು ॥ ೨೧ ॥
ಅರುಣಚಂದನದಿನುರಿಗಣ್ಣಂತೆ ತಿಲಕಮಂ ।
ಬರೆದು ಭಾಳದೊಳು ಹೆಡೆಯಂತೆ ಕೇತಕಿಯೆಸಳ- ।
ನೆರಡ ಜಿಡೆಗಿಕ್ಕಿ ಹೊನ್ನಹೂವಿನಬಣ್ಣದಂಬರದ ನಿರಿಯನುಡಿಸಿ ॥
ದರಭಸ್ಮದಂತೆ ಬಾವನ್ನವುಡಿಯಂ ಪೂಸಿ ।
ಕರದಲ್ಲಿ ಫಣಿಯ ಕಂಕಣಮಿಕ್ಕಿ ಕಳಿಪಿದೆಂ ।
ಸ್ಮರಬಾಧೆಯಾಜೀವಿತೇಶ್ವರಿಗೆ ಬರ್ಪ್ಪುದೇ ಎನುತಿರ್ದ್ದನೊರ್ವ್ವ ವಿರಹಿ ॥ ೨೨ ॥
ಹಡೆಯುಲೊಡನಾ ಹೆತ್ತ ಜನನಿಯಾ ಪೆಣ್ಮಣಿಯ ।
ಸಡಗರದಿ ವಟಫಲಾಧರೆ ಬಾಲಮೃಗನೇತ್ರೆ ।
ಕಡುಸೊಗಸುವಡೆದಮೃತವಾಣಿ ಹೆರೆನೊಸಲಬಲೆ ಚಂದ್ರಮುಖಿಯೆಂದು ಹೆಸರಾ ॥
ಇಡುತ ಸಲಹಿದಳದರಿನೀಗೆನ್ನನಗಲಿದಾ ।
ಮಡದಿಯಂ ನಿನ್ನನಿಷ್ಠುರಮಪ್ಪ ಕಿರಣದಿಂ ।
ಸುಡಬೇಡವೆಂದೊರ್ವ್ವನಾ ಸುಧಾಸೂತಿಯಂ ಬೇಡಿಕೊಳುತಿರ್ದ್ದನಾಗ ॥ ೨೩ ॥
ಕೊರಲಮೇಗಣ ಸರದ ಮೌಕ್ತಿಕದ ಹರಲ ಹರಿ- ।
ದರಗಿಳಿಯ ಮಣಿವಂಜರದ ಕೀಳಿಲೊಳ್ಕಿಂದು ।
ಭರದಿಂದ ಸೂಸಿಯಕ್ಷತೆಯಪುಂಜಮನಿಂದು ಬೇರೂರ್ಗ್ಗೆನುತ್ತೆ ಪೋದಾ ॥
ಹರಣದೆರೆಯನಬರವು ಹಗಲಳಿವುದಕೆ ಮುನ್ನ ।
ದೊರಕುವುದೊ ದೊರಕದೋ ಎಂದು ತಳ್ಳಂಕದಿಂ- ।
ದಿರದೋಸರಂಗೇಳ್ವ ಪೆಣ್ಮಣಿಕಂ ತಾನಗಲ್ದೆಂತುಟಸುವಿಡಿವಳೋ ॥ ೨೪ ॥
ಅಳಿವೋಹಿಜನದಂಗಣವನಿನಿಸು ಪೊಗುವಳೇ ।
ಬಳಿಕವರ್ಬ್ಬರಲು ತಲೆವಾಗಿಲಂ ತೆಗೆವಳೇ ।
ಎಳಸಿಯವರೇನನಿತ್ತೊಡಮದಕ್ಕಾಸೆಯಂ ಮಾಳ್ಪಳೇ ಅವರ ಹೆಸರಾ ॥
ತಿಳಿದು ಭಾವಿಸಿ ಕನಸುಮನಸಿನೊಳ್ಪಿಡಿವಳೇ ।
ಎಳವರೆಯದಿಂದ ಮೊದಲೇಣಾಂಕನಿಭವದನೆ ।
ಕಳಭನಿಭಯಾನೆ ಕಣ್ಮನಮನುರೆ ನನೆಯಿಸುವ ಸುಖರಸಂ ಸುರಿವ ಸೋನೆ ॥ ೨೫ ॥
ಸುರತಸಮಯದೊಳುದ್ಭವಂಗೆಯ್ದ ಸಮಸುಖದ ।
ಪರವಶತೆಯಿಂದ ನಸುಸಡಿಲಿದಾ ನಳಿತೋಳ ।
ಪರಿರಂಭಣಂಗಂಡು ಕಣ್ಗಳಂ ತೆರೆದಿನಿಯನಗಲಿದನಲಾ ಎನುತ್ತ ॥
ವಿರಹದಿಂ ಹಿರಿದುಸಂಕಟಬಟ್ಟು ಕಡುನೋವ ।
ತರಳಲೋಚನೆ ನಿಶ್ಚಯದಿನೆನ್ನನಿಂದಗಲಿ ।
ತರಹರಂಗೊಂಡು ಹರಣವನಿನಿಸುಹಿಡಿವುದಿಲ್ಲೆಂದುಸುಯ್ದನದೊರ್ವ್ವನು ॥ ೨೬ ॥

ಅರಲಂಬನಟ್ಟುಳಿಯುನಂಗನಾತಂಕ ರತಿ ।
ವರನ ಹಾವಳಿಯುನನ್ಯಜನಬ್ಬರಂ ನನೆಯು ।
ಸರಲನುಪಟಳಮಿಕ್ಷುಚಾಪನಿಟ್ಟೆಡೆ ಪುಷ್ಪಕೋದಂಡನತ್ಯಾಗ್ರಹಂ ॥
ಸ್ಮರನುಪದ್ರಂ ಮನೋಜಾತನ ಮಹಾಬಾಧೆ ।
ಸುರಭಿಸುಮನೋಬಾಣನುಬ್ಬಸಂ ಜೀವಿತೇ- ।
ಶ್ವರಿಯುತ್ತೊರ್ಗಲಂಗಲಾ ವಿರಹಿವ್ರಜಕ್ಕೆಸಂಭವಿಸಿತಾ ಪುರವರದೊಳು ॥ ೨೭ ॥
ಅಲ್ಲಲ್ಲಿಯುಲರಸುಪ್ಪತ್ತಿಗೆಯ ಮೇಲೊರಗು- ।
ವಲ್ಲಲ್ಲಿ ಬಿರಿಮುಗುಳ ಬಿಜ್ಜಣಿಗೆಯುಂ ಬೀಸು- ।
ವಲ್ಲಲ್ಲಿ ಚಂದ್ರಕಾಂತದ ಕೊಡದೊಳಿಟ್ಟಪನ್ನೀರಮಜ್ಜನಮಾಡುವ ॥
ಅಲ್ಲಲ್ಲಿ ಸಿರಿಪಚ್ಚೆವುಡಿಯನುರದೊಳ್ಚೆಲ್ಲು- ।
ವಲ್ಲಲ್ಲಿ ಸಿರಿಗಣ್ಪೆನಣ್ಪನಿಕ್ಕುವ ಜನಗ- ।
ಳಲ್ಲದೇ ಸುಮ್ಮನಿರ್ಪವರ ಕಾಣೆಂ ಮನೋಭವನಿಡುವ ಕಿಚ್ಚಿನಿಂದ ॥ ೨೮ ॥
ಅಂಗನಾಜನವಗಲ್ದನುಸಂಧಿಯಂ ಕಾಣು- ।
ತಂಗಭೂತಂ ತನ್ನ ಬಲವಂ ಕೂಡಿ ತತ್ಪುರ ಜ- ।
ನಂಗಳೆರ್ದೆಯೆಂಬ ದುರ್ಗಕ್ಕೆ ಹರಿದಾಳಿಯುಂ ಮಾಡಿ ಮೂವಳಸಿ ಮುತ್ತೆ ॥
ಮುಂಗುಡಿಯೊಳೇ ಲಗ್ಗೆಯುಂ ಮಾಡಿ ಹತ್ತಿ ಕೋ- ।
ಳುಂಗೊಂಡು ಧೈರ್ಯಮಂ ಸೆರೆವಿಡಿದು ನಾಣಪಾ- ।
ಡಂಗೆಡಿಸಿಯೊಳಗರಿದು ದಂದಹ್ಯಮಾನಮಪ್ಪಂದದಿಂ ಸುಟ್ಟನಾಗ ॥ ೨೯ ॥
ಈಯುಂದದಿಂದ ಪುರವರದೊಳೆಡೆವಿಡಲಿಲ್ಲ- ।
ದಾಯಿಕ್ಷುಕೋದಂಡನಲರ್ಗಣೆಯುನಿಟ್ಟು ಮ- ।
ತ್ತಾಯುಗಾಣಿಸಿ ಪುರಜನಂಗಳೆರ್ದೆಯುಂ ಲಾಳವಟ್ಟೆಯುಪ್ಪಂತಿರೆಸುವಾ ॥
ಕಾಯಜನಕೋಳಾಹಳವನು ಕಂಡಾ ಮಹಾ- ।
ರಾಯನುದಿತೋದಯುಂ ಭಯುದ ಬಟ್ಟೆಯೊಳತಿ ।
ಪ್ರಾಯಾಸದಿಂ ನಡೆವ ಕಡುಹೇಡಿಯುಂತೆ ಸಚಿವಂಗೂಡಿ ನಡೆಯುತಿರಲು ॥ ೩೦ ॥
ಛಾಯಾಪುರುಷನೊರ್ವ್ವ ಮುಂದೆ ನಡೆದೆಯ್ದುತಿರ- ।
ಲೀಯಚ್ಚರಿಯುವನಾನೆಂದುಮೀಕ್ಷಿಸಿಯುರಿಯೆ- ।
ನೀ ಯಿಳೆಯೊಳೆಂದರಸಗಿಂತೆಂದು ಬಿನ್ನಪಂಗೆಯ್ದನಾ ಮಂತ್ರೀಶನು ॥
ರಾಯುಕೇಳಿವನದೃಶ್ಯಾಕರಣಮಂ ಕಲಿತ ।
ಮಾಯುದ ಸುವರ್ಣಖುರನಾಮದಂಜನಚೋರ- ।
ನೀಯೆಮ್ಮ ನಗರಿಯೊಳಗಾವದಿನದಿಂದಿರ್ಪನೆಂದರಿಪಿ ತಾಮಿರ್ವ್ವರು ॥ ೩೧ ॥
ತಳುವಲಾಬರುನೆಳಲ್ನಡೆಯುಲದರೊಡನೆಯ್ದು- ।
ಲಳುಕಿಯುವನತಿವೇಗದಿಂದ ನಡೆದಿಭ್ಯಕುಲ- ।
ತಿಲಕನರ್ಹದ್ದಾಸನೆಂಬವನ ಮನೆಯು ಬಾಗಿಲೊಳಿರ್ಪ ವಟತರುವಿನ ॥

ನೆಳಲೊಳಗಡಂಗೆ ತಾಮಿರ್ಪ್ಪರವನೇಕಡೆಗೆ ।
ತಳರ್ದನೆಂಬುದನರಿವೆನೆಂದಲ್ಲಿ ನಿಲುವನಿತ- ।
ರೊಳಗೆಂತಾರಂಜಿಸುವ ಕಾಂಚನಪ್ರಾಕಾರದೊಳಮೆಯ್ಯ ಜಗಲಿಯೊಳಗೆ ॥ ೩೨ ॥
ಆಶಾನಿತಂಬಿನಿಯರಂತೆ ಮಿತ್ರಶ್ರೀವಿ- ।
ಲಾಸವತಿ ಚಂದನಶ್ರೀ ಮನೋಹರೆ ಶೀಲ- ।
ವಾಸೆ ವಿಷ್ಣುಶ್ರೀ ಗುಣಾಬ್ಧಿ ನಾಗಶ್ರೀ ಸುಭಗೆ ಪದ್ಮಲತೆ ಪದ್ಮಿನಿ ॥
ಭಾಸುರಚರಿತ್ರನಿಧಿ ಕನಕಲತೆ ಕರುಣಾಂಬು ।
ರಾಶಿ ವಿದ್ಯುಲ್ಲತೆ ಸುಶೀಲನಿಧಿ ನವಮಂದ ।
ಹಾಸಮುಖಿ ಕುಂದಲತೆಯೆಂಬ ಪೆಸರ್ವಡೆದ ಸಜ್ಜನವೆಂಡಿರಾಯೆಣ್ಬರು ॥ ೩೩ ॥
ಸತ್ಯಸ್ವರೂಪೆಯರ್ಸದ್ಬುದ್ಧಿವಂತೆಯ- ।
ರ್ನಿತ್ಯನಿಯಮವ್ರತಾಚಾರಾನ್ವಿತೆಯರಕೃತ- ।
ಕೃತ್ಯೆಯರ್ಕುವಲಯದೊಳುನ್ನತ ಪತಿವ್ರತಾಗುಣಮಣಿವಿಭೂಷಣೆಯರು ॥
ಅತ್ಯಂತರೂಪರಸಿಕತೆ ಸದ್ವಿಲಾಸದೊಳ್- ।
ಪ್ರತ್ಯೇಕಮಾಯೆಣ್ಬರುಂ ನೋಡಿ ಭಾವಿಸಲ್ ।
ಪ್ರತ್ಯಕ್ಷ ರತಿಸರಸ್ವತಿಮಹಾಲಕ್ಷ್ಮಿಗೆಣೆಮಿಗಿಲೆನಿಸಿ ರಂಜಿಸುವರು ॥ ೩೪ ॥
ಆವೈಶ್ಯನವರೊಡನೆಯುಪ್ಪೋಪವಾಸಮಂ ।
ಭಾವಶುದ್ಧಿಯೊಳೊಸೆದು ಮಾಡಿ ಬಳಿಕಿಂತೆಂದ- ।
ನಾವಲ್ಲಭೆಯರೊಳೆಲೆ ಸತಿಯರಿರ ನಮ್ಮರಸಿನಾಜ್ಞೆಯಿಂದೀ ನಗರಿಯಾ ॥
ಸ್ತ್ರೀವೃಂದಮೆಲ್ಲ ಪೊರವೊಳಲ ಬನಕೆಯ್ದಿತ್ತು ।
ನೀವಿಲ್ಲಿ ತಡಮಾಡದೇ ಹೋದೊಡಾನೀ ಜಿ- ।
ನಾವಾಸದಲ್ಲಿ ಜಾಗರಮಿರ್ಪ್ಪೆನಲ್ಲದೊಡೆಯುಪರಾಧವೆಮಗಪ್ಪುದು ॥ ೩೫ ॥
ಎಂದ ನುಡಿಗಿಂತೆಂದರವರೆಲೇ ಸ್ವಾಮಿ ಈ ।
ನಂದೀಶ್ವರದ ನೋಂಪಿಯುಪ್ಪೋಪವಾಸಮಂ ।
ಸಂದ ಭಕ್ತಿಯೊಳಿದ್ರ್ದು ಮತ್ತಮೀಪುಣ್ಯತಿಥಿಯೊಳಗೆ ಜಾಗರಮನಿರದೆ ॥
ನಂದನಕೆ ನಡೆಯೆ ಪಾಪಂ ಸಂಭವಿಸದೆಯದ- ।
ರಿಂದರಸುಮಾಡಿದುದ ಮಾಡಲಿ ನಾವುನಿ- ।
ನ್ನೊಂದಾಗಿ ಜಾಗರವನಿರ್ಪ್ಪೆವಲ್ಲದೆ ವನಕ್ಕೆಯ್ದುವುದು ನಮಗಾಗದು ॥ ೩೬ ॥
ಎಂದು ನುಡಿದಾಯೇಣನೇತ್ರೆಯರ ನುಡಿಗೆ ಮನ ।
ದಂದು ಹರ್ಷೋತ್ಕರ್ಷನಾಗಿ ಬಳಿಕಾ ವೈಶ್ಯ- ।
ವೃಂದಾರಕಂ ನುಡಿದನಿಂತೆಂದು ಜನತಾಧಿಪತಿ ಮಾಡಿದಾಜ್ಞೆಯಿಂದ ॥
ಬಂದ ವಿಘ್ನಂ ಬರಲಿ ಹಿಂದೆ ಮಾಡಿದ ಪಾಪ- ।
ದಿಂದಾದ ದುಃಖದಾವರಣಮಂ ನೀಗಬೇ- ।
ಕೆಂದು ನೀವುಸಿರಿದುತ್ತಮಮಪ್ಪ ವಚನಮದು ಲೇಸಾಯಿತೆಂದೆನುತ್ತ ॥ ೩೭ ॥

ಮತ್ತಮಾ ವೈಶ್ಯವಂಶಾಂಬರಸುಧಾಂಶು ಸ- ।
ದ್ವೃತ್ತಸಂಪನ್ನಗುಣನಿಧಿಗಳೊಳಂಗಿತೆಂದ- ।
ನುತ್ತಮದ ಮಾತು ನೀವೆಂದುದರ್ಹನ್ಮಾರ್ಗಮಂ ನಿಶ್ಚಯದೊಳು ನಂಬಿ ॥
ಅತ್ತಿತ್ತ ಚಿತ್ತಮಂ ಹರಿಯದಾಚರಿಸಿದವ- ।
ಗೆತ್ತಣದು ಪಾಪಮೆತ್ತಣದು ದುರ್ಗತಿ ತಾ- ।
ನೆತ್ತಣದು ಪರಬಾಧೆಯುದರಿಂದ ಜಿನಮಾರ್ಗವೇ ಮುಖ್ಯಕಾಣ ॥ ೩೮ ॥
ಎಂದು ನುಡಿದಾ ಬಳಿಯೊಳಿರ್ಪ ಜಿನಗೃಹಕೆ ಮನ- ।
ಸಂದು ನಡೆದರ್ಹತ್ಪದಾಂಬುರುಹಕತಿಭಕ್ತಿ- ।
ಯಿಂದ ಸತಿಯರುಸಹಿತ ಸಾಷ್ಟಾಂಗವೆರಗಿ ಕಲಶಸ್ಥಾಪನೆಯನು ಮಾಡಿ ॥
ಮಂದೇತರಪ್ರಮೋದದಿ ರುಚಿರಮಪ್ಪ ಜಲ- ।
ದಿಂದ ತನಿರಸದಿಂದ ಘೃತದಿಂದ ಘಟ್ಟಿವಾ- ।
ಲಿಂದ ಕೆನೆವೊಸರಿಂದ ಮನದಣಿವ ತೆರದಿನಭಿಷೇಕಮಂ ಮಾಡಿ ಬಳಿಕ ॥ ೩೯ ॥
ಉತ್ತಮೋದಕದಿನುತ್ತಮಮಪ್ಪ ಗಂಧದಿಂ- ।
ದುತ್ತಮಾಕ್ಷತೆಯಿನುತ್ತಮಸುರಭಿಕುಸುಮದಿಂ- ।
ದುತ್ತಮರಸಂ ಬಡೆದ ಪಂಚವಿಧಭಕ್ಷ್ಯದಿಂದುತ್ತಮದ ಮಣಿದೀಪದಿಂ ॥
ಉತ್ತಮದಶಾಂಗಧೂಪದಿ ಸುಧಾರಸಪೂರಿ- ।
ತೋತ್ತಮ ಫಲಾವಳಿಯಿನುತ್ತಮಾರ್ಘ್ಯದಿ ।
ಚಿತ್ತವಿತ್ತು ಮೃತ್ಯುಂಜಯನ ಪಾದಪಂಕೇರುಹಕ್ಕರ್ಚನಂಗೆಯ್ದು ಬಳಿಕ ॥ ೪೦ ॥
ವರಗಂಧಜಲಸಿದ್ಧಶೇಷೆಯಂ ಸಿರಿದಲೆಯೊ- ।
ಳಿರಿಸಿ ಮತ್ತಾ ವೈಶ್ಯಕುಲಲಲಾಮಂ ತನ್ನ ।
ತರುಣಿಯರೊಳಿಂತೆಂದನೀ ಧರ್ಮದೊಳ್ನಿಮಗೆ ಸಮ್ಯಕ್ತ್ವಮುದಯಮಾದ ॥
ಪರಿಯನೆನಗುಸಿರಿಮೆನಲಾ ಶೀಲನಿಧಿಗಳುರು- ।
ತರಹರ್ಷದಿಂದ ಕರಕಮಲಂಗಳಂ ಮುಗಿದು ।
ಪರಭೃತಾಲಾಪದಿಂದಾ ಪ್ರಾಣವಲ್ಲಭನೊಳಿಂತು ಬಿನ್ನಪಂಗೆಯ್ದರು ॥ ೪೧ ॥
ನಮಗೆ ಸದ್ಧರ್ಮದೊಳ್ ಸಮ್ಯಕ್ತ್ವಮಾದ ಸತ್ಕ್ರ- ।
ಮಮನುಸಿರುವೆವು ಕಡೆಯಲ್ಲಿ ನೀವೆಮಗೆ ।
ನಿಮಗೆ ಸಮ್ಯಕ್ತ್ವಸಂಭವಿಸಿದ ನಿಮಿತ್ತಮಂ ನಿರವಿಸಲ್ಬೇಕೆಂದೆನೆ ॥
ಮಮತೆಯಿಂದಿಂತೆಂದು ಪೇಳುತ್ತಮಿರ್ದ್ದನಾ ।
ರಮಣೀಜನಂ ಮರದ ನೆಳಲಡಿಯೊಳಿರ್ದ್ದ ಭೂ- ।
ರಮಣೀಶನಾ ಮಂತ್ರಿಯಾ ಕಳ್ಳನುಂ ಕೇಳ್ವ ತೆರದಿನರ್ಹದ್ದಾಸನು ॥ ೪೨ ॥
ಚಕಿತಮೃಗಶಾಬಲೋಚನದ ಚಂದ್ರಾನನದ ।
ಮುಕುಳಿತಸರೋರುಹಸ್ತನದ ಭೃಂಗಾಳಕದ ।
ಶುಕಶಿಶುಸಮಾನವಚನದ ವನಿತೆಯರ್ಕ್ಕೇಳಲಾ ಕಥೆಯನುಸಿರ್ದನಿಂತು ॥

ಅಕಲಂಕಚರಿತನಗಣಿತಗುಣಕರಂಡಕಂ ।
ಪ್ರಕಟಿತ ಯಶೋವಿಶದನನುಪಮಕಲಾನ್ವಿತಂ ।
ಸುಕವಿಜನವಿನುತನರ್ಹದ್ದಾಸಜಿನಸಮಯವಾರ್ಧಿವರ್ಧನಚಂದ್ರನು ॥ ೪೩ ॥

ಇದು ವಿಬುಧಜನವಿನುತಮಿದು ವಿಬುಧಜನವಿನತ- ।
ಮಿದು ವಿದಿತಜಿನಸಮಯಶರಧಿಸಂಪೂರ್ಣೇಂದು ।
ಸದಮಲಚರಿತ್ರ ಚೆಂಗಾಳ್ವಭೂವರನ ಸಚಿವಾನ್ವಯಾಂಬರಹಂಸನು ॥
ಮದನಸಮರೂಪನುತ್ತಮಗುಣಕರಂಡಕಂ ।
ಚದುರಮಂಗರಸನುಸಿರ್ದೀ ಕೌಮುದೀಕಥೆಯೊ- ।
ಳೊದವಿದುದು ಚಂದ್ರಿಕಾವಿಹರಣದ ವರ್ಣನಂ ಮೂರನೆಯ ಮಿಸುಪ ಸಂಧಿ ॥ ೪೪ ॥

ಅಂತು ಸಂಧಿ ೩ಕ್ಕೆ ಪದ ೨೦೦ ಕ್ಕಂ ಮಂಗಲಮಹಾ ॥

---



# ನಾಲ್ಕನೆಯ ಸಂಧಿ.



## ರೂಪ್ಯಖುರನ ಕಥೆ.

ಶ್ರೀಮದರ್ಹದ್ದಾಸವೈಶ್ಯವಿಭು ಪೇಳ್ದನಾ ।
ತಾಮರಸವದನೆಯರ್ಕೈಗಳಂ ಮುಗಿದು ಸು- ।
ಪ್ರೇಮದಿಂ ಕೇಳಲಾ ತನಗಾದ ವಿಮಲಸಮ್ಯಕ್ತ್ವದ ಮಹಾಕಥೆಯನು ॥ ಪಲ್ಲ ॥

ಈಮಧುರೆಯರಸು ನಮ್ಮುದಿತೋದಯನ ತಂದೆ ।
ಕಾಮನಿಭರೂಪನಾ ಪದ್ಮೋದಯಂ ಹೇಮ ।
ತಾಮರಸವದನೆ ಜಂಭಾವತೀಸುದತಿಯಂ ಕೂಡಿ ಸುಖಮಿರ್ಪ್ಪರಲ್ಲಿ ॥
ಈಮಂತ್ರಿಮುಖ್ಯನ ಸುಬುದ್ಧಿಯ ಪಿತಂ ಗುಣೋ- ।
ದ್ದಾಮಸಂಭಿನ್ನಮತಿಮಂತ್ರಿ ಸುಪ್ರಭೆಯೆಂಬ ।
ನಾಮದಂಗನೆಗೂಡಿಯರಸಗತಿಹಿತಕಾರ್ಯನಾಗಿ ಸುಖಮಿರ್ಪ್ಪನಲ್ಲಿ ॥ ೧ ॥

ಧಾರಿಣಿಗತಿಪ್ರಸಿದ್ಧಂ ರೂಪ್ಯಖುರನಾಮ ।
ಧಾರಿಯೀವರ್ತಿಪ ಸುವರ್ಣಖುರನೆಂದೆಂಬ ।
ಚೋರನ ಜನಕನಂಜನಾದಿ ವಿದ್ಯಾನಿಪುಣನಾರೂಪ್ಯಖುರೆಯೆಂಬಳು ॥
ನಾರಿತನಗಾಗೆ ಸಪ್ತವ್ಯಸನದಲ್ಲಿ ಮನ- ।
ವಾರೆಯಾಚರಿಸುತಿರ್ದ್ದೊಂದು ದಿನದಲ್ಲಿ ಯಿಾ ।
ಊರಂಗಡಿಯೊಳು ಜೂಜಾಡಿಸೋಲ್ತತಿವಿತ್ತಮಂ ಕ್ಷುಧಾಪೀಡನಾಗಿ ॥ ೨ ॥

ಭರದಿ ಮನೆಗೆಯ್ದಿ ಉಣಬೇಕೆಂದು ನಡೆದು ಬರು- ।
ತರಮನೆಯ ಬಾಗಿಲೊಳ್ಪಂಚವಿಧಪಾಕಬಂ- ।
ಧುರಸುರಭಿವಾಯು ತೀಡುತ್ತಿರಲದಂ ವಾಸಿಸುತ್ತಮೀ ಪೊಸತೆನಿಸುವ ॥
ಪರಿಮಳವನೆಂದುಕಂಡರಿಯೆನಾನಿಂತಿದರ ।
ಪರಿಯನರಿವುದಕಾವ ಗಹನಮಿದು ನನಗೆಂದು ।
ದುರುಳನಾ ಗಾಳಿವಟ್ಟೆಯೊಳು ನೃಪಗೃಹಕದೃಶ್ಯಂಬಡೆಯುತೊಳಹೊಕ್ಕನು ॥ ೩ ॥

ತುಂಬಿದ ತಟಾಕಕಿಕ್ಕಿದ ತುಂಬುನುಚ್ಚಿಲಾ ।
ಅಂಬು ಘುಳುಘುಳನೆ ಪೊರಮಡುವಂತೆ ಭೂಪಾಲ- ।
ನಿಂಬುವೆತ್ತೋಲಗದಿನೆಳ್ವವಸರದೊಳು ರಣಮಂಡಲದ ಮಣಿವಾಗಿಲು ॥
ತುಂಬಿ ಪೊರಮಡುವ ಪುರವಟಿಗರಡಪವಳರ ಯ- ।
ಳಂಬಾಯತರ ನಚ್ಚಣಿಗರ ಪಡಿಯರರ ನಿಕು- ।
ರುಂಬದೆಡೆಯತಿಚತುರತನದಿಂದ ಹೊಕ್ಕನಾ ಅರಮನೆಯನಾ ಚೋರನು ॥ ೪

ಸಾಲುವಿಡಿದೆಸೆವ ವಾರಣಶಾಲೆ ನವವಾಜಿ- ।
ಶಾಲೆ ಬಹುವಿಧಶಸ್ತ್ರಶಾಲೆ ರಂಜಿಪ ಕರಣ- ।
ಶಾಲೆ ನಾಟಕಶಾಲೆ ನಾನಾತೆರದ ಶಾಸ್ತ್ರಶಾಲೆ ಸನ್ಮಂತ್ರಶಾಲೆ ॥
ಓಲಗದಶಾಲೆ ಮಜ್ಜನಶಾಲೆ ಭೋಜನದ ।
ಶಾಲೆಗಳ ಮುಂದೆ ಪಜ್ಜಳಿಪ ರನ್ನದ ಪಟ್ಟ- ।
ಶಾಲೆಗಳ ನೆಳಲುವಿಡಿದಾ ದುಷ್ಟನೆಯ್ತಂದನಾರ ಮೈಸೋಂಕದಂತೆ ॥ ೫ ॥
ಮಜ್ಜನದ ಭೋಜನದ ಬೊಕ್ಕಸದ ನರ್ತನದ ।
ಸಜ್ಜನದ ಸರ್ವವಿಧಧೂಳಿಗಂ ಮೊದಲಾದ ।
ಕಜ್ಜಳಾಕ್ಷಿಯರ ಸೌಂದರ್ಯ್ಯ ಲಾವಣ್ಯ ಕಣ್ಗೊಳಿಸುವೇರುಂಜವ್ವನ ॥
ಪಜ್ಜಳಿಪ ತೊಡವನಾ ಮುಡಿಯಾದಿಯಾಗಿ ಕೆಂ- ।
ಬಜ್ಜವರ ನಡೆನೋಡುತುಂ ನಡೆದನಾಗ ನಿ- ।
ರ್ಲಜ್ಜಾಹೃದಯನಾರುಮರಿಯದಂದದಿ ಮಹೀಪಾಲಕನ ಮಂದಿರದೊಳು ॥ ೬ ॥
ಮುಡಿಗೆ ಮುಗುಳಂ ಮುಡಿವ ಮುಗ್ಧಾಕ್ಷಿಗಂಜನಮು- ।
ನಿಡುವ ಮೂಗಿಂಗೆ ಮೂಗುತಿಯನಿಕ್ಕುವ ಕುಚಕೆ ।
ಬಿಡುಮುತ್ತಿನೆಕ್ಕಾವಳಿಯನು ಕಟ್ಟುವ ಕೈಗೆ ಕಂಕಣಂಗಳ ತುಡಿಸುವಾ ॥
ನಿಡುವೆರಲ್ಗುಂಗುರಮನನುಗೊಳಿಸುವುಡಿಗೊಪ್ಪು- ।
ವುಡೆಯನುಡುವುತ್ತಮದಕಾಂಚಿಯಂ ಕಟಿತಟಕೆ ।
ತೊಡಚುವಡಿಗಲತಿಗೆಯನೂಡುವಬಲೆಯರ ನೋಡುತ್ತಲವನೆಯ್ತಂದನು ॥ ೭ ॥
ಚಂದ್ರಲೋಕಮನೆಯ್ದುವಂತೆ ನಗೆಮೊಗೆವ ನಾ- ॥
ಗೇಂದ್ರಲೋಕಮನೆಯ್ದುವಂತೆ ಘನವೇಣಿಯ ಮೃ- ।
ಗೇಂದ್ರಲೋಕಮನೆಯ್ದುವಂತೆ ಬಂಧುರತೆಯುಂಬಡೆದ ಕಡು ಬಡನಡುವಿನ ॥
ಇಂದ್ರಲೋಕಮನೆಯ್ದುವಂತೆ ಊರ್ವಸಿರಂಭೆ ।
ಯಿಂದ್ರಾಣಿಗೆಣೆಯೆನಿಸಿ ಕಣ್ಮನಂಗೊಳಿಪ ಮನು- ।
ಜೇಂದ್ರನಂತಃಪುರದ ಸತಿಯರ ಸಮೂಹದೊಳಹೊಕ್ಕವಂ ನಡೆತಂದನು ॥ ೮ ॥
ಎಣಿಕೆ ಮನದೊಳಗಿಲ್ಲದೆದೆಹೊಯ್ಲುತನದಿನೊ- ।
ಳ್ಳಣಿಸಿನಡುಗೆಯ ಬೋನಮಂ ಪಿಡಿದು ನಡೆದು ಸಂ- ।
ದಣಿಸಿದುತ್ತಮರೂಪವತಿಯರೊಂದಾಗಿ ಭೋಜನಶಾಲೆಗೆಯ್ದಿಬಳಿಕ ॥
ಮಣಿದೀಪವಿಕ್ಕೆಲದೊಳುರಿಯೆ ನವರತ್ನದ- ।
ಡ್ಡಣಿಗೆಯೊಳ್ತಟ್ಟೆಬಟ್ಟಲನಿಟ್ಟು ಹೊನ್ನಹರಿ- ।
ಯಣಮುಂದೆ ಧಗಧಗಿಸುತಿರಲಲ್ಲಿ ಕುಳ್ಳಿರ್ದ್ದ ಭೂಪಾಲನಂ ಕಂಡನು ॥ ೯ ॥
ಹೊಸಹೊನ್ನಪಾತ್ರೆಯೊಳಗಾ ಭೂಪನರಸಿಯರು ।
ದೆಸೆದೆಸೆಗೆ ಕಂಪಿಸುವ ಕಲಸಿದುಪ್ಪಿನಕಾಯಿ ಬಿಸಿ- ।
ಯುಸನ ತೊಯೆತುಪ್ಪಂ ತಾಳಿಲಪಳಿದ್ಯ ಕಜ್ಜಾಯ ಸಕ್ಕರೆಪಾಯಸ ॥

ರಸರಸಾಯನಕಟ್ಟುಗೂಳು ಚಿಲುಪಾಲು ಕೆನೆ- ।
ಮೊಸರೆಂಬಿವಂ ಬಡಿಸುವುದ ಕಂಡು ಬಾಯಿನೀ- ।
ರೊಸರಿಯಿದರಿಂದ ಬಂದುದ ಕಾಣ್ಬೆನೆಂದು ಮತ್ತಾಯೆಡೆಯು ಮುಂದಕೆಯ್ದಿ ॥ ೧೦ ॥
ಅರಸನಾರೋಗಿಸುವ ಕೈ ಕರಂ ಸೋಂಕದಂ- ।
ತುರುಮುದದಿನುಣಬಡಿಸುವುತ್ಪಲವಿಲೋಚನೆಯು- ।
ರರುಣಪಲ್ಲವಪಾಣಿತಳದ ಮಿಸುನಿಯಪಾತ್ರೆಯೊಂದಿನಿಸು ಮುಟ್ಟದಂತೆ ॥
ತರಹರಂಗೊಂಡುದತ್ತಾವಧಾನದೊಳೊಂದು ।
ಹೊರೆಯಲ್ಲಿ ಕುಕ್ಕರಿಸಿ ಕುಳ್ಳಿರ್ದ್ದವಂ ತನ್ನ ।
ಹಿರಿದಾಗಿ ಹಸಿದ ಬಸಿರೊಡೆವಲ್ಲಿಪರಿಯಂತವತಿಚತುರತನದೊಳುಂಡು ॥ ೧೧ ॥
ಮಂದಿರಕೆ ಬಂದು ಕುರಿ ಬಾಳೆವಣ್ಣಂ ಮೆಚ್ಚಿ- ।
ದಂದದೊಳು ದಿನಬಂಜೆವಡೆಯದೆದೆದುಡುಕಿಲ್ಲ- ।
ದೊಂದಾಗಿ ದಣಿಯುಣುತ್ತಾಖಳಂ ಪೋಗುತಿರಲಿದರಿಂದ ಭೂಪಾಲಸು ॥
ಎಂದಿನಂದದೊಳು ಸಂಪೂರ್ಣಭೋಜನವಡೆಯ ।
ದಂದಮಂ ಸುವ್ವಾರರೊಳ್ಪೇಳ್ವುದಂ ನಾಣ್ಚಿ- ।
ಯೊಂದೊಂದು ದಿನದಿನಕ್ಕೊಂದೊಂದು ಹೊರೆಯಡಗಿ ಮೈ ಕರಂ ಬಡವಾದುದು ॥೧೨॥
ಇಂತಾದುದಂ ಕಂಡು ಸಂಭಿನ್ನಮತಿಮಂತ್ರಿ ।
ಚಿಂತೆಯಿಂ ಕರಕಮಲಮಂ ಮುಗಿದು ಎಲೆ ಮಹೀ- ।
ಕಾಂತ ನಿನ್ನಂಗವೇಂ ಕಾರಣದಿ ದಿನದಿನಕೆ ಕೃಷ್ಣಪಕ್ಷದ ಚಂದ್ರನಾ ॥
ಕಾಂತಿಯಂತಾಗುವುದನುಸಿರಬೇಕೆನಲಾತ- ।
ಗಿಂತೆಂದನಾ ನೃಪತಿ ಕಿರಿದು ಪಗಲಿಂದ ತಣಿ- ।
ವಂತೂಟಮಂ ಮಾಳ್ಪುದಕ್ಕಶನಮಿಲ್ಲವದರಿಂದ ತನುತನುವಾದುದು ॥ ೧೩ ॥
ನಯಹೀನನಾದ ನರನಾಥನಾಳುವ ನಾಡು ।
ದಯೆಯಿಲ್ಲದಾ ತಪಸಿ ಮಾಡುವ ತಪಂ ಜಲಾ- ।
ಶ್ರಯುದ ಹವಣಿಲ್ಲದಾ ಬೆಳಸು ನೆರೆ ಜೀವಿತಂಬಡೆಯದಾ ಭಟಸಂತತಿ ॥
ಲಯಮಾಗದೇ ಸುಮ್ಮನಿರ್ಪ್ಪುದಿಲ್ಲದರಂತೆ ।
ನಿಯುತದಿಂದುಂಬುಣಿಸು ಕಡಿಮೆಯಾದೊಡಲು ನಿ- ।
ಶ್ಚಯದಿಂದ ಜಯಮಪ್ಪುದೋ ಜಯಂಬಡೆಯದೋ ಎಂದು ತಿಳಿವುದು ಚತುರರು ॥೧೪॥
ಎನೆ ಕೇಳಿ ಸುವ್ವಾರರಂ ಕರಸಿ ನೃಪಗೆ ತ- ।
ಕ್ಕನಿತಶನಮಂ ಮಾಳ್ಪುದಿಲ್ಲವೇ ಪೇಳಿಮೆಂ- ।
ದೆನಲಿಂತು ನುಡಿದರವರೆಂದಿನಂದದಿನಲ್ಲದೇ ಕಿರಿದುಮಾಳ್ಪುದಿಲ್ಲ ॥
ಜನಪತಿಗೆ ತೃಪ್ತಿವಡೆಯದುದೆಮ್ಮ ಪಾಪಫಲ- ।
ವೆನೆ ಮಂತ್ರಿಯರಸಂಗೆ ಭಸ್ಮಕವ್ಯಾಧಿ ಸಂ- ।
ಜನಿಸಿತೋ ಎಂದು ಕಟ್ಟೇಕಾಂತದೊಳ್ಕೇಳಲಿಂತೆಂದು ನುಡಿದನಾಗ ॥ ೧೫ ॥

ಏನೆಂದರಿಯೆ ಮಂತ್ರಿ ಪರಿಯಣಕೆ ಬಂದಶನ- ।
ಮಾನಾಲ್ಕರೊಳಗೊಂದು ಭಾಗೆಯಲ್ಲದೆ ಬಳಿ- ।
ಕ್ಕಾನಲ್ಲಿ ಕಯ್ಯನಿಡುವನಿತರೊಳಗುಳಿದುದೆಲ್ಲಂ ಮಾಯುಮಪ್ಪುದೆನಲು ॥
ಆ ನುಡಿಗೆ ಭೂತವೊಡನುಂಬುದೆಂದೆಂಬಿವೇ ।
ಭೂನಾಥ ಕೇಳ್ನೋಡಿದ ಮಾತ್ರದೊಳ್ ತೃಪ್ತಿ ।
ತಾನವಕ್ಕಲ್ಲದೇ ಉಣಿಸೆಂಬುದಿನಿಸಿಲ್ಲಮೆಂದು ಬಳಿಕಿಂತೆಂದನು ॥ ೧೬ ॥
ಇದು ಮನುಷ್ಯರ ಕಪಟಮಲ್ಲದೇ ಪೆರತಿಲ್ಲ- ।
ಮಿದಕೆಣಿಸುವುದಕೆ ಸಾಮರ್ಥ್ಯರಾರಂ ಕಾಣೆ- ।
ನಿದನದೃಶ್ಯಂಬಡೆವರಲ್ಲದೆ ಮಾಡರಾ ವಿದ್ಯೆಯೀ ಊರೊಳಿರ್ಪರ್ ॥
ಮದಯುತಂ ರೂಪ್ಯಖುರನಲ್ಲದುಳಿದವಗ್ಗಿಲ್ಲ- ।
ಮಿದನುಜ್ಜುಗಿಸುವೊಡಿಂತಿನಿಸು ಹೇಸುವನಲ್ಲ- ।
ವದರಿನವನೇ ತಪ್ಪದೆಂದು ಭಾವಿಸಿ ಮಂತ್ರಿಯರಸಿನೂಟದ ಮನೆಯೊಳು ॥ ೧೭ ॥
ಎಕ್ಕದ ಮುಗುಳ್ಗಳಂ ಹರಹಿ ಜಗಜಿಟ್ಟಿಗಳ- ।
ನೆಕ್ಕತುಳದಾಳ್ಗಳಂ ಮರೆಯೊಳಡಂಗಿಸಿ ಬ- ।
ಳಿಕ್ಕ ಘಟದಲ್ಲಿ ಕೆಂಡವನಿರಿಸಿಯರಸನಂ ಕುಳ್ಳಿರಿಸಲಾ ಕಳ್ಳನು ॥
ಹೊಕ್ಕು ಕಾಲಿಡುವಾಗಲವು ಛಣಿಲ್ಛಟಿಲೆನಲ್- ।
ಸಿಕ್ಕಿದೆಯಲಾ ಎಂದು ಬಲಿದು ಕದವಂ ಕೆಂಡ- ।
ಮಿಕ್ಕೆ ಧೂಪವನು ತದ್ಧೂಮದಿಂದವನ ಕಣ್ಣಂಜನಂ ಕರಗಲಾಗ ॥ ೧೮ ॥
ಕಂಡವನ ರೂಪನೆಲವೋ ಪಾತಕಾ ಧರಾ- ।
ಮಂಡಲದೊಳಾರೆಣಿಕೆ ಮಾಡದುದನೀ ಮನಂ- ।
ಗೊಂಡು ಮಾಡಿದೆಯೆಲಾ ಎಂದು ಮೂದಲಿಸುತಾ ಮಲ್ಲರಿರದೆಯ್ದಿ ಹಿಡಿದು ॥
ದಿಂಡುಗೆಡೆವಂತೆ ವೊಳಗುದ್ದು ಹೊರಗುದ್ದಿಕ್ಕಿ ।
ದಂಡಿಸಿ ಬಳಿಕ್ಕ ಬಲುಹೂನಿ ಹೆಡಗುಡಿಗಟ್ಟಿ- ।
ಕೊಂಡು ಬರ್ಪಾಗಳುದ್ದಂಡನಾ ರೂಪ್ಯಖುರನಿಂತು ಚಿಂತಿಸಿದನಾಗ ॥ ೧೯ ॥
ಉರಿವ ಬೇಸಗೆಯು ಮಧ್ಯಾಹ್ನದೊಳ್ಮರಧಾರೆ ।
ಸುರಿಯುತಾ ಸೊಕ್ಕಿಂದ ಬಾಯಾರಿ ಬಂದೊಂದು ।
ಸರಸಿಜಾಕರಮನೀಕ್ಷಿಸುತಲ್ಲಿ ಚೆನ್ನಾಗಿ ತುಂಬಿದಾ ಕೆಸರಮೇಲೆ ॥
ಪರಿಕಲಿಸಿಕೊಂಡಿರ್ದ್ದ ಸೆಳೆನೀರನೇ ಕಂಡು ।
ಪರಿಪೂರ್ಣ ಜಲಮೆಂದು ಹೊಕ್ಕು ತಾನದರೊಳಗೆ ।
ಪಿರಿದು ಜಿಂಹ್ವಾಲಂಪಟತ್ವದಿಂ ಬಿಳ್ದ ಕರಿಯುವೊಲಾದುದೆನ್ನ ಕಾರ್ಯ ॥ ೨೦ ॥
ಎಂದು ತಾನೆಸಗಿದಾ ಕಾರ್ಯ್ಯಕ್ಕೆ ತಾನೆ ಮನ- ।
ನೊಂದು ಚಿಂತಿಸುತ ಬರ್ಪಾಗಳಾ ರೂಪ್ಯಖುರ- ।
ನಂದಮಂ ನೋಡಬೇಕೆಂದೆನುತ್ತಾ ಊರಕೇರಿಯು ಜನಂಗಳೆಲ್ಲ ॥

ಬಂದು ಕೈವೊಯ್ದುಟ್ಟಹಾಸದಿಂ ನುಡಿದರಿಂ- ।
ತೆಂದು ಕೋಳಿಯತತ್ತಿಯುರುಳಿಗೊಳಗಾಗಿ ನಿಂ- ।
ದಂದವಾಯ್ತೀ ಲಂಡನಿರವೆಂದು ತಾವೊಂದು ಕಥೆಯುನಿಂತೆಂದರಾಗ ॥ ೨೧ ॥
ಒಂದು ನಗರಿಯೊಳೊರ್ವ್ವ ನರಪತಿಯ ಮಗಳು ರೂ- ।
ಪಿಂದ ಮನಸಿಜನ ಮಾನಿನಿಗೆ ವೆಗ್ಗಳವಾಗಿ ।
ವೊಂದು ವಿದ್ಯಾಮಂಟಪದೊಳೋದುತಿರಲಲ್ಲಿಗೊರ್ವ್ವ ಭಿಕ್ಷುಕಪಾರ್ವ್ವನು ॥
ಬಂದು ಕಂಡಾಸಕ್ತನಾಗಿ ನನ್ನೀ ಜಾಣ್ಮೆ- ।
ಯಿಂದಿವಳ ಕೊಂಡು ಪೋಗುವೆನೆಂದು ನೃಪನೆಡೆಗೆ ।
ಬಂದು ಹಸನಾಗಿಯಾಶೀರ್ವಾದಮಂ ಮಾಡಲಿಂತೆಂದನಾ ಭೂಪನು ॥ ೨೨ ॥
ನಿನಗಾವ ಶಾಸ್ತ್ರ ಬಹುದೇನುಕಾರಣ ಬಂದೆ ।
ಯೆನಲೆಂದನಾಂ ನಷ್ಟಮುಷ್ಟಿಚಿಂತನೆಯುಮಂ ।
ವಿನುತ ಸಾಮುದ್ರಿಕಂ ಮೊದಲಾದ ಸರ್ವಶಾಸ್ತ್ರವನರಿವೆನದುಕಾರಣ ॥
ಮನುಜೇಶ ನಿನ್ನ ಮಕ್ಕಳನೆಲ್ಲರಂ ಕರೆಯಿ- ।
ಸೆನುತವರನೆಲ್ಲರಂ ಕರಸಿಯುವರಂ ನೋಡಿ ।
ತನಗಲ್ಲದವರನೊಳ್ಳಿತ್ತೆಂದು ತನಗೆ ಬೇಕಾದವಳನಿಂತೆಂದನು ॥ ೨೩ ॥
ಇವಳ ಮೆಯ್ಯೊಳಗೆಯವಲಕ್ಷಣವೆ ಸಂಪೂರ್ಣ- ।
ಮಿವಳುದಯಿಸಿದ ಮನೆಯುಮಿವಳ ತಂದಾ ಮನೆಯು- ।
ಮಿವಳು ಮೈನೆರೆವ ಸಮಯದೊಳೆ ಹಾಳಾಗುವುದೆ ಸತ್ಯಮೆಂದದಕ್ಕೆ ತಕ್ಕ ॥
ಹವಣಾಗಿ ಶಾಸ್ತ್ರಮಂ ಕಪಟದಿಂ ಹೊಸೆದು ಬುಧ- ।
ನಿವಹಮೆಲ್ಲಂ ಮೆಚ್ಚುವಂದದಿಂದೋದಲಾ ।
ಅವನೀಶನಂತದಕೆ ಬೆದರಿಯಾ ಪಾರ್ವ್ವನೊಳಗಿಂತೆಂದು ನುಡಿದನಾಗ ॥ ೨೪ ॥
ಪರಿಹರಮಿದಕ್ಕಾವುದೆನಲಿಂತು ನುಡಿದನಾ ।
ಪರಿಹರಮಿದಕ್ಕುಂಟು ಪೇಳಲಂಜುವೆನೆನ- ।
ಲ್ಪಿರಿಯರ್ರೈ ನಿಮಗೇಕೆ ಭೀತಿಯಿದನೊರೆಯಿಮೆನಲೊಂದು ಮಂದಸಿನೊಳಿವಳಾ ॥
ಇರಿಸಿ ಯೀ ಮುಂದಣಮವಾಸೆಯೊಳಗೀ ನಗರಿ- ।
ಯರುಗೆಹರಿವೀ ಗಂಗೆಯೊಳಗೆ ಬಿಟ್ಟೊಡೆ ದೋಷ ।
ಬರದು ನಿಮಗೆನಲದಕೊಡಂಬಟ್ಟು ಕಳುಹಲಾ ಪುರವ ಪೊರಮಟ್ಟು ಬಂದು ॥ ೨೫ ॥
ತಳುವದಾ ಭಿಕ್ಷುಕಂ ತಾ ಮೊದಲು ಕುರಿತ ದಿನ ।
ದೊಳಗೆಯಾ ಪುರಕೆ ಯಿಗ್ಗಾರ್ವುದಂ ಪೋಗಿಯಾ ।
ಪೊಳೆಯೊಳಾ ಮಂದಾಸು ಬರ್ಪ್ಪ ದಾರಿಯೊಳೆಳಸಿಕೊಂಡಿರ್ಪ್ಪಗಳು ॥
ಇಳೆಗೀಶನಿತ್ತಲವನೊರೆದಂತೆ ಮಂದಾಸಿ- ।
ನೊಳಗೆ ಸುಕುಮಾರಿಯಂ ಕೂಡಿ ಬಳಿಕಾ ಹರಿವ ।
ಹೊಳೆಯಲ್ಲಿ ಬಿಡಿಸಲೆಡೆವಳೆಯಲ್ಲಿಯೊರ್ವ್ವ ಭೂಪಾಲಕಂ ಬೇಂಟೆವಂದು ॥ ೨೬ ॥

ಒಂದು ಹುಲಿಯುಂ ಹಿಡಿದುಕೊಂಡು ಕಡುಬಾಯಾರಿ ।
ಮುಂದೆ ಪರಿವಾ ಹೊಳೆಯಲ್ಲಿ ಕಂಡಲ್ಲಿಗೆಯ್ದಲಾ ।
ಮಂದಾಸು ನಳನಳಿಸಿ ಬರುತಿರಲದಂ ತರಿಸಿಯಲ್ಲಿರ್ದ್ದ ಸುಕುಮಾರಿಯಾ ॥
ಸೌಂದರ್ಯ್ಯಮಂ ನೋಡಿ ಕೆಲದೊಳಿರ್ದ್ದಕ್ಷರಗ- ।
ಳಿಂದರಸುಮಗಳೆಂಬುದಂ ತಿಳಿದು ಮುದದಿಂದ ।
ಮಂದಾಸಿನೊಳಗಾ ಹುಲಿಯುಂ ಕೂಡಿ ಹೊಳೆಯೊಳು ಬಿಡಿಸಿಪೋದನಿತ್ತ ॥ ೨೭ ॥
ತಾನಿರ್ಪ್ಪ ಹೊಳೆಯ ತಡಿಗೆಯ್ದಲಾ ಮಂದಾಸು ।
ನಾನಂದುಮಾಡಿದುತ್ತಮ ಸುಕೃತಫಲದಿಂದ- ।
ವಿೂ ನಾರಿ ಕೈಸೇರ್ದಳೆಂದದಂ ಪಿಡಿದು ಭರದಿಂದ ಮುಚ್ಚಳವ ತೆಗೆದು ॥
ಸಾನಂದದಿಂದ ತೆಗೆವಾಗ ಮೇಲ್ವಾಯೆ ಕಂ- ।
ಡೇನಬಲೆಯುುಗುರನಿಕ್ಕುವೊಡಿದೇ ವೇಳೆ ನಿನ- ।
ಗೇನಿಂತಿದೇಕೆ ತವಕೆಪೆಯೆಂಬ ಪಾರ್ವ್ವನಂ ಪುಲಿ ಮುರಿದು ತಿಂದುದಾಗ ॥ ೨೮ ॥
ಎಂದೆಂಬ ತೆರನಾಯಿತೀ ರೂಪ್ಯಖುರಚೋರ- ।
ನಂದಮೆಂದಾ ಪುರಜನಂ ನುಡಿಯುತಿರಲು ಮುನಿ- ।
ಸಿಂದ ಭೂಪತಿಯವನ ಶೂಲದೊಳಗಿಕ್ಕಿಸಿ ಬಳಿಕ್ಕವನ ಬಳಿಗಾವವಂ ॥
ಬಂದು ನುಡಿಸಿದೊಡವನೆ ಆ ರೂಪ್ಯಖುರಚೋರ- ।
ನಿಂದ ವೆಗ್ಗಳದ ರಾಜದ್ರೋಹಿಯಾ ಖಳನ ।
ಕೊಂದು ಮನೆಯುಂ ಸೂರೆಗೊಳಬೇಕೆನುತ ಕಾವಲನಿಕ್ಕಿದಂ ಭಟರನು ॥ ೨೯ ॥
ಅನಿತರೊಳು ನಮ್ಮ ನಿಜಜನಕ ರಾಜಶ್ರೇಷ್ಠಿ ।
ಜಿನದತ್ತನೀ ಪುರದ ಬನದ ಸಾಸಿರಕೂಟ ।
ಜಿನಗೃಹಕೆ ಪೋಗಿಯಭವಂಗೆ ಅಭಿಷೇಕ ಪೂಜೆಯನೊಸೆದು ಮಾಡಿ ಬಳಿಕ ॥
ಜಿನಚಂದ್ರಭಟ್ಟಾರಕರನು ವಿನಯದೊಳು ವಂ- ।
ದನೆಗೆಯ್ದು ನಿಜನಿವಾಸಕ್ಕೆ ಬರ್ಪ್ಪಾಗ ನಾ- ।
ನನುರಾಗದಿಂದೊಡನೆ ಬರುತ ಕಟ್ಟೆದಿರೊಳಿರ್ದ್ದಾ ಚೋರನಂ ಕಂಡೆನು ॥ ೩೦ ॥
ಎಲೆ ತಂದೆಯಿೂ ಶೂಲವೇರಿಯುರೆಮುಗುಳ್ದಕ್ಷಿ ।
ಹಲವು ಕದುಕೇರಿನಿಂ ಸುರಿವರುಣಜಲದಬ್ಬು- ।
ದಲೆಯುನಾಡುವ ಹಸ್ತಪಾದ ಕೆದರಿದ ಕೇಶ ಕಂಠಗತಮಾದ ಹರಣ ॥
ಬಲಹೀನನಾಗಿಯುಂ ಕಃಬುಬೆಂದು ಕೂಗುವೀ ।
ಬಲುಗೆಯ್ಯನಿವನಾರೆನಲ್ಕಿವಂ ಚೋರನನೆ ।
ಮಲಮಲನೆ ಮರುಗಿ ನಾನಿವಗೇತರಿಂದ ಶೂಲಪ್ರಾಪ್ತಿಯಾಯಿತೆನಲು ॥ ೩೧ ॥
ಅಣುಗ ಕೇಳ್ಪೂರ್ವಜನ್ಮದೊಳುಪಾರ್ಜಿಸಿದ ಭೀ- ।
ಷಣಕರ್ಮದುದಯದಿಂದಿಂತಾಯಿತೆನಲು ಧಾ- ।
ರಿಣಿಯೊಳಿವನಾರ್ಗ್ಗಗೋಚರ ವಿದ್ಯೆಯೊಳ್ಳಿ ಪುಣನೆಂಬರಿವನೀ ವಿಧಿಯೊಳು ॥

ಸೊಣಗನುಣಿಸಾದನಲ್ಲಾ ಎನಲ್ಕೆಂದನಾ ।
ಫಣಿಭೂಷಣನು ಶೂಲವೇರನೇ ಲೋಕರ- ।
ಕ್ಷಣದಕ್ಷಲಕ್ಷ್ಮಿಯಧಿಪತಿಯುಳಿದ ನಾಡುಗರ ಪಾಡೇನು ಕೇಳ್ಳೆಂದನಾ ॥ ೩೨ ॥
ಎಂದುಸಿರ್ದ ವೈಶ್ಯಕುಲತಿಲಕಗಾ ಚೋರನಿಂ- ।
ತೆಂದನೆಲೆ ಜಿನದತ್ತನೀ ಕೃಪಾಸಾಗರಂ ।
ಮಂದರಸಮಾನ ಧೀರೋದಾತ್ತ ಮನುಚರಿತ ಕೇಳಾನುಬಾಯಾರಿದೆಂ ॥
ತಂದುಕೊಡು ನೀರನೆನಲವನಿಪ ದ್ರೋಹಿಯುದ- ।
ರಿಂದುದಕಮಂ ನಿನಗೆ ತಂದೀವುದುಚಿತಮ- ।
ಲ್ಲೆಂದೆಂಬ ನಮ್ಮಯ್ಯ ಜಿನಚಂದ್ರಗಾ ಚೋರನಿಂತು ನೀತಿಯನುಸಿರ್ದನು ॥ ೩೩ ॥
ಒಡಲಹೊಕ್ಕಾ ವೊಡಲೊಳುದಯಿಸುವ ರೋಗಮಂ ।
ಕೆಡಿಸಿ ದೇಹಿಗಳಿಗುಪಕಾರಮಂ ನೆರೆಮಾಡು- ।
ವೆಡೆಯಲ್ಲಿ ನಮಗೆ ಕೇಡಪ್ಪುದೆಂಬುದನು ಭಾವಿಸಿದುವೇ ಭೈಷಜಗಳು ॥
ಕಡಲನೀರಂ ತಂದು ಕೆಡುವ ಬೆಳಸಂ ಸಲಹು- ।
ವೆಡೆಯಲ್ಲಿ ನಾವು ಕರಗುವೆವೆಂದುವೇ ಮುಗಿ- ।
ಲ್ಸಡಗರದಿ ಸಜ್ಜನರು ಲೋಕೋಪಕಾರದಿಂ ಕೇಡು ನಮಗಹುದೆಂಬರೇ ॥ ೩೪ ॥
ಅರಸಗಾವಂ ದ್ರೋಹಿಗವನಿಗತಿಹಿತದ್ರೋಹಿ ।
ನಿರುತಮಾದೊಡಮೇನೊ ನೀನೆ ಲೋಕಕ್ಕೆ ಬಂ- ।
ಧುರದಯಾಮೂರ್ತಿಯದುಕಾರಣದಿ ನಿನ್ನ ಸದ್ಗುಣವನೇ ಮೆಗೆಯುಬೇಕು ॥
ವರತೀಕ್ಷ್ಣವದನದಿಂ ಛಿದ್ರಮಂ ಸಲೆ ಪಡೆದು ।
ಧರಣೀತಳಕ್ಕೆ ಯತಿಸೇವ್ಯಮಂ ಪಡೆದನವ ।
ಕುರುವಿಂದಮಣಿಹಾರದಂತೆ ಕಂಚುಕದಂತೆ ಮಂದಾರಮಾಲೆಯುಂತೆ ॥ ೩೫ ॥
ಎಂದು ನಾನಾ ತೆರದಿ ನುತಿಯಿಸಲ್ಕಾ ವೈಶ್ಯ- ।
ವೃಂದಾರಕಂ ಮರುಕದಿಂದಮಾ ಚೋರಗಿಂ- ।
ತೆಂದನೆಲೆ ಮಗನೆ ನಾನೆರಡಾರು ವರ್ಷದಿಂ ನಿಜಗುರು ಸಮೀಪದಲ್ಲಿ ॥
ಇಂದುವರ ದತ್ತಾವಧಾನದೊಳಗತಿಭಕ್ತಿ- ।
ಯಿಂದಿರ್ದ್ದು ಸೇವೆಯಂ ಚೆನ್ನಾಗಿ ಮಾಡಿದುದ- ।
ರಿಂದಾ ಗುರು ಪ್ರಸನ್ನತೆವಡೆದು ನನಗೊಂದು ದಿವ್ಯಮಂತ್ರವನಿತ್ತನು ॥ ೩೬ ॥
ಅದನಾವಗಂ ಪಠಿಯಿಸುತ್ತಿರ್ಪೆನದು ನಿನಗೆ ನಾ- ।
ನುದಕಮಂ ತರಪೋದೊಡೆನಗೆ ವಿಸ್ಮೃತಿಯಪ್ಪ- ।
ದದುಕಾರಣಂ ಪೋಪುದಾಗದೆಂದೆಂಬ ನುಡಿಯುಂ ಕೇಳುತಾ ಚೋರನು ॥
ಅದರಿಂದಮಾವಕಾರ್ಯ್ಯಂ ಸಾಧ್ಯಮೆಂದೆನಲ್ ।
ಚೆದುರನಾ ಜಿನದತ್ತನಿಂತೆಂದನಿದು ಪಂಚ- ।
ಪದಮಂತ್ರಮಿದರಿಂದ ಸರ್ವ್ವಕಾರ್ಯ್ಯಂ ಸಿದ್ಧಿ ಕೇಳ್ ಸಕಲಸುಖಮಪ್ಪುದು ॥ ೩೭ ॥

ಎಂದದರ ಮಹಿಮೆಯಂ ಪೇಳಲಾ ಚೋರನಿಂ- ।
ತೆಂದನಾ ಮಂತ್ರಮಂ ನೀನುದಕಮಂ ನನಗೆ ।
ತಂದುಕೊಡುವಲ್ಲಿ ಪರಿಯಂತರಂ ಮರೆಯದೇ ಸ್ಮರಿಯಿಸುತ್ತಿರ್ದ್ದ ಬಳಿಕ ॥
ಒಂದಕ್ಷರಮನದರೊಳುಳುಹದೇ ನೀನುಸಿರಿ- ।
ದಂದದಿಂ ನಿನಗೊಪ್ಪಿಸುವೆನದರಿನೆನಗೆ ಕೃಪೆ- ।
ಯಿಂದಮುಪದೇಶಮಂ ಮಾಳ್ಪುದೆನಲಾ ಮಾತುಗೇಳಿ ಲೇಸಾಯಿತೆಂದು ॥ ೩೮ ॥
ಆ ಧೀರಲಲಿತನವಗಾ ಪಂಚಪದವ ಸಂ- ।
ಬೋಧೆಯಂ ಮಾಡಿ ನೀರಿಂಗೆಯ್ದಲಿತ್ತದಂ ।
ಸಾಧಕಂ ಮಾಡುವಾ ಸಾಮರ್ಥ್ಯದಿಂದ ಮುನ್ನಂ ಮಾಡಿದಾ ಪಾಪದಾ ॥
ಬಾಧೆಯೆಲ್ಲಂ ನಿಮಿಷದೊಳ್ನೀಗಿಯುತ್ತಮ ಸ- ।
ಮಾಧಿಯಂ ಪಡೆದಧಿಕಸುಖಸಂಪದವನೀವ ।
ಸೌಧರ್ಮ್ಮವೆಂದೆಂಬ ಮೊತ್ತಮೊದಲಮರಲೋಕದೊಳು ಸಂಜನಿಯಿಸಿದನು ॥ ೩೯ ॥
ಇತ್ತ ನಸುತಡೆದು ನೀರಂ ತಂದು ಮಗುಳ್ದು ಜಿನ- ।
ದತ್ತನಾ ಖೂಳವದನಂ ಪ್ರಸನ್ನತೆವೆತ್ತು ।
ಸತ್ತುದಂ ಕಂಡು ಬಳಿಕಿಂತೆಂದನಾ ಪಂಚಪದದ ಸಾಮರ್ಥ್ಯದಿಂದ ॥
ಉತ್ತಮಸಮಾಧಿಯಂ ಪಡೆದು ಸುರಲೋಕಸಂ- ।
ಪತ್ತಿಯಂ ಪಡೆದನಲ್ಲಾ ವ್ಯಸನಸಪ್ತಕೋ- ।
ನ್ಮತ್ತಮಾನಸ ರೂಪ್ಯಖುರನದರಿನುತ್ತಮರ ಸಂಗವೇನಂ ಮಾಡದು ॥ ೪೦ ॥
ಸಜ್ಜನರ ಸಂಗವೆಂಬುದು ಭವಭವಗಳೊಳ- ।
ಗುಜ್ಜುಗಂ ಮಾಡಲುದಯಂಗೆಯ್ದು ನೋಯಿಸುವ ।
ಬಜ್ಜಡಮನೆಲ್ಲವೊಂದಿನಿಸಿಲ್ಲದಂದದಿಂದರೆಗಳಿಗೆ ಮಾತ್ರದಲ್ಲಿ ॥
ನಿರ್ಝಾಡಿಸುವುದು ಮುಂದಕೆ ಪೋಪ ದುರ್ಗ್ಗತಿಗೆ ।
ಹಜ್ಜೆಯಿಡಪಿಡದು ಲೋಕದೊಳು ಸತ್ಕೀರ್ತಿಯಂ ।
ಪಜ್ಜಳಿಯಿಸುವುದುತ್ತರೋತ್ತರಗತಿಗೆ ಸಾಧನವನೆ ಮಾಡುತಿರ್ಪ್ಪುದು ॥ ೪೧ ॥
ಎನುತ ಸದ್ಗುಣಮಣಿಕರಂಡಕಂ ವೈಶ್ಯವಿಭು ।
ಜಿನದತ್ತನಾ ಪುರದ ಬನದ ಸಾಸಿರಕೂಟ ।
ಜಿನಗೇಹಕನುರಾಗದಿಂದೆಯ್ದಿ ಜಿನಪತಿಗೆ ನಮಿಸಿ ಜಿನಚಂದ್ರಮುನಿಗೆ ॥
ವಿನಯವಿನಮಿತನಾಗಿ ತತ್ಕಥನಮಂ ಕೇಳಿ- ।
ಯನಶನಮನಾ ದಿನಕೆ ಕೈಕೊಂಡು ಬಳಿಕ ।
ಜನವಿನುತ ಸದ್ಧರ್ಮ್ಮಸ್ವರೂಪಮನವರ್ನಿರೂಪಿಸೆ ಕೇಳುತಿರ್ದ್ದನಿತ್ತ ॥ ೪೨ ॥
ಶೂಲಮಂ ಕಾದಿರ್ದ್ದ ಭಟರು ಪರಿತಂದು ಭೂ- ।
ಪಾಲ ಕೇಳ್ ಜಿನದತ್ತ ಮಾಡಿದುದನಿನ್ನೇನ ।
ಹೇಳುವೆವು ಮುಂದೆಣಿಸದಾ ರೂಪ್ಯಖುರನಲ್ಲಿಗೆಯ್ದಿ ಗುರುಮಂತ್ರಗೊಂಡು ॥

ಬಾಳುಗೆಡುವುದನರಿಯದೇ ಹೋದನೆಂಬ ನುಡಿ- ।
ಗೇಳಿ ಕೆಕ್ಕಳಗೆರಳ್ದಾ ದ್ರೋಹಿಯುಂ ತಂದು ।
ಸೀಳಿ ತೋರಣಗಟ್ಟಿಮೆನುತಟ್ಟಿದಂ ತನ್ನ ಮೈಗಾಪಿನಾಳುಗಳನು ॥ ೬೩ ॥
ಅವರವನ ಮನೆಯ ಬಾಗಿಲ್ಗೆಯ್ದುವನಿತರೊ- ।
ಳ್ದಿವಿಜಲೋಕದ ರತ್ನಮಯ ವಿಮಾನದೊಳು ಸಂ- ।
ಭವಿಸಿದಂಜನಚೋರ ಚರದೇವನಾ ನಾಲ್ಕುಗಳಿಗೆಯೊಳ್ಪ್ರಾಯವಾಗಿ ॥
ಯುವತೀಜನಂಗಳಾರತಿಯನೆತ್ತುತ್ತಿರಲ್ ।
ನವಪುಷ್ಪವೃಷ್ಟಿಕರೆಯಲ್ಮಂಗಲಾನಕದ ।
ರವಮುಣ್ಮೆ ಪರಿವಾರದೇವರ್ಕಳೆಲ್ಲ ಬೆಸನಂ ಬೇಡಿ ನಿಂದಿರ್ದ್ದರು ॥ ೬೪ ॥
ಸುರಕುಜಾವಳಿ ಕೊಟ್ಟ ಸುರಭಿಲೇಪನಪುಷ್ಪ ।
ಸುರುಚಿರದುಕೂಲ ಸುಲಲಿತಭೂಷಣವನು ಕ- ।
ಪ್ಪುರವಳಿಕಿನಂತಪ್ಪ ತನುವಿನೊಳಲಂಕರಿ ಸಿತಚಾಮರಂ ಬೀಸುವಾ ॥
ವರಗೀತವಾದ್ಯ ನಟನ ಕ್ರೀಡೆಯುಂ ತೋರ್ಪ್ಪ ।
ತರುಣೀಜನಂಗಳ ಸಮೂಹಮಂ ನೋಡಿಯು- ।
ಜ್ಜರಿವಟ್ಟು ನಾನಾರಿದಾವ ನೆಲನಿಲ್ಲಿಗೇಕಾರಣದಿನೆಯ್ತಂದೆನು ॥ ೬೫ ॥
ಎನುತ ಚಿಂತಿಸುವಾ ನಿಳಿಂಪಗವಧಿಜ್ಞಾನ ।
ಜನಿಸಿ ಸಪ್ತವ್ಯಸನದಲ್ಲಿಯಾಚರಿಸಿಯನಿ- ।
ತಿನಿತೆಂಬ ಗಣನೆಗೆಯ್ದದ ದುಃಖವೀವ ದುರ್ಗ್ಗತಿಗೆ ಪೋಪುದನೆ ಬಿಡಿಸಿ ॥
ಇನಿತು ಸುಖಮಂ ಮಾಡಿಕೊಟ್ಟ ಜಿನದತ್ತಸೇ ।
ಜನಕನಾ ಪುಣ್ಯವಂತಗೆ ನನ್ನದೆಸೆಯಿಂದ ।
ಜನಪನುಪಸರ್ಗ್ಗಮಾಗಿರ್ದ್ದುದಲ್ಲಾ ಎನುತ ಭೂತಳಕ್ಕಿಳಿದು ಬಂದು ॥ ೬೬ ॥
ಮನುಜಮಂದಾರ ಜಿನದತ್ತ ವೈಶ್ಯೋತ್ತಮನ ।
ಮನೆಯ ಬಾಗಿಲ ಮುಂದೆ ವೃದ್ಧಮಾನಸರೂಪ- ।
ನನುಕರಿಸಿಕೊಂಡೊಂದು ದಂಡಮಂ ಕಂಪಿಸುವ ಕೆಯ್ಯೊಳಗೆ ಹಿಡಿದು ನಿಂದು ॥
ಜನಪನಟ್ಟಿದ ದೂತರೆಯ್ತಪ್ಪುದಂ ಕಂಡು ।
ಕನಲಿ ನಮ್ಮೊಡೆಯುಗವಸರಮಿಲ್ಲ ನೀವೆಮ್ಮ ।
ಮನೆಯ ಹೊಗಬೇಡ ಹೊಕ್ಕೊಡೆ ಹಿಡಿದ ಡಾಣೆಯಿಂ ನಿಮ್ಮೆಲ್ಲರಂ ಬಡಿವೆನು ॥ ೬೭ ॥
ಎಂದು ನುಡಿಗೇಳಿ ಉರುಬಿದೊಡೆ ತಾನೊಣಗಿದೆಲೆ- ।
ಯಂದದಿಂ ಬಿಳ್ವ ಶಕ್ತಿಯನು ನೋಡದೆ ಡಾಣೆ- ।
ಯಿಂದ ನಮ್ಮೆಲ್ಲರಂ ಬಡಿವೆನೆಂಬುದು ಚೋದ್ಯಮೆಂದು ಕೈವೊಯ್ದು ನಕ್ಕು ॥
ಮುಂದಕೆಯ್ತಪ್ಪ ಭಟರಂ ಕಂಡು ಕಳ್ತಲೆಯ ।
ಗೊಂದಣಕೆ ಸೊಡರು ಗಿರಿವರಕೆ ವಜ್ರಂ ಸ್ವಲ್ಪ- ।
ವೆಂದೆನಲ್ಬಹುದೆ ಸಿಂಗದ ದನಿಗೆ ಗಜಘಟೆಗಳೋಡುವಂತಾಗಬೇಕು ॥ ೬೮ ॥

ನೋಡಿಕೊಂಡೆನ್ನ ಹತ್ತಿರಕೆಯ್ದಿ ಬನ್ನಿಯೆಂ- ।
ದಾ ಡಾಣೆಯಿಂದೆಲ್ಲರಂ ಬಡಿದು ಕೊಲಲದ- ।
ಕ್ಕೋಡಿ ಕೆಲಬರ್ನೃಪತಿಯೆಡೆಗೆಯ್ದಿ ತದ್ವಾರ್ತೆಯಂ ಪೇಳೆ ಕೇಳಿ ಕನಲಿ ॥
ರೂಡಿಸಿದ ಲಕ್ಷಭಟಕೋಟಿಭಟಸಂತತಿಯ ।
ಕೂಡಿ ಕಳುಹಿದೊಡವರನೆಲ್ಲರಂ ಕಡುಮುಸಗಿ ।
ಬೀಡುಬೆದರ್ವಂದದಿಂ ಕೊಲಲದಂ ಕೇಳಿ ಕೆಂಗಣ್ಣಸಗಿ ಭೂಪಾಲನು ॥ ೪೯ ॥
ಚತುರಂಗಬಲಸಮನ್ವಿತನಾಗಿ ಬರಲು ಕಂ- ।
ಡತಿಕುಪಿತನಾಗಿ ಜವನೇ ದಂಡಮಂ ಪಿಡಿದು ।
ಹತಮಾಳ್ಪುದಂ ಕಂಡು ಕಡು ಬೆದರಿ ಕಂಗೆಟ್ಟು ಓಡುವರಸನ ಕಾಣುತ ॥
ಮತಿವಂತ ಜಿನದತ್ತನೀ ಪುರದ ಬನದ ಸ- ।
ನ್ನುತಜಿನಾವಾಸದೊಳಗಿರ್ದ್ದಪನವನನೀಂ ।
ಪ್ರತಿಪಾಲಿಸೆಂದು ಮರೆವುಗೆ ಬಿಡುವೆನಲ್ಲದೊಡೆ ಪಿಡಿದು ದೆಸೆಗೀಡಾಡುವೆಂ ॥ ೫೦ ॥
ಹೇಳಹೆಸರಿಲ್ಲದಂದದಿ ಮನೆಯನೆಲ್ಲಮಂ ।
ಹಾಳೆಂದೆನಿಸದೆ ಬಿಡೆನೆನುತ ರಕ್ಕಸರೂಪು ।
ದಾಳಿ ನೆರೆ ಬೆಳೆದು ಸಿಡಿಲಂತೆ ಗರ್ಜ್ಜಿಸಿ ಡಾಣೆವಿಡಿದು ಬೆನ್ನಟ್ಟಿಬರಲು ॥
ತಾಳಬಾರದ ಹೇಡಿಗೊಂಡೋಡಿ ಬನದ ಚೈ- ।
ತ್ಯಾಲಯಕೆ ಶರಣಜನರಕ್ಷಾಮಣಿಯೆ ನನ್ನ ।
ಪಾಲಿಸಿ ಪುನಃಪ್ರತಿಷ್ಠೆಯ ಮಾಡೆನುತ್ತ ರಾಜಶ್ರೇಷ್ಠಿಯೆಡೆಹೊಕ್ಕನು ॥ ೫೧ ॥
ಒಡೆದ ಕೆರೆಯಂ ಕಟ್ಟಿಸಿದೊಡೆ ವಂಶಭ್ರಷ್ಟ- ।
ವಡೆವುದಂ ನಿರಿಸಿದೊಡೆ ಗೋಬ್ರಾಹ್ಮಣರದೊಂದು ।
ಬಡತನಮುಮಂ ಬಯಲ್ಮಾಡಿದೊಡೆ ಹಾಳುದೇಗುಲಮನನುಮಾಡಿಸಿದೊಡೆ ॥
ಕೆಡುವಬೆಳೆಯಂ ನೀರನಿಕ್ಕಿ ಸಲಹಿದೊಡೆ ಮರೆ- ।
ಗಡೆಗೆ ಬಂದವರ ಜೀವವನು ಕಾಯ್ದೊಡೆ ಮುನ್ನ ।
ಪಡೆದರ್ಗ್ಗಿಂದ ಫಲ ಮುಮ್ಮಡಿಯಪ್ಪುದೆಂದು ಪೃಥ್ವೀತಳಂ ಪೊಗಳುತಿಹುದು ॥ ೫೨ ॥
ಎಂಬ ಪದ್ಮೋದಯನ ದೈನ್ಯವಚನಕ್ಕೆ ಕರು- ।
ಣಾಂಬುನಿಧಿ ಬಿರುಮಳೆ ಹತ್ತಿದಂದದಿ ಬೆಕ್ಕ- ।
ಸಂಬಟ್ಟವಂ ದನುಜನಲ್ಲ ಕಾರಣಪುರುಷನಾಗಲೆವೇಳ್ಕುಮೆಂದು ॥
ಪಂಬಲಿಸುವರಸನಂ ನೋಡಿ ನಿನಗೀ ಸಂಕ- ।
ಟಂಬಡಿಸಿ ಪಿರಿದು ಕೋಪಾಟೋಪದಿಂ ನಿನ್ನ ।
ಬೆಂಬಳಿಯನೀ ಮಾಹಾತ್ಮಂ ರೌದ್ರರೂಪುವಡೆದೆಯ್ದುವುದಿದೇನು ಕಾರ್ಯ್ಯ ॥ ೫೩ ॥
ಈ ತೆರದಿ ನುಡಿದ ಜಿನದತ್ತವೈಶ್ಯೋತ್ತಮನ ।
ಮಾತುಗೇಳುತವೆ ತತ್ಕೃತಕರೂಪಂ ಬಿಟ್ಟು ।
ಸಾತಿಶಯಮಪ್ಪ ನಿಜದೇವರೂಪಂ ತೋರಿ ತದ್ವೈಶ್ಯಕುಲತಿಲಕನಾ ॥

ಪ್ರೀತಿಯಿಂ ಬಲವಂದು ಬಂದಿಸಿ ಬಳಿಕ್ಕೆ ತ- ।
ದ್ವೀತರಾಗಂಗೆ ಸದ್ವಿನಯುವಿನಮಿತನಾಗಿ- ।
ಯಾ ತಪಸ್ವಿಸಮೂಹಕ್ಕೆರಗೆ ಕಂಡಾ ನೃಪತಿ ನುಡಿದನಿಂತೆಂದಮರಗೆ ॥ ೬೪ ॥
ದೇವ ಕೇಳ್ಸಗ್ಗದವರೆಲ್ಲಮವಿಚಾರಿಗ- ।
ಳ್ದೇವಾಧಿದೇವ ಪರಮೇಶನಿರ್ದ್ದಂದದಿಂ ।
ಭೂವಿನುತಮೀ ಮುನಿನಿಕಾಯುಮಿರ್ದ್ದಂದದಿಂದವಿವೇಕತನದೆ ಬಂದು ॥
ಶ್ರಾವಕಜನಕ್ಕೆ ಇಚ್ಛಾಕಾರಮಂ ಮಾಡ- ।
ದೋವದೇ ಬಂದು ಬಲವಂದೊಸೆದು ಬಳಿಕ ನಾ- ।
ನಾವಿಧದಿ ಕೊಂಡಾಡಿ ಸಾಷ್ಟಾಂಗವೆರಗಿದೊಡೆ ಲೋಕಮಿರದೆಯ್ದೆ ನಗದೇ ॥ ೬೫ ॥
ಎನಲೆಂದನಾ ದೇವನಾ ಪ್ರಥಮವಯುಸಿನೊಳ- ।
ಗಿನಿಸು ಕದಡಿದ ನೀರನೆರೆದು ರಕ್ಷಿಸಿದವರ್ಗ್ಗೆ ।
ಯನವರತಮಾನಾಳಿಕೇರಮತಿರುಚಿಯಪ್ಪ ಸುಧೆಯನೋವದೆ ಕೊಡುವುದು ॥
ಅನುನಯದಿ ಸನ್ಮಂತ್ರವೆಂಬ ವಚನಾಮೃತವ- ।
ನೆನಗೆನ್ನ ಕಿವಿಯೊಳೆರೆದೀ ಪದವನಿತ್ತವಗೆ ।
ಜನನಾಥ ಕೇಳು ನಾನೇನ ಮಾಡುವೆನದರಿನೀತನೇ ನಿಜದೈವವು ॥ ೬೬ ॥
ನೆಲಹೇಸುವಂತೆ ಸಪ್ತವ್ಯಸನದೊಳ್ನಡೆದು ।
ಕುಲಹೀನನಾನೆನ್ನದೆನ್ನೆಂಜಲಂ ನೃಪತಿ- ।
ಗಲಸದೇ ಕೊಟ್ಟು ಶೂಲಪ್ರಾಪ್ತಿಯಾಗಿ ನರಕಕ್ಕೆ ಬೀಳುವನೆನ್ನನು ॥
ಸಲೆಸುಖವನೀವ ಸದ್ಗತಿಗೆ ಪಿಡಿದೆತ್ತಿ ನಿ- ।
ರ್ಮ್ಮಲಿನ ಮಾಡಿದನಿವಂ ತಾನೆ ನಿಜಗುರುದೈವ- ।
ನೆಲೆಯಿದೆಂಪಾನೀ ಮಹಾತ್ಮಂಗೆ ಮೊದಲೆರಗಿ ಕಡೆಯೊಳಭವಂಗೆರಗಿದೆಂ ॥ ೬೭ ॥
ಎಂದಾ ನಿಳಿಂಪನಾ ಜಿನದತ್ತನಂ ಪಲವು ।
ಚಂದದಾಭರಣವಸ್ತ್ರಾನುಲೇಪನ ಕುಸುಮ- ।
ದಿಂದ ಪೂಜಿಸಿಯುಲರಮಳೆಯಾದಿಯಾಶ್ಚರ್ಯ್ಯಪಂಚಕವನೊಸೆದು ಮಾಡಿ ॥
ಅಂದು ತಾಂ ಕೆಡಹಿದರಸನ ಚತುರ್ವ್ವಿಧ ಬಲದ ।
ಗೊಂದಣಮನೇಳಿಸಿ ಮಹೀಶನೊಳಗನುವೋದ- ।
ದಿಂದೀ ಮಹಾತ್ಮನೆನಗೆಸಗಿದುಪಕಾರಮಂ ನೆನೆವೆನಾನಾವ ಭವಕೆ ॥ ೬೮ ॥
ಇಂತು ನುಡಿದಾ ದೇವನಾ ದಿವಿಜಲೋಕಕ್ಕೆ ।
ಸಂತಸದಿನೆಯ್ದಲೊಡನದನು ಕಂಡಾ ಮಹೀ- ।
ಕಾಂತನಾ ಸದ್ಧರ್ಮ್ಮದೊಂದು ಮಹಿಮೆಯನು ಕೊಂಡಾಡಿ ತಲೆದೂಗುತಿರಲು ॥
ಕಂತುಮದಮರ್ದನನ ಸಮಯುಮೇ ಕೈವಲ್ಯ- ।
ಕಾಂತೆಯೊಡಗೂಡಿಸುವುದದು ಭಾವಿಸಲು ಪುಣ್ಯ- ।
ವಂತರ್ಗ್ಗೆ ಘಟಿಯಿಸುವ ತೆರದಿನಸ್ವರ್ಗ್ಗಹುದೆ ಎಂದನಾ ಜಿನದತ್ತನು ॥ ೬೯ ॥

ಎನಲದಂ ಕೇಳಿ ಹರ್ಷೋತ್ಕರ್ಷನಾಗಿ ಸ- ।
ಜ್ಜನವಿನುತ ಪಂಚಪದದೊಂದು ಸಾಮರ್ಥ್ಯಮಂ ।
ಜಿನಸಮಯದಲ್ಲಿ ನಂಬುಗೆವಡೆದವರ್ಗೆ ಮುಂದಪ್ಪ ಸಲೆಸುಕೃತದೊದವಂ ॥
ಮನವಾರೆ ಕಂಡು ಮತ್ತಾ ಸ್ವರ್ಗಮುಕ್ತಿಯಂ ।
ಘನಗುಣಾಲಂಕೃತಸ್ವಾರ್ಥ್ಯಮಂ ಮಾಳ್ಪದನೆ ।
ನೆನೆಯಬೇಕೆಂದು ನಿಶ್ಚಯಮಪ್ಪ ಬುದ್ಧಿಯಂ ಬಗೆದು ತದ್ಭೂಪಾಲನು ॥ ೬೦ ॥
ವೈರಾಗ್ಯವೆದೆಯೊಳಂಕುರಿಸಲೊಡನಾ ನಿಜಕು- ।
ಮಾರನುದಿತೋದಯಗೆ ಭೂಭಾರಮಂ ಹೊರಿಸಿ ।
ಭೂರಿಭೂಭುಜರೊಡನೆ ನಡೆತರಲ್ ಸಂಭಿನ್ನಮತಿಯಾ ಸುಬುದ್ಧಿಸುತಗೆ ॥
ಆ ರಾಜಮಂತ್ರಿಪದವಿತ್ತುಬರೆ ಮನುಜಮಂ- ।
ದಾರ ಜಿನದತ್ತಸಹಿತಾಗಿ ದೀಕ್ಷೆಯನಾಂತ ।
ನಾ ರುಷಿಲಲಾಮ ಜಿನಚಂದ್ರಭಟ್ಟಾರಕರಿನಾ ನೃಪತಿಪದ್ಮೋದಯಂ ॥ ೬೧ ॥
ನರನಾಥನರಸಿ ಜಂಭಾವತಿ ಮಹಾದೇವಿ ।
ವರಸಚಿವನಬಲೆ ಸುಪ್ರಭೆ ಮತ್ತಮಾರೂಪ್ಯ- ।
ಖುರನ ಸತಿ ರೂಪ್ಯಖುರೆ ನಮ್ಮ ನಿಜಜನನಿ ಸಹಿತಾ ದೀಕ್ಷೆಯಂ ಧರಿಸಲು ॥
ಪುರವರದೊಳರ್ಧಜನ ಶ್ರಾವಕವ್ರತಮನನು- ।
ಕರಿಸಿಯೊಪ್ಪಿದರರ್ಧವಲೋಕಕಿದುವೆ ಸುರು- ।
ಚಿರಧರ್ಮ್ಮವೆಂದು ಪಿರಿದುಂ ಭದ್ರಪರಿಣಾಮಮಂ ಪಡೆದರರ್ಥಿಯಿಂದ ॥ ೬೨ ॥
ಈ ತೆರದ ಪ್ರತ್ಯಕ್ಷಮಂ ಕಂಡು ನನಗೆ ಸಂ- ।
ಜಾತಮಾದುದು ಶುದ್ಧಸಮ್ಯಕ್ತ್ವಮೆಂದಾ ವಿ- ।
ನೂತನರ್ಹದ್ದಾಸನೊರೆಯಲದ ಕೇಳಿ ಯಿಚ್ಚಾಮಿಯೆನಲಾ ಸತಿಯರು ॥
ಆತನ್ವಿ ಕಿರಿಯ ಸತಿ ಕುಂದಲತೆಯೆಂಬಳೀ ।
ಮಾತಿಗಿಚ್ಛಾಮಿಯೆಂದೆಂಬೆನೇ ನಾನಿದಂ ।
ಪ್ರೀತಿಯಿಂ ಲಾಲಿಸುವೆನೆಂಬೆನೇ ಇಂತಿದೆಲ್ಲಂ ಮಿಥ್ಯೆಯಲ್ಲವೇ ಭಾವಿಸಿದೊಡೆ ॥ ೬೩ ॥
ಸತ್ಯಮಲ್ಲಿಂತಿದೆಂಬಾ ಕುಂದಲತೆಯ ನುಡಿ- ।
ಗತ್ಯಂತ ಕುಪಿತಮಾನಸರಾ ಮಹೀಶನಾ- ।
ಮಾತ್ಯರಿಂತೆಂದೆಣಿಕೆ ಮಾಡಿದರ್ಜ್ಜನಜನಿತಮಾಗಿ ನಮ್ಮಿ ಪುರದೊಳು ॥
ಪ್ರತ್ಯಕ್ಷದಿಂ ಚೋರನಿರವನೀಕ್ಷಿಸಿಯಾಧಿ- ।
ಪತ್ಯಮಂ ನಮಗಿತ್ತು ಬಹಿರಂಗ ಸೌಖ್ಯಮನ- ।
ನಿತ್ಯಮೆಂದಾ ದೀಕ್ಷೆಯಂ ಕೊಂಡುದನಿವಳ್ಪುಸಿಯೆಂದು ನುಡಿಯಬಹುದೇ ॥ ೬೪ ॥
ಆಗಲಾಗಲಿಯೊಂದುಬಾರಿ ರವಿಯುದಯ ತ- ।
ನ್ನಾಗ ಹಿಡಿತರಿಸಿ ಕತ್ತೆಯಮೇಲೆ ಕುಳ್ಳಿರಿಸಿ ।
ಪೋಗೆ ಸುಣ್ಣದ ಬೊಟ್ಟನಿಟ್ಟು ಪೊರಮಡಿಸಬೇಕೆಂದವರು ನುಡಿಯುತಿರಲು ॥

ಆಗಲೆಂದಂ ಚೋರನೆನ್ನಯ್ಯನರಸಿನೊಂ- ।
ದಾಗಿ ಸವಿದಾ ಶೂಲವೇರಿ ಜಿನದತ್ತನಿಂ- ।
ದಾಗ ಸಗ್ಗಂ ಬಡೆದುಬಂದ ಪ್ರತ್ಯಕ್ಷಮಿಲ್ಲೆನಬಹುದೆ ಈ ಡಾಳಕಿ ॥ ೬೫ ॥
ಕಾರಕಾಲದ ಕಂದರದನುಣ್ಣ್ಕರವನು ಪಿರಿ- ।
ದಾರಯ್ದನರ್ಘ್ಯವಹ ವೈಡೂರ್ಯ್ಯಮಣಿಯುಂ ವಿ- ।
ಡೂರಧರಣೀತಳಂ ಹಡೆವಂದದಿಂದಮಾ ಕರಲು ನೆಲನೇಂ ಹಡೆವುದೆ ॥
ಚಾರುಕೋವಿದರ ನುಡಿಗುತ್ತಮರ ತನುಲತಿಕೆ ।
ವೋರಣದಿ ಪುಳಕಿಪಂದದಿ ದುರ್ಜ್ಜನಾಳಿಯ ಕ- ।
ಠೋರಮಪ್ಪಂಗದೊಳಗೊಂದಿನಿಸು ಪುಳಕಪ್ರತಾನ ಸಂಜಾತಮಹುದೇ ॥ ೬೬ ॥
ಈಪರಿಯೊಳಾ ಚೋರನಾರಾಜಮಂತ್ರಿಯುಂ ।
ಭೂಪಾಲಕಂ ತಮ್ಮೊಳಾಳೋಚಿಸುತ್ತಿರೆ ನಿ- ।
ರೂಪಿಸಿದನಾ ನಿತಂಬಿನಿಯರೊಳ್ತನಗೆ ಸಮ್ಯಕ್ತ್ವ ಸಂಜನಿಸಿದುದನು ॥
ಆ ಪುಣ್ಯಮೂರ್ತ್ತಿಯಾಶ್ರಿತಜನಾಧಾರನತಿ- ।
ರೂಪನೂರ್ಜ್ಜಿತಕಲಾಸಂಪನ್ನ ವೈಶ್ಯಕುಲ- ।
ದೀಪ ಸಮ್ಯಕ್ತ್ವಚಿಂತಾರತ್ನ ಜಿನಸಮಯವಾರ್ಧಿವರ್ಧನಚಂದ್ರನು ॥ ೬೭ ॥
ಇದು ವಿಬುಧಜನವಿನುತಮಿದು ವಿಬುಧಜನವಿನತ- ।
ಮಿದು ವಿದಿತಜಿನಸಮಯಶರಧಿಸಂಪೂರ್ಣೇಂದು ।
ಸದಮಲಚರಿತ್ರ ಚೆಂಗಾಳ್ವಭೂವರನ ಸಚಿವಾನ್ವಯಾಂಬರಹಂಸನು ॥
ಮದನಸಮರೂಪನುತ್ತಮಗುಣಕರಂಡಕಂ ।
ಚೆದುರಮಂಗರಸ ರಚಿಸಿದ ಕೌಮುದೀ ಕಥೆಯೊ- ।
ಳೊದವಿದುದು ರೂಪ್ಯಖುರ ತಸ್ಕರನ ಕಥನ ನಾಲ್ಕನೆಯ ರಂಜಿಸುವ ಸಂಧಿ ॥ ೬೮ ॥
ಅಂತು ಸಂಧಿ ೪ ಕ್ಕಂ ಪದ ೨೬೮ ಕ್ಕಂ ಮಂಗಲಮಹಾ ಶ್ರೀ ಶ್ರೀ.

---



# ಐದನೆಯ ಸಂಧಿ.



## ಜಿನದತ್ತೆಯ ಕಥೆ.

ಶ್ರೀಮದರ್ಹದ್ಭಾಸವೈಶ್ಯವಿಭು ಕೇಳಲಾ ।
ತಾಮರಸವದನೆ ಮಿತ್ರಶ್ರೀ ಕರಂಗಳಂ ।
ಪ್ರೇಮದಿಂ ಮುಗಿದು ತನಗಾದ ಸಮ್ಯಕ್ತ್ವಮಂ ಜಿನ್ನಪಂಗೆಯ್ದಳಿಂತು ॥ ಪ ॥

ಕಟ್ಟಕಡೆ ಸೊಬಗಿಗೆನಿಸುವ ರಾಜಗೃಹಮೆಂಬ ।
ಪಟ್ಟಣಂ ಮಗಧದೇಶದೊಳೊಪ್ಪುತಿಹುದಲ್ಲಿ ।
ಕಟ್ಟರಸು ಸಂಗ್ರಾಮಶೂರನೆಂದೆಂಬವಂ ಕನಕಮಾಲಾ ನಾಮದಾ ॥
ಪಟ್ಟದಂಗನೆಗೂಡಿ ಸುಖಮಿರ್ಪನಂತಲ್ಲಿ ।
ಸೆಟ್ಟಿಯೊರ್ವ್ವಂ ವೃಷಭದಾಸನೆಂದೆಂಬವಂ ।
ಬಟ್ಟವೆರೆಮೊಗದ ಜಿನದತ್ತೆಯೆಂಬಳುಗೂಡಿ ಸುಖದಿಂದಮಿರುತಿರ್ಪ್ಪರು ॥ ೧ ॥

ದೀನತ್ವದಿಂ ಬಂದ ವೈಶ್ರವಣನೈಶ್ವರ್ಯ- ।
ಮೇನಾದೊಡೇನೊ ಸುರಭೂರುಹದ ನೆಮ್ಮುಗೆಯಿಂ- ।
ನಾನಾಕಪತಿಮಾಳ್ಪ ತೀರ್ಥಂಕರರ ಪಾದಪೂಜೆ ಯೇನಾದೊಡೇನೊ ॥
ಭೂನಾಥನಾಗಿಯುಂ ಬರಿಯಿಕ್ಷುರಸವನೇ ।
ತಾನೊಸೆದು ಕೊಟ್ಟ ಶ್ರೇಯಾಂಸ ಮಾಡಿದುದೊಂದು ;
ದಾನದ ಮಹಾತ್ಮೆಯೇನಾದೊಡೇನೆಂದು ಹಳಿವುತಿರ್ಪ್ಪರವರವರನು ॥ ೨ ॥

ಇಂತು ಸಲೆ ಸುಖವಾಳುತಾ ವೈಶ್ಯದಂಪತಿಗ- ।
ಳಂತವಿಲ್ಲದ ದಾನಪೂಜೆಯುಪವಾಸಮ- ।
ತ್ಯಂತಶೀಲದೊಳೀ ಪುರಕ್ಕವರೆ ಕಡೆಯಾಣಿಯೆಂದು ತೋರಿಸಿಕೊಳುತ್ತಾ ॥
ಸಂತತಮಿರುತ್ತೊಂದು ಪಗಲು ಮಧ್ಯಾಹ್ನದೊಳ್ ।
ಸಂತೋಷದಿಂದತಿಥಿಗಳ ಬರವ ಕಾಣುತಾ ।
ಕಾಂತೆ ಪೂಜಾದ್ರವ್ಯಮಂ ಪಡಲಿಗೆಯೊಳಿಟ್ಟು ಬಾಗಿಲೊಳ್ಬಂದು ನಿಲಲು ॥ ೩ ॥

ಧರಿಸಿ ಹೆಗಲಲ್ಲಿ ದಕ್ಷಿಣಹಸ್ತಮಂ ವಾಮ- ।
ಕರದೊಳ್ಕಮಂಡಲ ಮಯೂರಪಿಂಛಂಬಿಡಿದು ।
ಕರುಣದಿಂ ಭೂತದಯೆಯೇ ನಿಮಿತ್ತಂ ಮಾರುವರಮವನಿಯಂ ನೋಡುತ ॥
* ವರತಪೋವೃದ್ಧಿಗೀ ತನುವಿರಲ್ಬೇಕೆನುತ ।
ಪುರದ ವೀಥಿಯೊಳೊರ್ವ್ವ ಜಾತರೂಪಂ ಮೆಲ್ಲ ।
ಸುರುಹಿದೊಡೆ ಬಿಳ್ವಂತೆ ಮೆತ್ತಮೆತ್ತನೆ ಚಂದ್ರಗತಿಯಿಂದ ನಡೆತಂದನು ॥ ೪ ॥

ಅಪವರ್ಗಸತಿಗೆ ಮನಮಿಟ್ಟ ಕರಕರೆಯು ತಾ- ।
ನಪಹರಿಸಿತೋ ಶರೀರದ ವೀರ್ಯ್ಯವರ್ಧನಮ- ।
ನಪರಿಮಿತ ಸೂಕ್ಷ್ಮತ್ರಸಂಗಳೀ ಬಲುಭಾರವೆರಸಿ ಪಾದಮನಿಕ್ಕಲು ॥

ಅಪಗತಪ್ರಾಣಮಂ ಪೃಥ್ವಿಯೊಳ್ಪಡೆವುವೆಂ- ।
ದಪಘನಂ ಲಘುತರವನೇಂ ಪಡೆದುದೋ ಎನಲ್ ।
ತಪಸಿ ಚಿದ್ರೂಪಕ್ಕೆ ಪಕ್ಕಾದ ತನುತನುವನಿರದಾಂತು ನಡೆತಂದನು ॥ ೫ ॥
ಆ ತಪಸಿಯಂ ಬಡವನೊಡವೆಗೆಂಡಂತಾ ವಿ- ।
ನೂತೆ ಜಿನದತ್ತೆ ಕಂಡಿದಿರ್ವಂದು ನಿಧಿಯಿರ್ದ್ದ ।
ಭೂತಳಕೆ ನವದೀಪ ಕಳಿಕೆಯೆರಗುವ ತೆರದಿನೆರಗಿ ಪೂಜಿಸಿ ಬಳಿಕ್ಕ ॥
ಪ್ರೀತಿಯಿಂ ಬಲವಂದು ತಿಷ್ಠತಿಷ್ಠಾಯೆಂಬ ।
ಮಾತುಗೇಳುತ್ತ ಭಾವರಿ ಮುರಿದು ಪೊರವೊಳಲ ।
ವೀತರಾಗಾಲಯಕೆ ಜಾತರೂಪಂ ನಿಲ್ಲದೆಯ್ದಲದಕಾಣುತವಳು ॥ ೬ ॥
ಮಲಮಲನೆ ಮರುಗಿ ಹೊಟ್ಟೆಯ ಹೊಸೆದುಕೊಳುತ ಮುನಿ- ।
ಕುಲಲಲಾಮಂ ನನ್ನೊಳೇನು ಕೊರತೆಯ್ಕಾಣು- ।
ತಲಸಿ ತಿರುಗಿದನಿದಂ ಕೇಳ್ವೆನೆನುತಾ ಬಸದಿಗಾ ವೈಶ್ಯಕಾಂತೆ ಬಂದು ॥
ಕಲಿನವಿಜಯಂಗೆರಗಿ ಬಳಿಕ ಯತಿಪತಿಯ ನವೆ ।
ನಳಿನೋಪಮಾಂಘ್ರಿದ್ವಯಕ್ಕೆ ಘಣೆಯಂ ಚಾಚಿ ।
ಯೆಲೆ ಗುರುವೆ ನಿಮಗೆ ಭಾವರಿಮುರಿದ ಕಾರಣವನುಸಿರೆನಲ್ಕೆಂದರಿಂತು ॥ ೭ ॥
ತರಳಾಕ್ಷಿ ಕೇಳು ಗಂಡವಿಮುಕ್ತರಂ ಮನೆಯ ।
ಪುರುಷರೆ ನಿಲಿಸಬೇಕಾ ಪುರುಷನಿಲ್ಲದೊಡೆ ।
ವರಸುತಂ ಸಹಿತ ಸತಿಯುನ್ನಿರ್ಲಿಸಬೇಕು ಬರಿಯಬಲೆಯುಬ್ಬಂದು ನಿಲಿಸೆ ॥
ನಿರುತದಿಂ ನಿಲ್ವುದನುಚಿತವೆಂದೆಲೆ ಬಾಲೆ ।
ತಿರುಗಿದೆವು ನಾವೆಂಬ ಮುನಿವಚನಮಂ ಕೇಳಿ ।
ತರುಣಿ ಕಣ್ಣೀರಿಟ್ಟು ಮನೆಗೆಯ್ದಿ ಸುತದೋಹಳದಿ ಪತಿಯೊಳಿಂತೆಂದಳು ॥ ೮ ॥
ಉಣಲುಡಲು ತೊಡಲು ಬೇಡಲ್ಕೊಡುವುದಕ್ಕೆಮಗೆ ।
ಹಣವೆಂಬುದೇ ನಮ್ಮಮನೆಯಲ್ಲಿ ಕಾಲಕಸ- ।
ವೆಣಿಕೆಬೇಡಿಂತಿದರಿನೇನಾದೊಡೇನೊ ಮಕ್ಕಳ ಹಡೆಯದವರ ಬಾಳ್ವೆ ॥
ಹೆಣಕೆ ಸರಿ ಫಲವನಿನಿಸಂ ಪಡೆಯದಾ ಮರ- ।
ಕ್ಕೆಣೆಯವರ ಮನೆಗೆದಲುಮಾಡಿದಾ ಹುತ್ತವರು ।
ಗಣನೆಯಿಲ್ಲದೆ ಘಳಿಸಿದರ್ಥವೆಲ್ಲಂ ವ್ಯರ್ಥಮವನೀಶ್ವರರ್ಗ್ಗಪ್ಪುದು ॥ ೯ ॥
ಇಂತು ನುಡಿದಿಂದುಮಂಡಲವದನೆಗಾ ವೈಶ್ಯ- ।
ಕಾಂತನುತ್ತರಗೊಟ್ಟನೆಲೆ ಮಾನಿನೀ ಪುತ್ರ- ।
ಸಂತತಿಯಿನಾವಫಲಮವರಂದುನಾಮೆಸಗಿದಾ ಪುಣ್ಯಪಾಪಫಲದ ॥
ಎಂತಾನಃ ಪಚ್ಚುಗೊಂಬರೆಯಽದರಿನಾ ಭ್ರಾಂತು- ।
ಕಾಂತೆ ನಿನಗೇಕೆನಲ್ಕೇಳ್ವಲ್ಲಭಾ ಪುತ್ರ- ।
ಸಂತಾನಮೇ ಗೃಹಸ್ಥಿಕೆಗೆ ಮುಖ್ಯಂ ಸರ್ವ್ವದುಃಖಾಪಹರಣಮಹುದು ॥ ೧೦ ॥

ಈ ಸಂಸೃತಿಶ್ರಾಂತವಿಶ್ರಾಂತಿಯುಂ ಮಾಡು- ।
ವಾ ಸುಜನಸಂತಾನಸಂಗಪ್ರಸಂಗಮುಂ ।
ಭಾಸುರಗುಣಾಭರಣರೆನಿಪ ಉತ್ತಮರ ಚರಿತೆಯನುಸಿರ್ವ ಸತ್ಕವಿತೆಯಂ ॥
ಶ್ರೀಸುತಂಗೆಣೆಯೆನಿಪ ಮಕ್ಕಳಂ ಪಡೆದವರ ।
ಕೂಸಾಟಮವರ ಬಳವಿಗೆಯವರ ಹರೆಯದ ವಿ- ।
ಲಾಸಮಂ ನೋಡಲಿವು ಮೂರು ಮುನ್ನಂ ನೋನದವರ್ಗೆಂತು ಸಂಭವಿಪುದು ॥ ೧೧ ॥
ಒಡಲುವಿಡಿದೀ ಬಾಳು ಬಾಳ್ವರ್ಗೆ ಮಕ್ಕಳಂ ।
ಪಡೆಯೆ ಸಗ್ಗಂಬಡೆದ ತೆರನದೆಂತೆನೆ ನಾವು ।
ಪಡೆದ ವಸ್ತುವನು ಮನೆಯಾರಭಾರವನು ನಂದನರ ಕೈವಶವ ಮಾಡಿ ॥
ಕಡೆಯಲ್ಲಿ ಭೋಗೋಪಭೋಗಮಂ ಕೊಳೆವುಲ್ಲ ।
ಬಿಡುವಂತೆ ಬಿಸುಟು ದೀಕ್ಷೆಯನಾಂತು ಮುಕ್ತಿಯಂ ।
ಪಡೆಯಬಹುದದರಿಂದಪುತ್ರಸ್ಯ ಸದ್ಗತಿರ್ನಾಸ್ತಿ ಯೆಂಬುದು ಭೂತಳ ॥ ೧೨ ॥
ಎಂದಬಲೆಗಿಂತೆ[illegible]ಸೆಲೆ ಮಾನಿನೀ ನಾವು ।
ಹಿಂದೆ ಮಾಡಿದ ಪಾತಕದ ಫಲದಿ ನಂದನರ- ।
ನಿಂದು ಪಡೆಯಿತ್ತಿಲ್ಲವದರಿಂದ ಬಾರದುದ ಬಯಸಿ ಬಾಯಾರಬಹುದೆ ॥
ಎಂದೆನಲ್ಬಂಜೆ ನಾಂ ನಿನಗೊರ್ವ ಸುದತಿಯಂ ।
ತಂದೊಡಾಗುವುದು ಸಂತಾನಮೆನಲತಿರೋಗ- ।
ದಿಂದ ನವೆವವರಂಗಭೂಷಣವ ಬಡವರುತ್ತಮ ಗೃಹವ ಬಯಸುವಂತೆ ॥ ೧೩ ॥
ವನಿತೆಯರನತಿವೃದ್ಧ ಬಯಸೆ ಲೋಕಂ ನಗದೆ ।
ಯೆನೆ ಭೋಗಕಾಂಕ್ಷೆಯಿಂ ತಂದೊಡಪಹಾಸ್ಯ ಸ- ।
ಜ್ಜನಪುತ್ರಸಂತಾನವೃದ್ಧ್ಯರ್ಥಮಾಗಿ ತಂದೊಡೆ ದೋಷಮಿಲ್ಲವೆಂದು ॥
ವಿನುತಗುಣಮಣಿವಿಭೂಷಣೆ ನೀತಿವಾತನುಸಿ- ।
ರ್ದನಿಯನನೊಡಂಬಡಿಸಿ ಹರಿಸದಿಂ ತನ್ನ ನಿಜ ।
ಜನಕ ಗುಣಭದ್ರಸೆಟ್ಟಿಯ ಕಿರಿಯಮಡದಿ ಬಂಧುಶ್ರೀಯಬಳಿಗೆ ಬಂದು ॥ ೧೪ ॥
ಚಿಕ್ಕಮ್ಮ ಕೇಳು ಹಿಂದಣ ಜನ್ಮದೊಳು ನಾನು ।
ಮಕ್ಕಳಂ ಬಯಸಿ ದೈವದ ಮುಂದೆ ನೋಂಪಿಯಂ ।
ಚೊಕ್ಕಟದಿ ಮಾಡಿತಿಲ್ಲದರಿಂದಮೀ ನನ್ನ ಬಸಿರು ಪಾಳ್ಪಸಿರಾದುದು ॥
ಮಕ್ಕಳಾಸೆಗೆ ನಿನ್ನ ಪಿರಿಯಳಿಯುಗನ್ನಿಗರ ।
ಮಕ್ಕಳಂ ತಂದುಕೊಡಲವರು ನನಗೆರವಿಂತಿ- ।
ದಕ್ಕೆ ಸಂಶಯ ಬೇಡ ನಿನ್ನ ಮಗಳೆನ್ನ ಕಿರುದಂಗಿ ಕನಕಶ್ರೀಯನು ॥ ೧೫ ॥
ಅತಿಹರುಷದಿಂದೀವುದೆನಲೆಂದಳವಳಿಂತು ।
ರತಿರೂಪ ಹರಿದು ಹತ್ತಿಸಿದಂತುಟಿಸೆವ ನಿ- ।
ನ್ನತಿಶಯದ ರೂಪುಗಂಡಿವಳನಾಳುವುದಿಲ್ಲವದರಿಂದ ಕೊಡುವುದೆನಗೆ ॥

ಹಿತವಲ್ಲವೆಂದೆನಲ್ಕಾನೀಭವಕ್ಕೆ ಸ- ।
ನ್ನುತಿವಡೆದ ಬ್ರಹ್ಮಚರ್ಯ್ಯವ್ರತವ ದಿಟದಿ ಜಿನ- ।
ಪತಿಸಾಕ್ಷಿಯಲ್ಲಿ ಕೈಕೊಂಬೆನೆಂದಾ ತಾಯನೊಡಬಡಿಸಿ ತತ್ಕಾಮಿನಿ ॥ ೧೬ ॥
ಅನುಜೆ ಕನಕಶ್ರೀಯನಾ ನಿಜೇಶಗೆ ಬಂಧು- ।
ಜನದರಿಕೆಯಲ್ಲಿ ಮದುವೆಯನೊಸೆದು ಮಾಡಿಯಾ ।
ಮನೆಯಾರಭಾರವೆಲ್ಲವನವಳ ಕೈವಶಂ ಮಾಡಿ ಸಂಶಯಮಿಲ್ಲದೆ ॥
ಅನುದಿನಂ ಭೋಜನದ ಹೊತ್ತಲ್ಲದುಳಿದ ಹೊ- ।
ತ್ತಿನಿಸು ಮನೆಯೊಳ್ತಡಂಗೆಯ್ಯದೆ ಬಸದಿಯೊಳ್ ।
ಜಿನಪೂಜೆ ಜಿನಪುರಾಣಕ್ಕೆ ಮನಮಿತ್ತು ಕಾಲವನು ಕಳೆಯುತ್ತುಮಿರಲು ॥ ೧೭ ॥
ವನಿತೆ ಜಿನದತ್ತೆ ಮನೆಮನೆವಾರ್ತೆಯಿರವಿಗೊಂ- ।
ದಿನಿಸು ಮನಗೊಡದೆ ಬಸದಿಯೊಳು ಬಹುಪೂಜೆಯಿಂ ।
ದಿನವ ನೂಂಕುವುದನರಿದಾ ನಿಜೇಶಂ ವೃಷಭದಾಸವೈಶ್ಯಂ ಹರುಷದಿ ॥
ತನಗವಳ ಸದ್ವಿಧಿಯೆ ವಿಧಿಯಾಗಿಯವಳೊಡನೆ ।
ಜಿನಕಥಾತ್ಕೋದ್ಭೂತನಾಗಿರಲ್ಬಳಿಕೊಂದು ।
ದಿನದೊಳಾ ಕಾಂಚನಶ್ರೀ ತನ್ನ ತಾಯಿ ಬಂಧುಶ್ರೀಯಬಳಿಗೆ ಬರಲು ॥ ೧೮ ॥
ಎಲೆ ಮಗಳೆ ನಿನ್ನ ವಲ್ಲಭನು ನಿನ್ನೊಳು ಲೇಸ ।
ನೆಲೆಮಾಡಿಕೊಂಡಿರ್ಪನೇ ಎಂದು ಕೇಳಲಾ ।
ಲಲನೆ ಕೂರುಗುರಿಂದ ಕಣ್ಣನೀರಂ ಮಿಡಿಯುತೀ ತೆರದಿ ನುಡಿದಳಾಗ ॥
ಪಲವ ಗಳಪಲದೇಕೆ ನಾನವನ ಮನೆಯುಮಂ ।
ಬಲಗಾಲು ಮುಂತಾಗಿ ಹೊಕ್ಕ ದಿನದಿಂದ ಬಲು- ।
ಗೆಲಸವಲ್ಲದೆ ಯಿನಿಸು ತಲೆಯ ತುರಿಸುವೊಡೆಹೊತ್ತಂ ಕನಸಿನಲ್ಲಿ ಕಾಣೆ ॥ ೧೯ ॥
ಸವತಿಯುಮಗಳ್ಗೆನ್ನ ಸವತಿಯಾಗೆಂದು ಪೊಡ- ।
ಲವಿಕಾರದಿಂ ಕೊಟ್ಟು ಬಳಿಕೀಗ ನಿನಗೆ ನಿ- ।
ನ್ನ ವಲ್ಲಭನೊಳ್ಳಿತಾಗಿರ್ಪನೇ ಯೆಂಬ ನುಡಿ ಯೊಳ್ಳಿತಾಯ್ತಾನಂದಿನಾ ॥
ಭವದಲ್ಲಿ ಹಸೆದಾನಮಂ ಮಾಡಲೊಲ್ಲದೇ ।
ಇವಳೆನ್ನ ಬದುಕ ಬಿಡಳೆಂದೆಂಬ ಮುಂಡಮೊರೆ- ।
ಯವಿವೇಕತನಮಲ್ಲವೇ ಎಂದು ಬೇಸರಂ ನುಡಿದು ಬಳಿಕಿಂತೆಂದಳು ॥ ೨೦ ॥
ಹಸಿದಹೊತ್ತಿಗೆ ಬಂದು ಮಿಂದುಂಡು ಬಳಿಕ ಮೇ- ।
ಲೊಸೆದು ನೋಂಪಿಯನೋನಬೇಕೆಂಬ ನೆವದಿಂದ ।
ಪೊಸತುಪ್ಪ ಕಜ್ಜಾಯ ಮುಡಿಹೂವು ಕರ್ಪೂರ ವೀಳೆಯಂಗಳನೆ ಕೊಂಡು ॥
ಬಸದಿಯೊಳಗಾಡಾಳೆಯಂ ಕೂಡಿಕೊಂಡು ಸಂ- ।
ತಸದಿನೊಂದಿನಿಸಗಲದಿರ್ಪನಲ್ಲದೆ ನನ್ನ ।
ದೆಸೆಯೆಂಬುದಂ ನೋಡಲರಿಯದವನೊಳ್ಬಾಳು ನನಗೆಂತು ಸಂಭವಿಪುದು ॥ ೨೧ ॥

ಇಂದುಟ್ಟ ಸೀರೆ ಹೊಲೆಗೆಂಡು ಸೀರಂ ಕಾಣು- ।
ವಂದಿಗಲ್ಲದೆ ಉಳಿದದಿನ ಸಡಿಲಿಸುವುದನೇ- ।
ನೆಂದರಿಯೆನಾಂ ಹೊತ್ತು ಮೂಡಿಮುಳುಗುವನ್ನೆವರ ತೊತ್ತುಗೆಲಸವನೆ ತುಬ್ಬಿ ॥
ಬೆಂದೊಡಲಬೇಗೆಯುವನೇತರದಿ ತಂಪಿಸುವೆ- ।
ನೆಂದು ಸುಖ ಬೇಸರಂ ನುಡಿವೊಡೊಬ್ಬರ ಕಾಣೆ- ।
ನೊಂದು ಹೊರಸಿನೊಳೊಬ್ಬಳೇ ಡೊಗ್ಗಿರಿದು ಕೆಡೆವೆನೆಂಬವಳೊಳಿಂತೆಂದಳು ॥ ೨೨ ॥
ಪಜ್ಜಳಿಸುವೀ ಹರೆಯದವಳು ನೀನಿರ್ದಂತೆ ।
ಲಜ್ಜೆಗೆಡುವುದನು ಭಾವಿಸದೆ ನರೆತೆರೆಯಿಂದ ।
ಜರ್ಝರಿತವಾದ ಮುದುಪಾರಿಯೊಳು ದೈವ ಗುರುವಿನ ಮುಂದೆ ಖೊಯಲ್ಲದ ॥
ಉಜ್ಜುಗದೊಳಿರಲು ನರಕದೊಳು ಹುಟ್ಟಿಸಿ ಹಿರಿದು ।
ನಿರ್ಜ್ಜಡಿಸುವುದು ಕರ್ಮ್ಮಂ ಭವಭವಕ್ಕೆಂಬ ।
ಬೆಜ್ಜರಮುಮಂ ನೋಡದಿಂತಿರ್ಪ್ಪುದವಗಂಗಜನ ಗೊಡ್ಡವೈಸಲ್ಲದೆ ॥ ೨೩ ॥
ಉತ್ತಮದ ರೂಪುವಡೆದಾ ರಂಭೆಯೂರ್ವ್ವಶಿ ತಿ- ।
ಲೋತ್ತಮೆ ಸುಕೇಶಿ ಮೇನಕಿ ಮಂಜುಘೋಷೆಯರ ।
ವೊತ್ತದೊಳ್ ಮನವ ನೆಲೆಗೊಳಲೀಯದೆ ತಿರಿಕ ತಾಪಸನ ಪೆಂಡಿತಿಯೊಳು ॥
ಚಿತ್ತಮಂ ಚೆನ್ನಾಗಿ ಬಂಧಿಸಿ ಬಳಿಕ್ಕ ದೇ- ।
ವೋತ್ತಂಸನಂಗಮಂ ನೆರೆ ಕೆಡಿಸಿತಿಲ್ಲವೇ ।
ಚಿತ್ತಭವನುಳಿದ ನಾಡಾಡಿಗರನೇನ ಮಾಡುವನೆಂದು ಕಂಡರಾರು ॥ ೨೪ ॥
ಎನುತೆಲೇ ಮಗಳೆ ಕೇಳೀ ದೊಡ್ಡ ಕಾರ್ಯ್ಯಕ್ಕೆ ।
ನಿನಗಿನಿತು ಗುಜ್ಜುಗುರುಕೇನು ಕಾರಣ ಹೇಳು ।
ತನಗೆ ತನುಜಾತರಿಲ್ಲೆಂದು ತನ್ನಾ ಹಾಳುಮನೆಯ ಕುಗ್ಗೆಲಸಕಾಗಿ ॥
ನನಗೆ ಬೋಸರಿಗತನಮುಂ ನುಡಿದು ಬದುಕುಳ್ಳ ।
ಮನೆಗೆ ಕೊಡುವುದ ಜಿಡಿಸಿ ತನಗೆ ತೊತ್ತುಂ ಮಾಡಿ ।
ನಿನಗೆ ದೇಹಾರಮಂ ಮಾಡಿದವಳಿಗೆ ತಕ್ಕುಪಾಯಮಂ ಬಲ್ಲೆ ನಾನು ॥ ೨೫ ॥
ನೋಡೊಮ್ಮೆ ಬಣಜಿಗಿತ್ತಿಯ ಕಾಲುಕೀಲ ಸಿ- ।
ನ್ನಾಡಿಕೆಡಿಸಲದೇಕೆ ನಿನಗೀಯವಸ್ಥೆಯಂ ।
ಮಾಡಿದವಳಂ ಕೊಂದು ನಿನ್ನ ಗಂಡನೊಳು ನೀನೊಲವಿನಿಂ ಬಾಳುವಂತೆ ॥
ಮಾಡದೊಡೆ ನಾನು ಹೊತ್ತವು ಮೊಲೆಗಳೇಯೆಂದು ।
ಮಾಡಿ ಶಪಥವನು ಮಗಳಂ ಸಂತೈಸಿ ಚಿಂತೆ ಬೇಡೆಂದು ।
ಕಳುಹಿಯವಳಂ ಕೊಲ್ವುಪಾಯಮಿನ್ನಾವುದೆಂದೆಣಿಸುತಿರಲು ॥ ೨೬ ॥
ಆ ಲಲನೆಯಾಲಯಕ್ಕೊಂದುದಿನದೊಳ್ಪಿಡಿದ ।
ಶೂಲಡಮರುಗ ವೃಟ್ಟ ಪುಲಿದೊಗಲ್ ಶಂಖಮಣಿ ।
ಮಾಲೆ ಕುರುಜಿಡೆ ತೊಡೆದ ಭಸ್ಮ ಪಲವುಂ ತೆರೆದ ಮುದ್ದುನುರವಡಿಯ ಚೀಲ ॥

ಸ್ಥೂಲಾಂಗನತಿರೌದ್ರರೂಪಸಮುಪೇತ ಕಾ- ।
ಪಾಲಿಕಾನಾಮದವಧೂತವೇಷಂ ಭುಕ್ತ ।
ಕಾಲೋಚಿತಂ ಯೋಗಿ ಭವತಿಭಿಕ್ಷಾಂದೇಹಿಯೆನುತೊರ್ವನೆಯ್ತಂದನು ॥ ೨೭ ॥
ಇಂತು ಬಂದಂಗಣದೊಳಗಿರ್ದ್ದಾ ಸಿದ್ಧನಂ ।
ಕಾಂತೆ ಕಂಡೀ ಮಹಾತ್ಮಂ ನಮ್ಮ ದೇಶಕ್ಕೆ ।
ಪಿಂತೆ ಬಂದವರಂತುಟಿಲ್ಲಮಿವನಿಂ ಕಾರ್ಯಮಂ ಕಾಣಬಹುದೆನುತ್ತ ॥
ಸಂತೋಷದಿಂದಾತನೊಡಲು ದಣಿವಂತೆ ಪಲ- ।
ವುಂ ತೆರದ ರುಚಿವಡೆದ ಹಸನಾದ ನವಭಕ್ಷ್ಯ- ।
ಮಂ ತಂದು ಸದ್ವಿನಯಭಕ್ತಿಯಿಂ ಕಯ್ಯಪಾತ್ರೆಯೊಳಗಿತ್ತಳಾಗ ॥ ೨೮ ॥
ಕರುವಿಂಗೆ ಕಾರ್ಯಾರ್ಥವಾಗಿ ಹುಲ್ಲಂ ಕೊಟ್ಟು ।
ಕರವನೆಲ್ಲವನು ಕರಿಪಿಂ ಕರೆದುಕೊಂಬಂತೆ ।
ಯೆರಕದಿಂದಾ ವೈಶ್ಯಸತಿ ದಿನಂಪ್ರತಿಯುವಗೆ ಯೊಳ್ಳುಣಿಸನುಣಿಸುತಿರಲು ॥
ನೆರೆ ಸವಿಯುತವನವಳೊಳಿಂತೆಂದು ನುಡಿದನೀ ।
ತೆರದಿ ಮಾಡುವಳು ನೀನೆನಗೆ ತಾಯಲ್ಲದೇ ।
ಪೆರತೊಬ್ಬಳಲ್ಲವದರಿಂ ನಿನಗೆ ನಾನೊಂದು ಪುರುಷಾರ್ಥಮಂ ಮಾಳ್ಪೆನು ॥ ೨೯ ॥
ಹೆತ್ತವರು ಶಾಸ್ತ್ರದಾನವನೊಸೆದು ಮಾಡಿದವ- ।
ರುತ್ತಮ ವ್ರತವನುಪದೇಶಗೆಯ್ದವರು ಸವಿ- ।
ದುತ್ತನೊಲಿದಿತ್ತು ರಕ್ಷಿಸಿದವರ್ ಪ್ರಾಣಪ್ರತಿಷ್ಠೆಯಂ ಮಾಡಿದವರು ॥
ಚಿತ್ತೈಸು ತಾಯೆ ಈಐವರು ಗುರುಸ್ಥಾನ- ।
ಮೆತ್ತಾನುಮಿವರ ಮರೆದೊಡೆ ಮೆಯ್ಕುರಂ ಹುಳಿತು ।
ಸತ್ತು ನರಕದ ಹೇಕುಳಿಯೊಳಾಳುತಿಹರಿದಕ್ಕೆ ಸಂದೇಹ ಬೇಡ ॥ ೩೦ ॥
ಅನಿತರಿಂ ನಿನ್ನ ಮನಸಿನಭೀಷ್ಟಮಂ ಪೇಳು ।
ನನಗೆ ಬಾರದ ವಿದ್ಯೆಯೀ ಭೂತಳದೊಳಿಲ್ಲ ।
ನಿನಗದರಿನೊಳ್ಳಿತಂ ಮಾಳ್ಪೆನೆನೆ ಬಡವಂ ನಿದಾನಮಂ ಕಂಡ ತೆರದಿ ॥
ಅನುರಾಗದಿಂದೆನ್ನ ಮಗಳನಲೆಪಡಿಸುವೀ ।
ಜಿನುಗು ಜಿನದತ್ತೆಯಂ ಕೊಲ್ಲಬೇಕೆಂದೆನಲ್ ।
ಜನನಿ ಕೇಳೆನಗಿಂತಿದಾವಗಹನಂ ನಾನು ಬಲ್ಲ ವಿದ್ಯಂಗಳೊಡನೆ ॥ ೩೧ ॥
ನಾಳಿನೀ ಕೃಷ್ಣಪಕ್ಷದ ಚತುರ್ದಶಿವರಂ ।
ತಾಳಿಕೊಂಡಿರು ಮನಸಿನೊಳು ಚಿಂತೆಬೇಡ ನೀಂ ।
ಪೇಳಿದಂದದಿ ನಿನ್ನ ತನುಜೆ ಕನಕಶ್ರೀಗೆಯೆಡರಿಲ್ಲವೆಂಬ ತೆರದಿ ॥
ಬಾಳಮಾಡುವೆನು ಮಾಡದೊಡೆ ಕುಂಡದ ಶಿಖಿ- ।
ಜ್ವಾಲೆಯೊಳಗಳಿವೆನಿಂತಿದಕೆ ತಪ್ಪಿದೊಡೆ ಕಾ- ।
ಪಾಲಿಕಾಸಿದ್ಧನಲ್ಲಂ ನಾನನಾಮಿಕಂ ನಂಬೆನ್ನ ಮಾತನೆಂದು ॥ ೩೨ ॥

ಪಿರಿದು ಪಂಥವನಾಡಿ ತಾ ನೊದಲು ಕುರಿತ ದಿನ- ।
ದಿರುಳಿನೊಳದಕ್ಕೆ ತಕ್ಕರ್ಚನಾದ್ರವ್ಯಸಹಿ- ।
ತುರುಮುದದಿ ಪೊಳಲ ಪೊರಗಣ ರುದ್ರಭೂಮಿಗೆ ಶುಚಿರ್ಭೂತನಾಗಿ ಬಂದು ॥
ಭರದಿನೊಂದಾನೊಂದು ಪೆಣನ ಕಯ್ಯೊಳಗೊಂದು ।
ಕರವಾಳ ಕೊಟ್ಟು ಕುಳ್ಳಿರಿಸಿ ಪೂಜೆಯು ಮಾಡಿ ।
ವರಮಂತ್ರತಂತ್ರದಿಂದದರ ಮೇಲಾಹ್ವಾನಿಸಲ್ಕೊಂದು ಭೇತಾಳನು ॥ ೩೩ ॥
ಪಿಡಿದು ಖಡ್ಗವ ಜಡಿದು ಕೊಡು ಬೆಸನ ಕೊಡು ಬೆಸನ ।
ತಡವಮಾಡಬೇಡೆಂಬುದಂ ಕೇಳಿಯುದನಿಂತು ।
ನುಡಿದನೀ ಊರ ಬಸದಿಯೊಳು ಕನಕಶ್ರೀಯ ಸಾಪತ್ನಿ ಜಿನದತ್ತೆಯಂ ॥
ಕಡಿಖಂಡಮಂ ಮಾಡಿ ಬಿಸುಡೆಂಬ ನುಡಿಗೇಳಿ ।
ಪೊಡವಿಯಾಗಸವೆಂಟುದೆಸೆಯುಂಬುರಾಶಿಗ- ।
ಳ್ಕಡನಡುಗುವಂತೆ ಹೂಂಕರಿಸುತಾಳುತ್ತೇಳ್ದು ಘುಡುಘುಡಿಸುತಿಂತೆಂದುದು ॥ ೩೪ ॥
ಉರುಹು ಜವಹುರವ ಮಿಳ್ತುವಿನಗಂಟಲ ಮೆಟ್ಟು ।
ಸಿರವ ಸೆಂಡಾಡು ಮಾರಿಯು ಕಾಲಭೈರವನ ।
ಭರದಿ ಬಾಳ್ದಲೆಗೊಂಡು ಬಾಯೆಂಬ ಬೆಸನ ಹೇಳದೆ ಎನಗೆ ಎಲೆ ಕಪಾಲಿ ॥
ನರಕೀಟಕವನು ಬಡಬಣಜಿಗಿತ್ತಿಯ ಕೊಂದು ।
ಬರಹೇಳ್ವುದೆನ್ನ ಹಣೆಯೊಳು ಮುನ್ನ ಬಿದಿ ಬರೆದ ।
ಬರೆಹವಲ್ಲವೆ ಕಟಕಟಾ ಎನುತ ಬಿಸುಸುಯ್ಯುತಿರದೆ ಬಳಿಕಿಂತೆಂದುದು ॥ ೩೫ ॥
ಸಗ್ಗಕ್ಕೆ ಹರಿದಾಳಿಮಾಡಿ ಹರಿಸೂರೆಗೊಳು ।
ದಿಗ್ಗಜಂಗಳನು ಧಿಕ್ಕರಿಸಿ ತಲೆಮುರಿಯುಹುಯಿ ।
ನುಗ್ಗುನುರಿ ಮಾಡು ಕುಲಭೂಧರವನಲ್ಲಕಲ್ಲೋಲಮಾಡಂಬುಧಿಯನು ॥
ಒಗ್ಗರಿಸು ಸಚರಾಚರೋರ್ವಿಯ ಪದಾರ್ಥಮಂ ।
ನಿಗ್ಗರಿಸು ನಿಟಿಲಲೋಚನನನೆಂದೆನ್ನದೇ ।
ಎಗ್ಗತನಮಲ್ಲವೇ ಎನಗೆಯೀ ಹುಲ್ಪೆಸಸನೀಂ ಪೇಳ್ವುದೆಂದೆಂಬುದು ॥ ೩೬ ॥
ಬಸದಿಯೊಳಗಿರ್ದರ್ಹ ಬತ್ತಲೆಯ ದೈವಕೆ ಸವಣ- ।
ರೊಸೆದರ್ಚಿಸಿದ ಹಿಟ್ಟು ಕಡುಬಿನಾಸೆಗೆ ಬಂದ ।
ದೆಸೆಯಾಳ್ವರಾ ಕ್ಷೇತ್ರಪಾಲನಾ ಬ್ರಹ್ಮನಾ ಧರಣೇಂದ್ರರಾದಿಯಾದಾ ॥
ಅಸಮಸಾಹಸದ ಯಕ್ಷರುಗಿಕ್ಷರೆಂಬವರು ।
ಪುಸಿಯ ಪಂಥಮದೇಕೆ ಕಾಪಾಲಿ ಕೇಳೆನ್ನ ।
ದೆಸೆಯುನಿನಿಸಂ ಕೇಳಲೊಡನೆ ಕಣ್ಗೆಟ್ಟು ಕಮ್ಮರಿಯುಬಿದ್ದೋಡಬೇಕು ॥ ೩೭ ॥
ನೋಡುನೋಡೊಮ್ಮೆ ನಿಮಿಷದೊಳವಳ ತಲೆಯ ಸೆಂ- ।
ಡಾಡುವೆಂ ಬಸಿರಬಗಿದಾ ಬಿಸಿಯ ನೆತ್ತರಂ ।
ತೋಡುವೆಂ ಕಡಿಕಡಿದು ಖಂಡಮಂ ಬಿಸುಡುವೆಂ ನಾರೆತ್ತುವೆಂ ನರವನು ॥

ಅಡಿ ಕೆಡಿಸಲದೇಕೆ ನಿನ್ನ ಮನಕಳ್ತಿಯಂ ।
ಮಾಡುವೆನೆನುತ್ತ ರೌದ್ರಾವೇಶಮಂ ಪಡೆದು ।
ಕೂಡೆ ಕುಬುಬೆಂದು ಬೊಬ್ಬಿರಿದು ಕೂರಸಿಯು ಜಡಿಯುತ್ತ ನಡೆತರುತಿರ್ದುದು ॥ ೩೮ ॥
ಬೆದರ್ವ ಭೇತಾಳ ಬೆಚ್ಚುವ ಬ್ರಹ್ಮರಾಕ್ಷಸಗ- ।
ಳದುರ್ವ ಭೂತಂಗಳೋಡುವ ಪಿಶಾಚಂ ಪಿಂಡು- ।
ಗೆದರ್ವ ಮರುಳಿನ್ನೇವೆವೆಂದು ಕೈನೆಟ್ಟಿಯಂ ಮುರಿವ ಶಾಕಿನಿ ಡಾಕಿನಿ ॥
ಗದಗಾಪುಗೊಂಬಾ ಗ್ರಹಂ ನಡುಗುವೊತ್ತರಗ- ।
ಳದಟುಗೆಡುವಾ ವ್ಯಂತರಗಳೆಸೆದುವಂತಲ್ಲಿ ।
ಯದುಭುತಂ ಒಡೆದು ಕೆಕ್ಕಲಗೆಲೆದು ಬೊಬ್ಬಿರಿವ ಭೇತಾಳಿಯಂ ಕಾಣುತ ॥ ೩೯ ॥
ಈ ತೆರದಿನಾ ಸ್ಫೋಟಿಸುತ್ತ ಬಂದಾ ರುದ್ರ ।
ಭೂತಳವ ಪೊರಮಟ್ಟು ಪುರವರವ ಹೊಕ್ಕು ಪೃ- ।
ಥ್ವೀತಳಂ ನಡನಡುಗೆ ನಡೆವ ರಭಸಕ್ಕದಂ ಕಾಣುತಾ ಪೌರರಾಗ ॥
ಏತರಿಂದೀ ನೆಲಂ ಕಂಪಿಸಿತ್ತೆನುತ ಸಮು- ।
ಪೇತ ವಿಸ್ಮಯಹೃದಯರಾಗಲಾ ಭೇತಾಳಿ ।
ವೀತರಾಗಾಲಯದ ತಲೆವಾಗಿಲಂ ಮುಟ್ಟಿ ನಡೆತಂದು ನಿಂದುದಾಗ ॥ ೪೦ ॥
ಅದರೊಳಾ ಪರ್ವತಿಥಿಯುಪವಾಸಮಂ ಮಾಡಿ ।
ಹೃದಯಶುದ್ಧಿಯೊಳು ಜಾಗರಮಿರ್ದು ಪೂಜೆಯಂ ।
ಮುದನಾರಿಗತಿವಿಭವದಿಂ ಮಾಳ್ಪ ಜಿನದತ್ತೆ ವೃಷಭದಾಸರ ಮೆಯ್ಯೊಳು ॥
ಪುದಿದ ಸಮ್ಯಕ್ತ್ವದ ಮಹಾತ್ಮೆಯುಮನಾಚೈತ್ಯ- ।
ಸದನದೊಳ್ಪಿಂದ ಯಕ್ಷರ ಮಹಿಮೆಯಂ ಕಾಣು- ।
ತೆದೆಹಾರಿ ಕೆಂಡಮಂ ಕಂಡಿರುಪೆಯಂತೆ ದೂರಾಂತರದೊಳೇ ನಿಂದುದು ॥ ೪೧ ॥
ಸಿಂಗಮಂ ಕಂಡ ಸಿಂಧುರದಂತೆ ನೀರ ಕಂ- ।
ಡಂಗಾರದಂತೆ ಶಾರ್ದೂಲಮಂ ಕಂಡ ಸಾ- ।
ರಂಗದಂತುರಗನಂ ಕಂಡದರ್ದುರನಂತೆ ಹೊತ್ತಕಂಡಿರುಳಿನಂತೆ ॥
ಮಂಗಲಗುಣಾಭರಣೆ ಜಿನದತ್ತೆ ಪೂಜೆಗೆ- ।
ಯ್ವಂಗಜಾರಿಯ ಭವನಮಂ ಕಂಡು ಭೇತಾಳಿ- ।
ಯಂಗಯಿಸಲಮ್ಮದೇ ತಲೆವಾಗಿಲೊಳ್ನಿಂದು ತಲೆದೂಗುತಿರ್ದುದಾಗ ॥ ೪೨ ॥
ಅರಸನಂ ಕಂಡನಾಮಿಕನಂತೆ ದೂರದೊ- ।
ಳ್ಕರಯುಗಲಮಂ ಮುಗಿದು ಮೂಮೆಬಲವಂದು ಬಂ- ।
ಧುರಗುಣಾಲಂಕೃತೆಯನೊಸೆದು ಕೊಂಡಾಡಿ ಬಳಿಕಾ ರುದ್ರಭೂತಳಕ್ಕೆ ॥
ಮರಳಲಾ ಕಾಪಾಲಿ ಕಂಡೆಲೇ ಭೇತಾಳಿ ।
ಪಿರಿದು ಪಂಥವನಾಡಿ ಪೆಣ್ಗೂಸ ಕೊಲಲಂಜಿ ।
ತಿರುಗಿದುದು ಹಿರಿದು ಹಸನಾಯ್ತೆಂದು ತಲೆದೂಗುತಿಂತೆಂದು ನುಡಿದನಾಗ ॥ ೪೩ ॥

ಮಾತನಾಡದೆ ಕಾರ್ಯ್ಯವಮಂ ಮಾಡುವಾತನೇ ।
ಖ್ಯಾತಿವಿದನಾ ಮಾತನಾಡಿದಂದದಿ ಮಾಡು- ।
ವಾತನೇ ಮಧ್ಯಮಂ ಮಾತ ಹಿರಿದುಂ ನುಡಿದು ಮಾಡದವನೇ ಕನಿಷ್ಠಂ ॥
ಭೂತಳದೊಳಂತವರ್ಪ್ಪನಸುಮಾವೆಲವದಕು- ।
ಜಾತದ ಸಮಾನವೆಂದೆಂಬ ಸುಜನರದೊಂದು ।
ನೀತಿಯುಂ ನೆನೆಯದೇ ಸವಣರಂ ಕಂಡಂಜಿ ಬಂದುದೊಳ್ಳಿತ್ತಾಯಿತು ॥ ೪೪ ॥
ಆಡುವುದು ಕಡು ದೊಡ್ಡಮಾತು ಕಂಡಾ ಅಂಜಿ ।
ಯೋಡುವುದು ತಾಂ ಚೋರ ಕಂಡಿಯೆಂಬಂದಮಂ ।
ಮಾಡಿದೆಯಲಾ ಎನುತ ಗಹಗಹಿಸಿ ನಕ್ಕು ತಲೆಯುಂ ತೂಗಿ ಕಾಪಾಲಿಕಂ ॥
ನೋಡುತಿರೆ ಭೂತಕೋಟಿಗಳು ಮರುಪೂಜೆಯುಂ ।
ಮಾಡಿಯಾ ಭೇತಾಳಿಯಾಹ್ವಾನಮಂ ತಡಂ ।
ಮಾಡದೇ ವಿಸರ್ಜ್ಜಿಸಿ ಬಳಿಕ ತನ್ನಾಶ್ರಮಕ್ಕಾ ಇರುಳೊಳೆಯ್ತಂದನು ॥ ೪೫ ॥
ಮತ್ತೆರಡು ರಾತ್ರಿಯೊಳಗೀತೆರದಿ ಕಳುಹಲಾ ।
ಉತ್ತಮೆಯು ಬಳಿಗೆಯ್ದಿ ಮುನ್ನಿನಂದದಿ ಭೀತಿ- ।
ವೆತ್ತು ಮಗುಳಲ್ಕದಂ ಕಂಡು ನಾಲ್ಕನೆಯ ರಾತ್ರೆಯೊಳಗಾಹ್ವಾನೆಯುಂ ಮಾಡಲು ॥
ಕತ್ತಿಯುಂ ಜಡಿಯುತೆಲ್ದಲವೊ ಕಾಪಾಲಿಯು- ।
ನ್ಮತ್ತಫಲಮಂ ತಿಂದರಂತೆ ತತ್ಪುಣ್ಯಾದಿ ।
ಕೀರ್ತಿ ನಿರ್ದೋಷಿಯುಂ ಕೊಲಹೇಳಿದೊಡೆ ಕೊಲುವುದೆನಗೆಯಘಟಿತಮೆನುತ್ತ ॥೪೬॥
ಕೊಡುಕೊಡೆನಗಾಹುತಿಯನತಿ ದೋಷಿಯಾದವರ ।
ಕೊಡದಿದ್ದೊಡೆಲವೊ ನಿನ್ನೀ ತಲೆಯ ನಿಮಿಷದೊ- ।
ಳ್ಕಡಿಖಂಡವಂ ಮಾಳ್ಪೆನೆಂದು ಘುಡುಘುಡಿಸಿಯಾರುತ್ತೆಳ್ದು ನಡೆದುಬಂದು ॥
ಜಿಡದೊದರ್ವ ಭೇತಾಳಿಯೊಳಗಿಂತು ಕಾಪಾಲಿ ।
ನುಡಿದನಾ ಜಿನದತ್ತೆಯಾ ಕನಕಲತೆಯರೊಳು ।
ಕಡುದೋಷಿಯಾದವರ ಕೊಲ್ಲೆಂಬ ನುಡಿಗೇಳಿ ಲೇಸಾಯಿತೆಂದು ಬಂದು ॥ ೪೭ ॥
ಕರೆಗಣ್ಣ ಕೋಪಾಗ್ನಿ ಕಡುಮಸಗುತೆಯ್ತಂದು ।
ನಿರಪರಾಧಿಯಮೇಲೆ ದೋಷಮಂ ಹೊರಿಸಿದಾ ।
ದುರುಳೆಯುಲ್ಲಾ ನೀನೆನುತ್ತ ಕನಕಶ್ರೀಯನೊತ್ತಿ ಮೂದಲಿಸಿ ಕೊಂದು ॥
ಅರಿದೊಡಲಬಗಿದು ಸಿಳ್ದಾ ಸ್ಮಶಾನಕೆ ಬಂದು ।
ಭರದಿ ತಾನೆಸಗಿದುದನಾ ಸಿದ್ಧಕಾಪಾಲಿ- ।
ಗೊರೆಯುಲೆತ್ತಂ ಮೆಚ್ಚಿಲೆತ್ತ ಚಪ್ಪಟೆಯಾಯಿತೆಂದದಂ ಬೀಳ್ಕೊಟ್ಟನು ॥ ೪೮ ॥
ಇತ್ತ ಮುದದಿಂದ ಬಂಧುಶ್ರೀಕರಂ ಹರೆಯ ।
ಹೊತ್ತರೊಳಗೆಳ್ದು ಕಾಪಾಲಿಕನ ತಂತ್ರದಿಂ ।
ಸತ್ತಳೋ ಜಿನದತ್ತೆಯೆಂಬುದಂ ನೋಡಬೇಕೆಂದವಳ ಮನೆಗೆ ಪೋಗಿ ॥

ತತ್ತರಂದರಿದು ತಲೆ ಜೇರಾಗಿ ಕಡಿಕಂಡ- ।
ವೆತ್ತು ಬಿಳ್ದಿರ್ದ ಮಗಳಂ ಕಂಡು ಪಾಪಿ ಜಿನ- ।
ದತ್ತೆ ಮುಗುದೆಯ ರೂಪಮಂ ಕಾಣಲಾರದೇ ಕೊಲಿಸಿದಳೆನುತ್ತ ಬಗೆದು ॥ ೪೯ ॥
ಹಣ್ಣನಿಟ್ಟೊಡೆ ಕಾಯಿಬಿಳ್ದ ತೆರದಿಂ ನಾನು ।
ಹಣ್ಣಿದಾ ಕಾರ್ಯಮಂ ಪೈಸರಂಗೊಳಿಸಿ ಮಸಿ- ।
ವಣ್ಣಮಂ ಮಾಡಿದೆಯಲಾ ಪಾಪಿದೈವವೇ ಎಂದು ಬಸಿರಂ ಹೊಸೆಯುತ ॥
ಹೆಣ್ಣಹೆರುವುದರಿಂದ ಮಣ್ಣ ಹೊರುವುದು ಲೇಸು ।
ಕಣ್ಣುಳ್ಳವರು ಕಾಣಬೇಡವಲಾ ಎಂದು ।
ಸುಣ್ಣಗಲ್ಲುಕ್ಕಿದಂತೆ ಕುದಿದು ಬಂಧುಶ್ರೀ ನೃಪಾಲಯಕೆ ನಡೆದುಬಂದು ॥ ೫೦ ॥
ಮೊರೆಯೊ ಮೊರೆಯೋ ಧರ್ಮರಾಯ ಮಾನಿಯನೆನ್ನ ।
ಕಿರುಗೂಸ ಕಾಣಲಾರದೆ ಪಾಪಿ ಜಿನದತ್ತೆ ।
ಬರಿದೆ ಗೊಡ್ಡೇರಿನಿಂದಿರಿಯಿಸಿದಳೆಂದು ತೊವಲಂ ಪಿಡಿದು ಗೋಳಿಡುತ್ತ ॥
ಮೊರೆಯಿಡಲ್ಸಂಗ್ರಾಮಶೂರಭೂಪಂ ಕೇಳಿ ।
ಮರುಗಿ ಉರಿಯಿಂ ಹಿರಿಯನಾಗಿ ದೂತರನು ಕರೆ- ।
ದರಗುಲಿಯಮಾಡಿದವರ್ಗಾಜ್ಞೆಯಂ ಮಾಡಿಮೆನಲತಿ ಭರದಿನವರು ಬಂದು ॥ ೫೧ ॥
ಆ ವೃಷಭದತ್ತಸೆಟ್ಟಿಯ ಮನೆಯ ಕವರಲೆಂ- ।
ದೊವದೇ ಬಾಗಿಲ್ಗೆ ಬರಲವರ ಕೃತಪುಣ್ಯ ।
ದೇವತೆಗಳಾ ತಳಾರನುಂ ಮರವಿಟ್ಟಂತೆ ಕಯ್ಕಾಲ್ಗಳಂ ತಂಬಿಸೆ ॥
ಭೂವರನ ಸಿಂಹಪೀಠಂ ಕಂಪಿಸುತ್ತಿರ- ।
ಲ್ಕಾವಸದಿಯೊಳಗಿರ್ದ ಪುಣ್ಯದಂಪತಿಗಳೆಮ- ।
ಗೀ ವಿವಿಧಮೆನಿಸುವುಪಸರ್ಗಮಳಿವನ್ನೆವರಸನ್ಯಸನಮೆಂದು ನಿಲಲು ॥ ೫೨ ॥
ಸಂದ ಸಮ್ಯಕ್ತ್ವಗುಣಮಣಿಗಣಾಭರಣರ್ಗೆ ।
ಬಂದಿತಲ್ಲಾ ನಿರಪರಾಧದಿಂದುಪಸರ್ಗ- ।
ಮೆಂದು ಮಲಮಲನೆ ಮರುಗಿ ನಗರದೇವತೆಯುರಿಂತಿದನುಪರಿಹರಿಪೆವೆಂದು ॥
ಬಂದು ಸಂದಣಿಸಿ ಎಲೆ ಪುರಜನವೆ ಜಿನದತ್ತೆ- ।
ಯಿಂದ ದೋಷಮನೆಳ್ಳನಿತು ಕಂಡುದಿಲ್ಲವಿೂ ।
ಯಿಂದವಾ ಪಾಪಿ ಬಂಧುಶ್ರೀಯ ಕೌಟಿಲ್ಯದಿಂದಾದುದೆಂದುಲಿಯುತಾ ॥ ೫೩ ॥
ಭೀತಾಳಿಯಂ ಪಿಡಿದು ತಂದು ನೀನಿವಳ ಕೊಂ- ।
ದಾ ತೆರನನೆಲ್ಲವಂ ತೆರೆದರಿಕೆ ಮಾಡೆಂದು ।
ಭೀತಿವಡುವಂತೆ ತಾಡನಗೆಯ್ಯೆ ಶತವೃದ್ಧಿಯಾಗಿ ಪುರವೀಥಿಗೆಯ್ದಿ ॥
ನೀತಿವಿದೆಯಿಂದೀಯಕೃತ್ಯಮಾಯ್ತಿಲ್ಲವಾ ।
ಪಾತಕಿ ಕುದೃಷ್ಟಿ ಬಂಧುಶ್ರೀಯದಂ ಮಾಡೆ ।
ಮಾತೇನು ಮರದ ಹುಳುವಾ ಮರನ ಕೊರೆವಂತೆಯುವಳ ನಾನೇ ಕೊಂದೆನು ॥ ೫೪ ॥

ಎಂದೆಲ್ಲರರಿವಂತೆ ತನ್ನ ಹೆಸರಂ ಹೇಳಿ ।
ಬಂದು ಬಂಧುಶ್ರೀಯುನೆಲವೊ ಕಡುಪಾಪಿ ನಿ- ।
ನ್ನಿಂದೆನ್ನನೀ ನಗರದೇವತೆಗಳುಬ್ಬಸಂಗೊಳಿಸುತಿವೆಯುದರದೊಂದು ॥
ಸಂದೇಹಮಂ ಬಿಡಿಸಿ ಕಣ್ದೆರೆದುನೀ ಪುರಕೆ ಮಾ- ।
ಡೆಂದೆದೆಯ ಮೆಟ್ಟಿ ಸಂಕಟಗೊಳಿಸಲವಳು ಪರಿ ।
ತಂದು ನೃಪಮಂದಿರಕೆ ಬಂದು ತಾನೆಸಗಿದುದನಿಂತೆಂದು ನುಡಿದಳಾಗ ॥ ೫೫ ॥
ಮುಚ್ಚುಮರೆಯೇಕೆ ಗುಣವಂತೆ ಜಿನದತ್ತೆಯೊಳು ।
ಮಚ್ಚರದಿ ನಾಸು ಮಾಡಿದ ಕಪಟವೇ ನನ್ನ ।
ಹುಚ್ಚುಮಾಡಿದುದು ಹಳುವಿನ ಮಧ್ಯದೊಳು ಹುಟ್ಟಿಯಾ ಹಳುವನೇ ದಹಿಸುವಾ ॥
ಕಿಚ್ಚಿನಂದದಿನೆನುತ ತಾನೆಸಗಿದನ್ನೆಯಮ- ।
ನೊಚ್ಚತಂ ಮರಸದೇ ನುಡಿವ ಸಮಯದೊಳೆಲ್ಲ- ।
ರಚ್ಚರಿವಡುವ ತೆರದೊಳಚ್ಚರರಗೊಂದಣಂ ನೆರೆದುದಂಬರತಳದೊಳು ॥ ೫೬ ॥
ಅರಲಮಳೆಯುಮರದುಂದುಭಿಯಾದಿಯಾದೈದು ।
ಪರಿಯೊಳಾಶ್ಚರ್ಯವನು ಸಾದರದಿ ಮಾಡಲಾ ।
ಹರುಷದಿಂದಾ ಪುರದ ಬಾಲಗೋಪಾಲರಾದಿಯ ಜನಗಳೆಲ್ಲ ಬಂದು ॥
ನೆರೆದು ನೋಡುತ್ತಿರಲ್ಸಂಗ್ರಾಮಶೂರ ಭೂ- ।
ವರನದಂ ಕಂಡು ಬಂಧುಶ್ರೀಯುನಾ ತನ್ನ ।
ಪುರದಿಂದ ಪುಳಿತ ಕತ್ತೆಯ ಮೇಲೆ ಕುಳ್ಳಿರಿಸಿ ಭರದಿ ಪೊರಮಡಿಸಲಾಗ ॥ ೫೭ ॥
ಮಾಸಂಕದಿಂದ ಬಂಧುಶ್ರೀ ಮನದೊಳಿನಿತು ।
ಹೇಸದೇ ಮಾಡಿರ್ದ ವಂಶಘಾತಕದ ಫಲ- ।
ವಿೂ ಸಮಯವೊಂದರೊಳೆ ಕಾಣಿಸಿದುದತ್ಯುಗ್ರ ಪುಣ್ಯಪಾಪದ ಫಲಗಳು ॥
ಒಸರಂ ಮಾಡದೇ ಮೂರುಪಕ್ಷಂ ಮೂರು ।
ಮಾಸಮಾ ಮೂರು ದಿನದೊಳಗೆ ಕಾಣಿಸುಗುಮೆಂ- ।
ಬಾ ಸುಜನರುಸಿರುವುತ್ತಮ ನೀತಿಯರ್ಥಮಂ ನೆಲೆಮಾಡಿ ತೋರುವಂತೆ ॥ ೫೮ ॥
ಎಂದವಳ್ಮಾಡಿದಾ ಪಾತಕಕೆ ನಗರಜನ- ।
ವೃಂದಮೆಲ್ಲಮುಪೊಲ್ಲನುಲಿಯುತಿರಲರಸು ಜಿನ- ।
ಮಂದಿರಕ್ಕೆಯ್ದಿ ಲೋಕೈಕನಾಥಗೆ ಭಕ್ತಿಭರದಿ ವಂದಿಸಿ ಬಳಿಕ್ಕ ॥
ವಂದನಂಗೆಯ್ದಾ ಸಮಾಧಿಗುಪ್ತರ್ಗೆ ಮನ- ।
ಸಂದಾ ಮಹಾತ್ಮರುಪಸರ್ಗಮಂ ಬಿಡಿಸುತಿಂ- ।
ತೆಂದನೆಲೆ ಗುರುವೆ ಸದ್ಧರ್ಮಸ್ವರೂಪಮಂ ಪೇಳಿಮೆನಲಿಂತೆಂದರು ॥ ೫೯ ॥
ಮೊದಲಿಂದನಾದಿಸಂಸಿದ್ಧಮಾದಾ ಧರ್ಮ- ।
ದೊದವನರಿಯದುದರಿಂದೀ ಜೀವಕೀ ಭವದ ।
ಹೊದಕುಳಿಯ ಮಾಡುವುದು ಕರ್ಮಮದರಿಂ ಧರ್ಮಮೇ ಮುಖ್ಯಮಾ ಧರ್ಮದಾ ॥

ಒದವಿನಿಂದೀ ಬೋಧಮಂ ಪಡೆದ ಜನ್ಮದೊಳ- ।
ಗಿದು ನಿತ್ಯಮಿದನಿತ್ಯಮೆಂಬ ಸದ್ಭಾವನೆಯು ।
ಹೃದಯಶುದ್ಧಿಯೊಳು ಭಾವಿಸಿದವರ ಬಾಳು ಬಿಸಿಲರಿಸಿನಂ ಭೂಮಿಪಾಲ ॥ ೬೦ ॥
ನರನಾಥ ಕೇಳು ಭೋಗೋಪಭೋಗಕ್ಕೆ ರುಜೆ ।
ವರವಂಶಕಸತಿ ವಿತ್ತಕ್ಕೆ ಪಾವಕನಾಳಿ- ।
ಗರಸು ಮಾಂಗಲ್ಯಕ್ಕೆ ಯವಶಕುನ ಮಾರ್ಸ್ಯಗೆ ತೇಜ ವಿಜಯಕ್ಕೆ ವೈರಿ ॥
ಗುರುಜನಕ್ಕತಿದುಷ್ಟರಿಂ ಭಯಂ ಬರ್ಪ್ಪಂತೆ ।
ಭರದಿ ಸದ್ಗತಿಯ ಸಾಧಿಪೆನೆಂಬ ಬೋಧಕ್ಕೆ ।
ಸಿರುತದಿಂದೀ ಪರಿಗ್ರಹದ ತೊಡಕೆಂಬುದಂ ಸಜ್ಜನರ್ತಿಳಿಯಬೇಕು ॥ ೬೧ ॥
ಎಂದಿವಾದಿಯ ಶುದ್ಧ ಧರ್ಮೋಪದೇಶಮಂ ।
ಕಂದರ್ಪ್ಪಮದಮಥನನಾ ಮಹೀಪತಿಗೆ ಮನ- ।
ಸಂದು ಪೇಳಲ್ಕೇಳಿ ಮೊದಲಾದ ಸಮ್ಯಕ್ತ್ವದಾ ಮಹಾತ್ಮೆಯನು ಕಂಡು ॥
ಮುಂದುಗೆಡಿಸುವ ಸಂಸ್ಕೃತಿಗೆ ಪೇಸಿ ತನ್ನ ನಿಜ ।
ನಂದನಂ ಶೂರಸೇನಂಗೆ ಪಟ್ಟಂಗಟ್ಟಿ ।
ವೊಂದಾಗಿ ವೃಷಭದಾಸಂ ಬರಲ್ಸಾಸಿರ್ವ್ವರರಸುಮಕ್ಕಳ್ಸಮೇತ ॥ ೬೨ ॥
ಅನುರಾಗದಿಂದ ತನ್ಮನಿಕುಲಲಲಾಮನಿಂ ।
ಜಿನದೀಕ್ಷೆಯಂ ಧರಿಸಲಾ ನೃಪನ ನಿಜವನಿತೆ ।
ಕನಕಮಾಲಾದೇವಿ ಜಿನದತ್ತೆಸಹಿತ ಸಾಸಿರ್ವ್ವರರಸಿಯರುವೆರಸಿ ॥
ಜಿನಮತಿಯರೆಂಬ ಕಂತಿಕೆಯರಿಂ ಸಂಯಮವ- ।
ನನುಕರಿಸಲಾ ಶ್ರಾವಕವ್ರತವ ಕೆಲವು ಪುರ- ।
ಜನ ಕೆಲವು ಪುರಜನಂ ಭದ್ರಪರಿಣಾಮಮಂ ಪಡೆದರಂತದನೆ ಕಂಡು ॥ ೬೩ ॥
ಪಿರಿದಾಗಿ ಸಮ್ಯಕ್ತ್ವದುದಯಮೆನಗಾಯಿತೆ- ।
ನುತೊಸೆದ ಮಿತ್ರಶ್ರೀಯ ಮಾತಿಗರ್ಹದ್ದಾಸ- ।
ನರವಿಂದಲೋಚನೆಯರಿಚ್ಛಾಮಿ ಇಚ್ಛಾಮಿಯೆಂದು ಕೈಮುಗಿಯಲಾಗಾ ॥
ಪರಭೃತಾಲಾಪೆ ಪಾವನಮೂರ್ತ್ತಿ ಕುಂದಲತೆ- ।
ಯೊರೆದಳಿಂತೆಂದುಮೀ ನಿಮ್ಮ ಬಚ್ಚಣೆವಾತಿ- ।
ಗಿರದೆ ನಾನೊಡಬಡುವುದಿಲ್ಲಿದೆಲ್ಲಂ ಮಿಥ್ಯೆಯೆಂಬ ನುಡಿಯಂ ಕೇಳುತ ॥ ೬೪ ॥
ಮರದ ನೆಳಲೊಳಗಿರ್ದ್ದ ಮಹಿಪಾಲನಾ ಮಂತ್ರಿ- ।
ವರರಿಂತುಟೆಂದರಿದ ದೃಷ್ಟಾಂತಮಂ ಕಂಡು ।
ದುರುಳೆ ನಾಂ ನಚ್ಚೆನಿದನೆನಬಹುದೆ ಬೆಳಗಾಗಲೊಡನೆ ಬೇಗದೊಳು ತರಿಸಿ ॥
ಅರಮನೆಯೊಳಿರ್ದ್ದ ತೊಳ್ತಿರಿಗೆ ತೊಳ್ತಂ ಮಾಡಿ ।
ಪಿರಿದು ಮೊಗಗೆಡಿಸಬೇಕೆಂದು ಭಾಷೆಯ ಮಾಡು- ।
ತಿರಲು ಮತ್ತಾ ಚೋರನಿಂತೆಂದು ತನ್ನೊಳಗೆ ತಾಂ ನುಡಿಯುತಿರ್ದ್ದನಾಗ ॥ ೬೫ ॥

ಸಾರಿಯರ ನರ್ಮವಚನಕ್ಕೆ ನಂದನದ ಮಂ- ।
ದಾರದಂದದಿ ಕಾಡಬೇವು ಹೂವಪ್ಪುದೇ ।
ಚಾರುಕೋವಿದರ ನುಡಿಗುತ್ತಮರ ತೆರದಿ ಖಳರಾಲಯಿಸಿ ಪರಿಣಮಿಪರೇ ॥
ಧಾರಿಣೀತಳದೊಳೆಂದಿಣಿಕೆ ಮಾಡುತ್ತಿರ- ।
ಲ್ಕಾ ರಮಣಿ ನುಡಿದ ನುಡಿಗೇಳಿ ಸಂತಸವಡೆದ- ।
ನಾ ರಾಜವೈಶ್ಯನರ್ಹದ್ದಾಸ ಜಿನಸಮಯವಾರ್ಧಿವರ್ಧನಚಂದ್ರನು ॥ ೬೬ ॥

ಇದು ವಿಬುಧಜನವಿನುತಮಿದು ವಿಬುಧಜನವಿನತ- ।
ಮಿದು ವಿದಿತ ಜಿನಸಮಯಶರಧಿಸಂಪೂರ್ಣೇಂದು ।
ಸದಮಲಚರಿತ್ರ ಚೆಂಗಾಳ್ವಭೂವರನ ಸಚಿವಾನ್ವಯಾಂಬರಹಂಸನು ॥
ಮದನಸಮರೂಪಸುತ್ತಮಗುಣಕರಂಡಕಂ ।
ಚದುರಮಂಗರಸ ರಚಿಸಿದ ಕೌಮುದೀಕಥೆಯೊ- ।
ಳೊದವಿದುದು ಜಿನದತ್ತೆಯೆಸೆವ ಸತ್ಕಥನವೈದನೆಯ ರಂಜಿಸುವ ಸಂಧಿ ॥ ೬೭ ॥

॥ ಅಂತು ಸಂಧಿ ೫ಕ್ಕಂ ಪದನು ೩೩೫ಕ್ಕಂ ಮಂಗಲಮಹಾ ॥



# ಆರನೆಯ ಸಂಧಿ.

## ಸೋಮೆಯ ಕಥೆ.

ಶ್ರೀಮದರ್ಹದ್ದಾಸವೈಶ್ಯವಿಭು ಕೇಳಲಾ ।
ತಾಮರಸಮುಖಿ ಚಂದನಶ್ರೀ ಕರಂಗಳಂ ।
ಪ್ರೇಮದಿಂ ಮುಗಿದು ತನಗಾದ ಸಮ್ಯಕ್ತ್ವಮಂ ಬಿಸ್ಮಪಂಗೆಯ್ದಳಿಂತು ॥ ಪಲ್ಲ ॥

ಕುರುಜಾಂಗಣಾಖ್ಯವಿಷಯದ ಹಸ್ತಿನಾಗಪುರ- ।
ವರದ ಮಹೀಪಾಲಕಂ ಭೂಭೋಗನಾ ಪಟ್ಟ- ।
ದರಸಿ ಭೋಗಾವತೀವೆಸರ ಸುದತಿಗೂಡಿಯರಸುಗೆಯ್ಯುತಿಹನದರೊಳು ॥

ಪರಮಧಾರ್ಮಿಕನಧಿಕಸಮ್ಯಕ್ತ್ವಗುಣಗಣಾ- ।
ಭರಣ ಗುಣಪಾಲನೆಂದೆಂಬ ವೈಶ್ಯೋತ್ತಮಂ- ।
ಗರುವೆ ಗುಣವಂತೆಯೆಂಬಬಲೆಯುಂ ಕೂಡಿಯತ್ಯಂತ ಸುಖದಿಂದಿರ್ಪ್ಪರು ॥ ೧ ॥

ಆ ರಾಜಧಾನಿಯೊಳಗತಿ ವೇದವೇದಾಂಗ- ।
ಪಾರಗಂ ಬ್ರಾಹ್ಮಣಕುಲೋತ್ತಮಂ ಭೂಮಿಗತಿ ।
ದಾರಿದ್ರ ಸೋಮದತ್ತದ್ವಿಜಂ ಸೋಿಲೆವೆಸರ ಸತಿಯುಮಿರ್ಪ್ಪರವರ್ಗೆ ॥

ಚಾರುಮಣಿಪುತ್ರಿಕೆಯವೊಲು ಸೋಮೆಯೆಂಬ ಸುತ- ।
ಮಾರಿ ಸಂಜನಿಸಿ ನಂದನವನದೊಳಮರಲತೆ ।
ರಾರಾಜಿಸುತ್ತುಮುದಯಂಗೆಯ್ದು ಬೆಳೆವಂತೆ ಬಾಲ್ಯದೊಳ್ ಬೆಳೆಯುತಿರಲು ॥ ೨ ॥

ಇಂತೆಸೆವ ಸೋಮೆಯ ಜನನಿ ಸೋವಿಲೆಗೆ ಪಿರಿದು ।
ಸಂತಾಪಸಹಿತಜ್ವರಂ ಸಂಜನಿತಮಾಗ- ।
ಲಂತಕನಿವಾಸಮಂ ಸಾರಲಾ ಸೋಮದತ್ತದ್ವಿಜಂ ದುಃಖದಿಂದ ॥

ಚಿಂತಿಸುತ್ತಿರಲದಂ ಕಂಡೊರ್ವ ಜೈನಮುನಿ- ।
ಕಾಂತನಿರದೆಯ್ತಂದು ತದ್ವಿಜೋತ್ತಂಸನೊಳ- ।
ಗಿಂತೆಂದನೆಲೆ ಮಗನೆ ದೇಹಿಗಳಿಗುಂಟಾದ ಸಾವಿಂಗೆ ದುಃಖಿಸುವರೇ ॥ ೩ ॥

ಪರ್ವಿದ ಪರಿಗ್ರಹದ ಪಾಪಮಂ ಪರಿಯಿಸುವ ।
ಸರ್ವದರ್ಶನಜ್ಞಾನಚಾರಿತ್ರಮಂ ಪಡೆದು ।
ನಿರ್ವಾಣಪದದಲ್ಲಿ ನಿಂದ ದೇವಾಧೀಶರಲ್ಲದೇ ಭಾವಿಸಿದೊಡೆ ॥

ಗೀರ್ವಾಣಲೋಕನಾಯಕರಿಳಾಪತಿಗಳುಂ ।
ದರ್ವೀಕರೇಶ್ವರರ್ಮೊದಲಾದವರದೊಂದು ।
ಗರ್ವಿಸುವ ರೂಪುಯೌವನಲಕ್ಷ್ಮಿಯಾಯುಷ್ಯಮೆಲ್ಲವಸ್ಥಿರಮಲ್ಲವೇ ॥ ೪ ॥

ಈ ವಿಧದ ಧರ್ಮೋಪದೇಶಮಮಂ ಮಾಡಲಾ ।
ಭೂವಿಸುತಮಪ್ಪ ಮುನಿವಚನಮಂ ಕೇಳ್ದು ಸ- ।
ದ್ಭಾವದಿಂ ದುಃಖಮಂ ಬಿಟ್ಟು ಬಳಿಕವರ ಕಯ್ಯಿಂದ ಭಕ್ತಿಭರದಿ ॥
ಶ್ರಾವಕವ್ರತವನವಧರಿಸಿ ಶಕ್ತಿಯ ಮೀರಿ ।
ದೇವತಾಪೂಜೆ ಶೀಲೋಪವಾಸಂಗಳಂ ।
ಸಾವಧಾನದಿ ಮಾಡುವುಜ್ಜುಗವೆ ತನಗೆ ಮೊಡಲಾಗಿ ಜೀವಿಸುತಿರ್ದನು ॥ ೫ ॥
ಮುಷ್ಟಿಯುಂ ಬೇಡಿ ತಂದಾ ದ್ರವ್ಯದೊಳಗೆ ತ- ।
ನ್ನಿಷ್ಟ ಗುರುವಿಂಗೆ ನಿರ್ಭರಭಕ್ತಿಯಿಂದ ಸಂ- ।
ತುಷ್ಟಿಯಪ್ಪಂದದಿಂ ನಿತ್ಯದಾನಂ ಮಾಡಿ ನಿಜತನೂಭವೆ ಸೋಮೆಯುಂ ॥
ಶಿಷ್ಟಪುರುಷಂ ಸೋಮದತ್ತನಿರ್ಪ್ಪದನು ಸ- ।
ದ್ದೃಷ್ಟಿಗುಣಪಾಲ ರಾಜಶ್ರೇಷ್ಠಿ ಕಂಡಜ ।
ಸೃಷ್ಟಿಯೊಳಗಿಂತಪ್ಪ ಬಡವರೆಸಗುವ ದಾನಮಂ ಕಂಡುದಿಲ್ಲವೆಂದು ॥ ೬ ॥
ಮಲಮಲನೆ ಮರುಗಿಯವನೆಡೆಗೆಯ್ದಿ ತನ್ನ ನಿಜ ।
ನಿಲಯಕ್ಕೆ ಕೊಂಡೊಯ್ದುತರ್ಘ್ಯಪಾದ್ಯವನಿತ್ತು ।
ಎಲೆ ಸೋಮದತ್ತ ನೀನೆರಡು ಮೂರುಪವಾಸಮಿದ್ದು ಮಾಡುವ ದಾನಕೆ ॥
ಸಲೆ ಮೆಚ್ಚಿದೆಂ ನಾನು ನೀನು ಬಾಳ್ವನ್ನೆವರ ।
ಮಲವರಿಕೆಯಿಲ್ಲದೇ ಉಣ್ಬನಿತನೀವೆನೆನೆ ।
ಸುಲಲಿತ ಗುಣಾಭರಣನಾ ಸೋಮದತ್ತನವನೊಳಗಿಂತು ನುಡಿದನಾಗ ॥ ೭ ॥
ನುಡಿಯಲಿನ್ನೇತಕ್ಕನಾಥಬಂಧುವೆ ಕೇಳು ।
ಕಡೆಗಾಲವಾಗಿ ಹಣ್ಣೆಲೆಯಂದದಿಂ ಬೀಳು ।
ವೊಡಲಹೊರುವುದರಿಂದಲೇನು ಫಲವದು ನಿಮಿತ್ತಂ ನನ್ನಸುತೆ ಸೋಮೆಯಾ ॥
ಕಡುಗೂರ್ಮೆಯಿಂದ ರಕ್ಷಿಸಿ ಪುತ್ರಮಗೆ ಮದುವೆ- ।
ಗೊಡುವುದೆನುತವನ ಕೈಲೆಡೆಗೊಟ್ಟು ಸಂಯಮವ ।
ಹಡೆದು ಸನ್ಯಸನದಿಂ ಸೋಮದತ್ತಂ ಸತ್ತು ಸಗ್ಗಕ್ಕೆ ಸಂದನಂದು ॥ ೮ ॥
ಇತ್ತಲಾ ಗುಣಪಾಲ ವೈಶ್ಯೋತ್ತಮಂ ಮಮತೆ- ।
ವೆತ್ತು ನಿಜತನುಜೆಯಂ ಸಲಹುವಂದದೊಳು ಸಲ- ।
ಹುತ್ತಿರಲ್ಸಕಲ ಚಂದ್ರಂ ದಿನದಿನಕ್ಕೆ ಷೋಡಶಕಲೆಗಳಂ ಸೊಗಯಿಸಿ ॥
ಹೊತ್ತುಬೆಳೆವಂತೆ ಸಂಗೀತಸಾಹಿತ್ಯ ಸ- ।
ದ್ವೃತ್ತತೆಯ ಪಡೆದು ನವಯವ್ವನೋನ್ಮತ್ತ ।
ಸಂಪತ್ತಿಯಂ ಪಡೆದು ಕೋರಿಸಿ ಕೊಂಡಳಾ ಸೋಮೆ ಸದ್ಗುಣಗಣಾಭಿರಾಮೆ ॥ ೯ ॥
ಸಿರಿಯಿಂದ ಸಿರಿಯೊಳ್ಕೈಕ್ಕೆ ರೂಪಿಂ ರತಿಯೊ- ।
ಳೊರಸೊರಸು ಜಾಣಿಂದ ವಾಣಿಯೊಳ್ ಪೈಸಮ್ಯ ।
ವರಭೋಗದಿಂದ ಶಚಿಯುಲ್ಲಿ ಮಾಸಂಕ ಗರಗರಿಕೆಯಿಂ ಗಿರಿಸುತೆಯೊಳು ॥

ಪಿರಿದು ಕಕ್ಕಸ ರೋಹಿಣೀದೇವಿಯಲ್ಲಿ ಸುರು- ।
ಚಿರಕಾಂತಿಯಿಂದಿಕ್ಕುತೆಕ್ಕೆಯಾಗಿರ್ಪ್ಪಳಾ ।
ಪುರುಚರಿತ್ರೋದ್ದಾಮೆ ಸತ್ಯಶೌಚಾರಾಮೆ ಸೋಮೆ ಸುವ್ರತದ ಸೀಮೆ ॥ ೧೦ ॥
ನಿಡುಗಣ್ಣನೋಟ ನವರಸಿಕರ ಗೆಲವಿನೋಟ ।
ಕಡುತೆಳ್ಪವಡೆದ ಹಣೆ ಕಾವನಲರ್ಗಣೆಗೆ ಹಣೆ ।
ಬಿಡುಮುಡಿ ವಿರಕ್ತನಿಕುರುಂಬದುತ್ತಮಮಪ್ಪ ಸುವ್ರತಂಗಳ ಬಿಡುಮುಡಿ ॥
ತೊಡೆ ವಿರಹಿವಿತತಿಯುಳಿಕಾಕ್ಷರವ ತೊಡೆವ ಗುಣ ।
ಬಡನಡು ಕರಂ ನೋಡಿ ತೊಲಗಿದವರಂಗಮಂ ।
ಬಡವು ಮಾಡುತ್ತಿರ್ಪ್ಪವಾ ದ್ವಿಜತನೂಜೆಯು ವಿಲಾಸಮನದೇನೆಂಬೆನು ॥ ೧೧ ॥
ಕೋರಕಿತಕರ್ಣಿಕಾರಸ್ತನದ ಕಾಂಚನ ಸ- ।
ರೋರುಹಸಮಾನನವಲಾವಣ್ಯಯುತಮುಖದ ।
ಚಾರುಚಂಪಕದ ಬಿರಿಮುಗುಳ ನಾಸಿಕದ ಪೊಸಮಿಸುನಿಗೇದಗೆಯೆಸಳ್ಗಳಾ ॥
ಕೂರುಗುರ್ಗಳ ಕುಸುಮದಾಮ ಕೋಮಲದ ಸುಕು- ।
ಮಾರಿಯಂಗಜನ ಜನನಸ್ಥಾನ ತಾನಾದ ।
ಕಾರಣದಿನಾಲೋಕಜನನಿಯೆನೆ ಮೈಯ್ಯೊಳ್ಸುವರ್ಣತ್ವಮಂ ತಳೆದಳು ॥ ೧೨ ॥
ಉರುಕೇಶಬಂಧನಂ ವಿಟಜನಕೆ ಬಂಧನಂ ।
ಕರದಲುಳಿ ಕಾಮನಾಟಕಕೆ ಲಳಿಲುಳಿ ಮನೋ- ।
ಹರವೆನಿಸುವಗ್ರಹಾರಂ ದ್ವಿಜನಾಗಿ ಮನೆಗಟ್ಟಿದಗ್ರಹಾರಂ ॥
ಸರಸಕಾಂಚೀದಾಮ ಸಲೆ ವಿರಕ್ತರ ಮನಮ- ।
ನಿರದೆ ಕಟ್ಟುವ ದಾಮವದು ಕಾರಣದಿನವ- ।
ಳ್ವಿರಚನಂಗೆಯ್ದ ವಿವಿಧಾಭರಣ ವಿರಹಿಗಳ ಹರಣಕ್ಕೆ ಹರಣಭರಣ ॥ ೧೩ ॥
ಅನುದಿನಂ ಸದ್ದೃಷ್ಟಿಗಳದೊಂದು ಮೇಳವೇ ।
ಅನವರತ ದೇವಪೂಜೆಯು ಮಾಡುವಕ್ತಿಯೇ ।
ಮನಗೊಂಡನುಶ್ರುತಂ ಜಿನಕಥಾರ್ಥಂಗಳಂ ಪೇಳ್ವ ಕೇಳ್ವ ವಿಲಾಸಮೇ ॥
ದಿನದಿನಂ ಸತ್ಪಾತ್ರದಾನಾನುಮೋದಮೇ ।
ತನಗೆ ನೆಲೆಯಾಗಲೊಪ್ಪಂಬಡೆದಳಾ ಸೋಮೆ ।
ಜನವಿನೂತಶ್ಯಾಮೆ ನವಹೇಮನಿಭದಾಮೆ ಕಾಮಿನೀಕುಲಲಲಾಮೆ ॥ ೧೪ ॥
ಮತ್ತಮಾ ಮಧುರ ಕೋಕಿಲವಾಣಿಯುತಿಮುತೆ- ।
ವೆತ್ತು ನಂದೀಶರದ ನೋಂಪಿಯಂ ಮಾಡುವೆನೆ- ।
ನುತ್ತ ತನ್ನೋರಗೆಯ ಸಖಿಯುರೊಡವರಲರ್ಚ್ಚನಾದ್ರವ್ಯಧಾರಿಯಾಗಿ ॥
ಉತ್ತಮಾಭರಣಭೂಷಿತೆಯುದ್ಗಮಾಯುಧನ ।
ಚಿತ್ತವಲ್ಲಭೆಯೊಸೆದು ಪೂಜಿಸುವ ಪೊಸಪೊನ್ನ ।
ಪುತ್ತಳಿಯ ತೆರದಿ ನಡೆತರ್ಪ್ಪ ನಟಣೆಯನು ಕಂಡಾ ಪುರಜನಾನೀಕವು ॥ ೧೫ ॥

ಈ ನಾಡುಬೀಡಿನೊಳು ನಾವು ಹುಟ್ಟಿದ ದಿನಂ ।
ತಾನಂದು ಮೊದಲಾಗಿಯಿಂದು ಪರಿಯಂತಮೀ ।
ಮಾನಿನೀಮಣಿಗೆ ಸಮನಾದ ಸೌಂದರ್ಯ್ಯಸಂಪದಸದ್ವಿಲಾಸದೇಳ್ಗೆ ॥
ಈ ನಟಣೆ ಈ ಲಲಿತಲಾವಣ್ಯಮಂ ಪಡೆದ ।
ಮಾನಿನಿಯರಂ ಕಂಡುದಿಲ್ಲ ಕನಸಿನೊಳಮೆಂ- ।
ದಾನಂದಿಸುತ್ತ ಜಂಗಮಜಾತ್ರೆಯುಂದದಿಂದಾ ಸತಿಯ ಸುತ್ತುವರಿದು ॥ ೧೬ ॥
ಮುತ್ತಿನೋಡುತ್ತಮಿರಲಾ ನೆರವಿಯೊಳು ರುದ್ರ- ।
ದತ್ತನೆಂದೆಂಬ ಜೂದುಂಗಾರ ಪಾರ್ವ್ವನು- ।
ನ್ಮತ್ತಮಾನಸನಿವಳದಾರಮಗಳಿವಳ ಹೆಸರೇನೆಂದು ಕೇಳಲಾಗ ॥
ಹತ್ತಿರಿರ್ದ್ದವರಿಂತು ನುಡಿದರಿವಳಾ ಸೋಮ- ।
ದತ್ತನ ಮಗಳ್ಸೋಮೆಯೆಂದಿವಳನಾ ಭೂಸು- ।
ರೋತ್ತಮಂ ಸಾವಂದು ವೈಶ್ಯವಿಭು ಗುಣಪಾಲಕಂಗೆ ಕೈಲೆಡೆಗೊಟ್ಟನು ॥ ೧೭ ॥
ಅದರಿನಾತಂ ನಿಜತನೂಜೆಯುಂ ರಕ್ಷಿಸುವ ।
ಪದದಿ ರಕ್ಷಿಸುತಿರ್ಪ್ಪನೆಂಬ ನುಡಿಯುಂ ಕೇಳಿ ।
ಮದಹೃದಯನಿವಳನಾಂ ಮದುವೆಯಾಗುವೆನೆಂಬ ನುಡಿಗೆಂದರೆಲವೊ ಭ್ರಷ್ಟಾ ॥
ವಿದಿತ ಗುಣಮಣಿಯುತ್ತಮದ ಬ್ರಹ್ಮಚಾರಿಗುರು- ।
ಮುದದಿ ಕೊಡುವೀ ಸಚ್ಚರಿತ್ರವಂತೆಯನು ನೀ ।
ಮದುವೆಯಾಗುವೆನೆಂಬುದಾ ಮರದ ಹಣ್ಣ ಬಯಸುವ ಹೆಳವನಂತಪ್ಪುದು ॥ ೧೮ ॥
ಎನೆ ಕೇಳಿ ನಗುತಿವಳನಾವ ಪ್ರಕಾರದಿಂ ।
ಜನಜನಿತಮಾಗಿ ಮದುವೆಯನಿಲ್ವೆನಲ್ಲದೊಡೆ ।
ನನಗೇತರೀ ಜಾಣ್ಮೆಯಿದನು ನೀವರಿದಿರಿ ಎನುತ್ತ ಭಾಷೆಯನು ಮಾಡಿ ॥
ಇನಿಸುಳಿಯದೇ ಪೋಗಿ ದೇಶಾಂತರದೊಳೊರ್ವ್ವ ।
ಜಿನಮುನಿಯ ಕಂಯ್ಯೊಳಾ ಬ್ರಹ್ಮಚಾರಿತ್ವಮುಮ- ।
ನನುಕರಿಸಿ ಕಪಟದಿಂ ದೇವತಾ ವಂದನಾದಿಯ ಸದ್ವಿಧಿಯನೆಲ್ಲವಂ ॥ ೧೯ ॥
ಮನವಾರೆ ಕಲಿತು ಮಗುಳ್ದಾ ಪುರವರಕೆ ಬಂದು ।
ಮನುಚರಿತ ಗುಣಪಾಲ ಮಾಡಿಸಿದ ಚೈತ್ಯಗೃಹ- ।
ಕನುನಯದಿ ಬರಲದಂ ಕೇಳ್ದಲ್ಲಿಗಾ ವೈಶ್ಯಕುಲತಿಲಕನೊಸೆದು ಬಂದು ॥
ಅನಘಂಗೆ ಮಣಿದು ಬಳಿಕಾ ಬ್ರಹ್ಮಚಾರಿಗತಿ ।
ವಿನಯದಿಂ ಮಾಡಲಿಚ್ಛಾಕಾರಮಂ ನಿಮಗೆ ।
ವಿನುತ ದರ್ಶನಶುದ್ಧಿರಸ್ತು ಎನುತಾಗಲಾಶೀರ್ವ್ವಾದಮಂ ಮಾಡಿದಂ ॥ ೨೦ ॥
ಆ ಮಾನನಿಧಿ ಕೇಳ್ದನೆಲೆ ದೀಕ್ಷಿತರೆ ಜನ್ಮ ।
ಭೂಮಿಯಾವುದು ನಿಮಗೆ ನೀವಾರ ಶಿಷ್ಯರೆನೆ- ।
ಲಾ ಮಾತಿಗಿಂತೆಂದನೆಮ್ಮ ಜನ್ಮಸ್ಥಾನಮಿದು ಹಸ್ತಿನಾ ನಗರಿ ॥

ಸೋಮಶರ್ಮ್ಮದ್ವಿಜಂಗಾ ಸೋಮಶರ್ಮ್ಮೆಗಂ ।
ಪ್ರೇಮದಣುಗಂ ರುದ್ರದತ್ತವೆಸರವನು ತ- ।
ನ್ನಾ ಮಾತೃಪಿತೃಗಳೆಲ್ಲಂ ಸತ್ತರದರಿಂದ ದೇಶಾಂತರಕ್ಕೆಯ್ದಿದೆಂ ॥ ೨೧ ॥
ವಾರಣಾಸೀ ನಗರಿಯಲ್ಲಿ ಜಿನಚಂದ್ರ ಭ- ।
ಟ್ಟಾರಕವರ್ಮಾಸೋಪವಾಸಿಗಳ್ನನಗೊಲಿದು ।
ಸಾರತರಮಪ್ಪ ಸದ್ಧರ್ಮ್ಮಮಂ ನಿರವಿಸಲ್ಕಿದನು ಮನಮೊಸೆದು ಕೇಳೆ ॥
ವೈರಾಗ್ಯ ಮನದೊಳಾವರಿಸಲಾನೀ ವೇಷ- ।
ಧಾರಿಯಾದೆಂ ಬಳಿಕ್ಕವರ ಬೀಳ್ಕೊಂಡು ನಾಂ ।
ಭೂರಿಜನಪದಗಳೊಳಗುಳ್ಳ ಜಿನಭವನಮೆಲ್ಲಕ್ಕೆ ವಂದನೆಮಾಡುತ ॥ ೨೨ ॥
ಬಂದು ಪುರುಜಿನರಾದಿಯಾದ ತೀರ್ಥಂಕರರ- ।
ದೊಂದು ಜನ್ಮಸ್ಥಾನಮಂ ಭಕ್ತಿಪೂರ್ವಕಂ ।
ವಂದನಂಗೆಯ್ಯುತಿಲ್ಲಿ ಶಾಂತಿ ಕುಂಥು ಅರ ತೀರ್ಥಕರ ದೇವರುಗಳಾ ॥
ವಂದನೆ ನಿಮಿತ್ತ ನಿನ್ನಂ ನೋಡುವಭಿಲಾಷೆ- ।
ಯಿಂದ ಭರದಿಂ ಬಂದೆ ನಿನ್ನ ದರ್ಶನಮಾತ್ರ- ।
ದಿಂದ ನಾನತಿ ಧನ್ಯನಾದೆನೀ ಇಳೆಗೊಳ್ಳಿತಾವುದುತ್ತಮರ ಸಂಗಾ ॥ ೨೩ ॥
ಸಿರಿಗಂಪಿನೊತ್ತಿನೊಳ್ಬೆಳೆದಿರ್ದ ಮರದಂತೆ ।
ವರಸಿದ್ಧರಸಮನಮರಿದ ಲೋಹದಂತೆ ನವ ।
ಪರಿಮಲಂಬೊರೆದ ಕರಡಿಗೆಯಂತೆ ಮಾಣಿಕದ ವರ್ತಿಯಿಂ ಸಲೆ ನೋಂಕಿದಾ ॥
ಸುರುಚಿರ ಸ್ಫಟಿಕದಂತಾ ಶುಕ್ತಿಯುದರಮಂ ।
ಪೊರೆದ ಹನಿಯಂತೆ ಪಜ್ಜಳಿಪ ಮಣಿಮಾಲೆಯೊಡ- ।
ವರಿದ ನೂಲಂತೆಯುತಿ ಸೇವ್ಯವಹುದುತ್ತಮರ ಸಂಗಮೆಂದುಸಿರ್ದನಾಗ ॥ ೨೪ ॥
ಆ ವೈಶ್ಯನಿಂತೆಂದನಾ ಬ್ರಹ್ಮಚಾರಿಯೊ- ।
ಳ್ಭಾವಿಸುತವೆನಿಸುವೀ ಬ್ರಹ್ಮಚರ್ಯ್ಯವ್ರತಂ ।
ಸಾವಧಿಕಮೋ ನಿರವಧಿಕಮೋ ಎನಲಿಂತೆಂದನಾ ಬ್ರಹ್ಮಚಾರಿಯವಗೆ ॥
ಸಾವಧಿಕಮೇತಪ್ಪದೀ ವ್ರತಂ ನನಗೆ ಮ- ।
ತ್ತಾ ವಿವಾಹದ ಕಾಂಕ್ಷೆಯೆಂಬುದೊಂದಿನಿಸಿಲ್ಲ- ।
ವಾ ವನಿತೆಯುರ್ವಿಚಾರಿಸಿ ನೋಡೆ ವಿಷಮತರ ವಿಷವಾದ ಕಾರಣದೊಳು ॥ ೨೫ ॥
ಖರಕಿರಣನಿಂ ಕಿಡದ ತಮವಲಗುತಾಗದೆ ।
ಪಿರಿದು ನೋಯಿಸುವೇರು ಯಮಪುರಕ್ಕೆಯ್ದಿಸದ ।
ಮರಣಮಾ ಮದ್ಯಪಾನಂ ಮಾಡದೇ ಸೊಕ್ಕಿಸುವ ಸೊಕ್ಕು ಕಿಚ್ಚಿಲ್ಲದೆ ॥
ಉರಿವಶಿಖಿಯುರಗನುಣ್ಣದೆ ಮುಸುಂಕುವ ನಂಜು ।
ಚರಣಯುಗಮಂ ನೋಂಕದಾಶೃಂಖಲಾಬಂಧ- ।
ದಿರವಲ್ಲವೇ ಮಾನಿನೀಜನಕೆ ಮನಮಿಕ್ಕಿ ಸಿಕ್ಕಿದಾ ನರರ ಬಾಳ್ವೆ ॥ ೨೬ ॥

ಎನಲೆಂದನಾ ಶ್ರೇಷ್ಠಿಯೆಲೆ ದೀಕ್ಷಿತರೆ ನಮ್ಮ ।
ಮನೆಯೊಳೊರ್ವ್ವಳು ಬ್ರಹ್ಮಚಾರಿ ಸದ್ಬ್ರಾಹ್ಮಣನ ।
ತನುಜೆಯುತಿರೂಪವತಿಯಿರ್ದ್ದಪಳವಳ ನಿನಗೆ ಕೊಡುವೆನೆನಲಿಂತೆಂದನು ॥
ನನಗದರ ವಾಂಛೆ ಬೇಡದರಿಂದ ಸಂಸಾರ- ।
ದನುಬಂಧವಾ ವನಿತೆಯರ ಸಂಗದಿಂದ ಸ- ।
ಜ್ಜನಸಂಗ ಸರ್ವ್ವಶಾಸ್ತ್ರಪ್ರಸಂಗಂ ವಿಚಾರಿಸಿದೊಡಗ್ಗಳಮಲ್ಲವೇ ॥ ೨೭ ॥
ಇಂತೆಂದು ನುಡಿದ ಕೃತ್ರಿಮ ದೀಕ್ಷಿತಂಗೆ ಗುಣ- ।
ವಂತ ಗುಣಪಾಲನೀ ತೆರದಿನೊಡಬಡಿಸಿದ ನಿ- ।
ರಂತರಂ ದಾನಧರ್ಮ್ಮವ ಮಾಡಿ ಕಡೆಗಾಲದಲ್ಲಿ ದೀಕ್ಷೆಯನು ತಳೆದು ॥
ಪಿಂತಣ ಗೃಹಸ್ಥರೆಲ್ಲಂ ಸದ್ಗತಿಯ ಜೇವಿ– ।
ತಾಂತದೊಳ್ಪಡೆಯರೇ ಎಂದೊಡಂಬಡಿಸಿಯ- ।
ತ್ಯಂತಾಗ್ರಹದಿನುತ್ತಮೆಯನವಗೆ ಪೊಳಲರಿಕೆಯಲ್ಲಿ ಮದುವೆಯ ಮಾಡಿದಂ ॥ ೨೮ ॥
ಆ ಮದುವೆಯಾದ ಮರುದಿನದುದಯದಲ್ಲಿಯಾ ।
ಕಾಮದಂ ಕಯ್ಯಕಂಕಣವೆರಸಿ ಪೋಗಿ ಮ- ।
ತ್ತಾ ಮಹಾ ದ್ಯೂತಶಾಲೆಯೊಳು ನೆರೆದಿರ್ದ್ದ ಜೂದುಂಗಾರರನೆ ಕಾಣುತಾ ॥
ಸೋಮೆಯನದಾವತೆರದಿಂ ಮದುವೆ ನಿಲ್ವೆನೆಂ- ।
ಬಾ ಮಾತು ದಕ್ಕಿತಲ್ಲಾ ಮೆಚ್ಚಬೇಡವೇ ।
ನೀಮೆನ್ನ ಚದುರತನಕೆಂದವಂ ನುಡಿದ ನುಡಿಗಿಂತೆಂದರಲ್ಲಿ ಕೆಲರು ॥ ೨೯ ॥
ಉತ್ತಮದ ಮಾಣಿಕವ ತಂದು ಕೋಡಗನ ಕೆಯ್ಯೊ- ।
ಳಿತ್ತೊಡದನೊಲ್ಲದೇ ಬಿಸುಡುವಂದದಿ ರುದ್ರ- ।
ದತ್ತ ನೀನೆಂದು ಮಾಡಿದ ಸುಕೃತದೊದವಿನಿಂ ಕೆಯ್ಸಾರ್ದ್ದ ಪೆಣ್ಮಣಿಯನು ॥
ಒತ್ತರಿಸಬೇಡವೆಂಬಾ ನುಡಿಗೆ ಕಿವುಡುಗೇಳುತ್ತ ।
ಮುನ್ನಿನ ಸೂಳೆ ವಸುಮಿತ್ರೆಯೆಂಬ ಪೆಸ- ।
ರ್ವೆತ್ತ ವೇಶ್ಯೆಯ ಮಗಳ್ಕಾಮಲತೆಯೆಂಬವಳ ಮನೆಗಿರದೆ ಪೋದನಂದು ॥ ೩೦ ॥
ವಿಕರಿವಿಶ್ವಾಸಘಾತಕಿ ರುದ್ರದತ್ತ ವಂ- ।
ಚಕತನದಿ ಮಾಡಿದಟಮಟವ ಕಂಡೆಂದಳು- ।
ತ್ಸುಕತನದಿ ಮಾಡಿದಂದಿನ ಕರ್ಮ್ಮಫಲದಿನೀರೂಪಿನಿಂ ಬೆಸ್ನೊಳೆಯ್ದಿ ॥
ಅಕಟಕಟ ನಾನು ಬದುಕುವೆನೆಂಬುದಕ್ಕೆ ಕಂ- ।
ಟಕವ ಮಾಡಿದುದಲಾ ಇಂತಪ್ಪುದಕ್ಕೆ ಕೌ- ।
ತುಕವಡೆವುದಕ್ಕೇನು ಕಾರ್ಯವೆಂದಾ ಸೋಮೆಯೆಣಿಕೆಮಾಡುತ್ತಿರ್ದ್ದಳು ॥ ೩೧ ॥
ಅನಿತರೊಳಗಾಶ್ರಿತಜನಾಧಾರ ಗುಣಪಾಲ- ।
ನನಿಮಿಷಾಂಬಕಿಗೆ ಬಂದನುವರವ ಕಂಡೆಲೆ ।
ತನುಜಾತೆ ನಿನ್ನ ಸಮ್ಯಗ್ದರ್ಶನಂ ನಿನ್ನ ನಿರ್ಮ್ಮಲಜ್ಞಾನ ನಿನ್ನಾ ॥

ವಿನುತಚಾರಿತ್ರ ನಿನ್ನೀ ರೂಪು ನಿನ್ನ ಸ- ।
ಜನಿಕೆಗಿದು ಬರತಕ್ಕುದಲ್ಲ ಕಲಿಯುಗದೊಂದು ।
ಘನತರಮಹಾತ್ಮೆಯಿಂದೆನಗಾದ ದುರ್ವಿಚಾರದಿನಿಂತು ನಿನಗಾಯಿತು ॥ ೩೨ ॥
ಎನಲೆಂದಳಾ ಸೋಮೆಯೆಲೆ ತಾತ ಕೇಳೆನ್ನ ।
ಮನದೊಳುಮ್ಮಳಿಕೆಯಿನಿಸಿಲ್ಲೀರುಮೂರು ಸ- ।
ಜ್ಜನದೂಷಣತ್ವಮಾಯಿಲವೊತ್ತುಜೊತ್ತು ಪರದಾರಮಾರಡಿನಿಗ್ರಹಾ ॥
ಅನೃತಮನ್ನೆಯ ತೊಂಡು ತೊಳಸೆಕ್ಕಸಿಕ್ಕ ವಂ- ।
ಚನೆ ಕುಹಕ ಜೂದು ಕುತ್ಸಿತ ಲಂಡುಬಂಡು ದು- ।
ರ್ಜನಮೆಂಬಿವೆಲ್ಲ ದುಷ್ಟಸ್ವಭಾವಂ ನೀವಿದಕ್ಕೇನ ಮಾಳ್ಪಿರೆನಲು ॥ ೩೩ ॥
ಕನ್ನೆ ಕೇಳಾ ಲೋಹದಿಂದ ಕೀಳಂ ಹಡೆದ ।
ಚಿನ್ನಮಂ ಪುಟಮುಖದಿ ಹಸಗೆಯ್ವ ತೆರದಿ ನಾ- ।
ನಿನ್ನೊಮ್ಮೆ ಕರೆದವನ ದುರ್ಮಾರ್ಗಮಂ ಬಿಡಿಸಿ ನಿನಗೆ ತಕ್ಕಂತೆ ಮಾಳ್ಪೆಂ ॥
ಅನ್ನೆವರ ಸತ್ಪಾತ್ರದಾನ ಜಿನಪೂಜೆಯ- ।
ತ್ಯನ್ನತಿಕೆವಡೆದ ಶೀಲೋಪವಾಸಂಗಳಂ ।
ನಿನ್ನ ಮನಸಿಗೆ ಬಂದ ತೆರದಿ ಮಾಡೆಂದೆಂಬ ನಿಜಪಿತೃವಿಗಿಂತೆಂದಳು ॥ ೩೪ ॥
ಈ ಜನ್ಮಕುತ್ತಮಬ್ರಹ್ಮಚರ್ಯ್ಯವ್ರತಂ ।
ಶ್ರೀಜಿನಾಧೀಶನರಿಕೆಯೊಳೆನಗೆನಲ್ಲನೆಂ- ।
ಬಾ ಜಲಜಮುಖಿಯ ನುಡಿಗೇಳಿ ಹರ್ಷೋತ್ಕರ್ಷಚಿತ್ತನಾ ಗುಣಪಾಲನು ॥
ರಾಜಮುಖಿ ಕೇಳಿನಿಸು ಸಂಶಯಂ ಮಾಡದೇ ।
ಭೂಜನಕೆ ಹೊಸತೆನಿಪ ದಾನಜಿನಪೂಜೆಗಳ- ।
ನೋಜೆಯಿಂ ಮಾಡಿಸೆನುತೊಂದು ಕೋಟಿದ್ರವ್ಯಮಂ ಕೊಟ್ಟನತಿಮುದದೊಳು ॥ ೩೫ ॥
ಆ ವಿತ್ತದಿಂದ ತದ್ರಾಜಧಾನಿಯೊಳುಳ್ಳ ।
ದೇವಾಲಯಂಗಳೆಲ್ಲವಕಿದೇ ಹಸನೆಂದು ।
ಭೂವಲಯಮೆಲ್ಲ ಕೊಂಡಾಡುವಂದದಿನೊಂದು ಚೈತ್ಯಗೃಹಮಂ ರಚಿಯಿಸಿ ॥
ಭಾವಜಾರಿಯ ಬಿಂಬಮಂ ಪ್ರತಿಷ್ಠೆಯಮಾಡಿ ।
ಭಾವಶುದ್ಧಿಯೊಳಃ ಬಳಿಕಾ ನಾಡುಬೀಡಿನೊಳು ।
ತೀವಿದ ಚತುಸ್ಸಂಘಮೆಲ್ಲಮಂಬರಿಸಿ ಪಿರಿದಾಗಿ ಪೂಜಿಸಿದಳಂದು ॥ ೩೬ ॥
ತದನಂತರಂ ತನ್ನನತಿ ಕುಹಕತನದಿನಾ- ।
ಹದಕೆ ತಂದಾ ರುದ್ರದತ್ತ ದುರ್ಜನನ ಮೋ- ।
ಹದ ಕಾಮಲತೆಯುಮಾ ಜನನಿ ವಸುಮಿತ್ರೆಯುಂ ಮೊದಲಾಗಿ ಪುರಜನಕೆ ॥
ಮುದದಿನವುತಣವ ಮಾಡಿಸಿದಳಾ ಗುಣವಂತೆ ।
ಮೊದಲು ತನ್ನಂ ತರಿದು ಕೊರೆದರಿದವರ್ಗೆ ಸಂ- ।
ಮುದದಿ ಬೆಲೆಗೊಂಡವರ್ಗೆ ಒಂದೇ ಸಮದ ಗಂಧವೀವ ಚಂದನದ ತೆರದಿ ॥ ೩೭ ॥

ಈ ತೆರದಿನುಣಿಸಿ ಕರ್ಪೂರತಾಂಬೂಲಮಂ ।
ಪ್ರೀತಿಯಿಂದಿತ್ತು ಬೀಳ್ಕೊಡುವ ಸೋಮೆಯ ಜನವಿ- ।
ನೂತಮಪ್ಪಾ ರೂಪುಗಂಡು ಮೂಗಿಂಗೆ ಬೆರಲಿಟ್ಟು ಮಂಡೆಯನೊಲೆಯುತ ॥
ಭೂತಳದೊಳಿಂತಪ್ಪ ಚೆಲ್ವು ಜವ್ವನಸೊಬಗು ।
ರೀತಿರಸಿಕತೆ ಸಚ್ಚರಿತ್ರವುಳ್ಳಬಲೆಯಂ ।
ಮಾತೇನು ಕಂಡುದಿಲ್ಲೆಂದು ವಸುಮಿತ್ರೆ ಕೊಂಡಾಡುತ್ತ ಮನೆಗೆ ಬಂದು ॥ ೩೮ ॥

ಎತ್ತಾನುಮೊಂದುದಿನಮಗಲಿ ಕೂಡಿದನಾದೊ- ।
ಡುತ್ತಮ ವಿಲಾಸವತಿಯೀ ಸೋಮೆಯಂ ರುದ್ರ- ।
ದತ್ತನಗಲುವನೆ ಅಥವಾ ಮೀರಿಯಗಲಿದೊಡೆಯಸುಹೋದ ದೇಹದಂತೆ ॥
ಸತ್ತುಹೋಗದೆ ಸುಮ್ಮನಿರ್ಪನೇ ಅಂತದು ನಿ- ।
ಮಿತ್ತವೆನ್ನೀ ಕಾಮಲತೆಗೆ ಭಾವಿಸಲು ತಾ- ।
ನೆತ್ತಣದು ಬದುಕದರಿನಾವ ಪ್ರಕಾರದಿಂ ದಿನಬಂಜೆವಡೆಯದಿವಳಾ ॥ ೩೯ ॥

ಹತಿಸುವೆಣಿಕೆಯನೆಣಿಸಿ ವಸುಮಿತ್ರೆ ತನ್ನ ನಿಜ ।
ಸುತೆ ಕಾಮಲತೆಯ ಕೈಯೊಳಗೆ ಸೋಮೆಗೆ ದಿನಂ- ।
ಪ್ರತಿ ಪುಷ್ಪಮಾಲೆಯಂ ಕಳುಹಿ ಬಂಧುತ್ವಮಂ ಬಲಿದೊಂದುದಿನಮುಖದೊಳು ॥
ಅತಿಗುಪ್ತದಿಂದ ಪೂವಿನ ಕರಂಡಕದೊಳು- ।
ದ್ಧತವಿಷಮಸರ್ಪಮನಿರಿಸಿಕೊಂಡು ತಾನಿರ್ವ್ವರ್- ।
ರತಿಭಕ್ತಿಯಿಂ ಜಿನಾಲಯದೊಳಿರ್ಪ್ಪಾ ಸತ್ಯನಿಧಿಯ ಕೆಯ್ಯೊಳಗಿತ್ತರು ॥ ೪೦ ॥

ಈ ತೆರದಿ ತಾವಿರ್ವ್ವರುಂ ಕೊಡಲ್ಕಾಸೋಮೆ ।
ನೀತಿವಿದೆ ನಿಜದ ಪೂಮಾಲೆಯೆಂದೇ ಬಗೆದು ।
ವೀತರಾಗಂಗೆಯರ್ಚ್ಚನೆ ಮಾಡಲೆಂದಮೃತಹಸ್ತದಿಂ ಮುಟ್ಟಲೊಡನೆ ॥
ಮಾತೇನು ವಿಷಮವಿಷಧರನು ಸೌರಭ್ಯಸಮು- ।
ಪೇತ ಸುಮನೋದಾಮವಾಗಿ ರಂಜಿಸಿದುದು ವಿ- ।
ನೂತಗುಣಮಣಿಯ ಸಮ್ಯಕ್ತ್ವದ ಮಹಾತ್ಮೆಯನದೇನೆಂದು ಬಣ್ಣಿಸುವೆನು ॥ ೪೧ ॥

ಶ್ರೀಮತ್ಪರಮದಯಾಮೂಲಯುತಧರ್ಮಮೆಂ- ।
ಬಾ ಮಹಾಪುರುಷಂಗೆ ಸಲೆ ಸೋಲ್ತು ಬಂದು ಸು- ।
ಪ್ರೇಮದಿಂ ಸೂಡಲೆಂದೆನುತ ಸಮ್ಯಕ್ತ್ವಸತಿಪಿಡಿದ ಪೂಮಾಲೆಯಂತೆ ॥
ಆ ಮದನವಿಧ್ವಂಸನರುಣಾಂಘ್ರಿಯುಗಮೆಂಬ ।
ತಾಮರಸಕರ್ಚನೆಯನೋವದೇ ಮಾಡಲೆಂ- ।
ದಾ ಮಾನಿನೀಮಣಿ ಸರಾಗದಿಂ ಪಿಡಿದರಲಮಾಲೆ ಕಣ್ಗೆಡ್ಡಮಾಯ್ತು ॥ ೪೨ ॥

ಇಂತು ಕಣ್ಗತಿರಮ್ಯವಡೆದ ಪೂಮಾಲೆಯಂ ।
ಕಂತುಮರ್ದನನಂಘ್ರಿಗರ್ಚನೆಯ ಮಾಡಿ ತದ- ।
ನಂತರಂ ತತ್ಕರಂಡಕದೊಳದನಿರಿಸಿಕೊಂಡಾ ಧಾಳೆಯರನಿರ್ವ್ವರಂ ॥

ಸಂತೋಷದಿಂ ಕೂಡಿಕೊಂಡು ನಿಜಗೃಹಕೆ ಗುಣ- ।
ವಂತೆ ಬಂದೊಳ್ಳುಣಿಸನುಣಿಸಿ ವಸ್ತ್ರಾಭರಣ- ।
ಮಂ ತರಿಸಿ ಕಾಮಲತೆಗುಡತೊಡಿಸಿ ತತ್ಕುಸುಮಮಾಲೆಯುಂ ತೆಗೆದುಕೊಂಡು ॥ ೪೩ ॥
ಮುಡಿಗೆ ಮುಡಿಯೆಂದವಳ ಕೆಯ್ಯೊಳಗೆ ತಂದುಕೊಡ- ।
ಲೊಡನೆ ಹಾವಾಗಿ ಹೂಂಕರಿಸಿ ಕೋಪದಿ ಕೆಯ್ಯ ।
ಕಡಿಯಲಾ ಕ್ಷಣದೊಳಗೆ ವಿಷವೇರಿ ಮುಗ್ಗಿರಿದು ಕಾಮಲತೆ ಭೂತಳಕ್ಕೆ ॥
ಕೆಡೆಯಲದಕಂಡು ವಸುಮಿತ್ರೆ ಮೊರೆಯೊ ಮೊರೆಯೋ ।
ಕಡುಪಾಪಿಯೀ ಸೋಮೆ ಸವತಿಮಚ್ಚರದಿಂದ ।
ಕೆಡುಕ ಹಾವಂ ತಂದು ಕೊಟ್ಟೆನ್ನ ಮಗಳ ಕೊಲಿಸಿದಳೆಂದು ಶೋಕಗೆಯ್ದು ॥ ೪೪ ॥
ಬಳಿಕವಳನೆತ್ತಿಕೊಂಡರಮನೆಯ ಬಾಗಿಲೊಳ- ।
ಗಿಳುಪಿ ಮೊರೆಯೊ ಮೊರೆಯೋ ಎಂದೆನಲ್ಕೇಳಿ ಭೂ-।
ಲಲನೇಶನವಳ ಕರೆಯಿಸಿಕೊಂಡಿದೇನೆಂದು ಬೆಸಗೊಂಡೊಡಿಂತೆಂದಳು ॥
ಇಳೆಯಾಧಿಪತಿ ಕೇಳು ನನ್ನ ಮಗಳಂ ತನ್ನ ।
ನಿಲಯಕ್ಕೆ ಕರಸಿ ನೀನೆನ್ನ ಗಂಡನನೆನ್ನ ।
ಬಳಿಗೆ ಬರಲಿಸದಾದೆಯಲಾ ಎನುತ್ತ ಹಾವಿಂದ ಕಡಿಯಿಸಿ ಕೊಂದಳು ॥ ೪೫ ॥
ಎಂದ ಮೊರೆಗೇಳಿ ಕೋಪದಿನರಸು ಕರಸಲಾ ।
ದಂದಶೂಕನ ಕರಂಡಕಸಹಿತ ಸೋಮೆ ನಡೆ- ।
ತಂದುದಂ ಕಂಡು ನೀನಿಂತಪ್ಪ ವಂಚನೆಯನಿವಳ ಕೊಲಬಹುದೆಯೆನಲು ॥
ಇಂದುಮುಖಿ ನುಡಿದಳ್ ದಯಾಮೂಲಧರ್ಮದೊಳ- ।
ಗೊಂದಿನಿಸು ಜಿಡವಲ್ಲದಿರ್ಪವರಿದಂ ಮನಸು ।
ದಂದುಮಾಡುವರೊ ಮಾಡರೋ ಎಂಬುದಂ ಸ್ವಾಮಿ ನೀವೇ ವಿಚಾರಿಸೆನಲು ॥ ೪೬ ॥
ಎಂದೆಂಬ ನುಡಿಗೇಳಿಯೀ ಕಥನಮಾವ ತೆರ- ।
ದಿಂದಾಯಿತೆನಲಲೇ ಭೂಪಾಲ ನಾನಿದೇ- ।
ನೆಂದರಿಯೆ ತಾಮಿರ್ವರುಂ ಬಂದು ನನಗೊಂದು ಮಾಲೆಯುಂ ತಂದುಕೊಡಲು ॥
ಕಂದರ್ಪವಿಜಯಗದನರ್ಚನೆಯ ಮಾಡಿ ಮುದ- ।
ದಿಂದಲೆ ಕಾಮಲತೆ ನೀನಿದಂ ಮುಡಿಗೆ ಮುಡಿ- ।
ಯೆಂದು ಕೊಡಲಾಗಲಾ ಮಾಲೆಯೇ ಹಾವಾಗಿ ಹರಿತಂದುದಂ ಕಂಡೆನು ॥ ೪೭ ॥
ಮತ್ತೇನು ಮಾಯೆಯೆಂದರಿಯೆನೀ ಕರಡಿಗೆಯ ।
ಚಿತ್ತೈಸಿ ನೀವೇ ಪರೀಕ್ಷಿಸಿ ಯೆನಲ್ಮಹೀ- ।
ಪೋತ್ತಂಸ ಕಂಡವಳ ಕೈಯಿಂದ ತೆಗಿಯಿಸಲ್ಕವಪುಷ್ಪಮಾಲೆಯಾಗಿ ॥
ಎತ್ತಿಬರಲಂತದಂ ಜಿಳ್ದಿರ್ದ್ದ ಕಾಮಲತೆ- ।
ಯೊತ್ತಿನೊಳಗಿರಿಸೆನಲ್ಕಿರಿಸೆ ಹಾವಾಗಿ ಹರಿ- ।
ಯುತ್ತಿರಲ್ಕಾಣುತಾಸ್ಥಾನಮೆಲ್ಲಂ ಪಿರಿದು ವಿಸ್ಮಯಂಗೊಂಡುದಾಗ ॥ ೪೮ ॥

ಆಕಸ್ಮಿಕವನಿಲ್ಲಿಯಲ್ಲದೆ ಸ್ವಾಮಿ ಕೇಳ್ ।
ಲೋಕದೊಳ್ಕಂಡುದಿಲ್ಲಾ ಎಂಬ ನುಡಿಗೇಳಿ- ।
ಯಾ ಕಾಮಲತೆಯ ನಿಜಜನನಿ ವಸುಮಿತ್ರೆ ತಾನಿಂತೆಂದು ನುಡಿದಳಾಗ ॥
ಈ ಕಪಟಮಂ ಮಾಡಿ ಬಳಿಕೆನ್ನ ಮಗಳ ನಾ- ।
ಸೇ ಕೊಂದೆನೀತೆರಂ ಕಲ್ಲಸೆಜ್ಜಾಮಿಂಟೆ ।
ಯಾಕರ್ತವಂತಾಗಿದಂತಾಯಿತೆಂದು ಸೋಮೆಯ ಪದಕೆ ವಂದಿಸಿದಳು ॥ ೪೯ ॥
ಬಳಿಕೆಲ್ಲ ಕಾಣ್ಬವೊಲ್ ಜಿನನೆ ಗತಿಯೆಂದು ಮೃದು- ।
ತಳಮನಾ ಸತ್ಯನಿಧಿಯಾ ಕಾಮಲತೆಯಂಗ- ।
ದೊಳಗಿರಿಸೆಯುಪರಂಜಿಯೊಡವೆರದ ಪಾದರಸವಗ್ನಿಮುಖಮಂ ಕಾಣುತಾ ॥
ತಳುವದೇ ಹಾರುವಂದದಿ ಹಾರಿತವಳ ಮೆ- ।
ಯ್ಯೊಳವರಿದ ವಿಷಮವಿಷಮಂತದಂ ಕಂಡು ಭೂ- ।
ಲಲನೇಶ ಭೂಭೋಗನಾಕೆಯಂ ಕೊಂಡಾಡಿ ಬಳಿಕಿಂತು ನುಡಿದನಾಗ ॥ ೫೦ ॥
ತನ್ನನೇ ಹೀರಿ ಬಡವಾಳ್ವ ವಡಬಾಗ್ನಿಯಂ ।
ತನ್ನನೇ ಹೆಚ್ಚುಗೆಯ ಮಾಳ್ಪಮೃತಕಿರಣನಂ ।
ಮುನ್ನೀರು ತನ್ನ ಗಂಭೀರತನವನೇ ಮೆರೆದು ಗರ್ಭೀಕರಿಸಿತಿಲ್ಲವೇ ॥
ಅನ್ನೆಯದಿ ತನಗೆಯುಪಕಾರಮಂ ಮಾಡಿದವ- ।
ರೆನ್ನದೇ ತನಗೆಯುಪಕಾರಮಂ ಮಾಡಿದವ- ।
ರೆನ್ನದೇ ಒಂದೇ ಸಮಂಗಾಣದೇ ಸುಮ್ಮನೇಕಿರ್ಪ್ಪರಾ ಸುಜನರು ॥ ೫೧ ॥
ಎಂದು ಕೊಂಡಾಡಿ ಪಲಸೂಳಧಿಕತರಹರ್ಷ- ।
ದಿಂದ ನವರತ್ನಪೀಠವ ತರಿಸಿ ಕುಳ್ಳಿರಿಸಿ ।
ಚಂದಚಂದದ ಭೂಷಣಾಂಬರವಿಲೇಪನಪ್ರಸವದಿಂ ಪೂಜೆಗೆಯ್ದು ॥
ಸಂದಣಿಸಿ ನೋಡುತಿರೆ ನಗರದೇವತೆಗಳೆ- ।
ಯ್ತಂದು ನವರತ್ನ ನವಕುಸುಮವೃಷ್ಟಿಯನು ಪೂ- ।
ರ್ಣೇಂದುಮಂಡಲಮುಖಿಗೆ ಮಾಡಿದಂ ಭೂಭೋಗವಿಶ್ವಂಭರಾಧೀಶನು ॥ ೫೨ ॥
ಕಾಮಲತೆ ಕಪಟದಿಂ ಕೊಟ್ಟ ಕಾಳಿಯನಾಗ ।
ಸೋಮೆ ಮುಟ್ಟಿದೆಡೆ ಪೂಮಾಲೆಯಾಯಿತು ಕಂಡ ।
ಸೋಮೆ ಕುಡಲದು ಕಾಮಲತೆಯನೇ ಹಾವಾಗಿ ಹರಿದು ಕೊಂದಿತ್ತು ಕಂಡಾ ॥
ಆ ಮಹಾಸತ್ಯನಿಧಿ ಮುಟ್ಟಲಾಕ್ಷಣ ಸತ್ತ ।
ಕಾಮಲತೆಯುರಸರಿವ ತೆರದಿನೆಳ್ದಳು ಕಂಡ ।
ನಾಮೆಲ್ಲರಿದನು ನೋಡುವ ಬನ್ನಿಯೆಂದೂರುಕೇರಿಯೆಲ್ಲಂ ನೋಡಿತು ॥ [illegible] ॥
ಅನಿತರೊಳಗಮರರಾಗಸದೊಳನಿಮಿಷಪಟಹ ।
ನಿನದಮಂ ಪಾರಿಜಾತದ ಪುಷ್ಪವೃಷ್ಟಿಯಂ ।
ಮಿನುಗುವಪರಂಜಿದಗಡಿನದೊಂದು ತಂಡಲಂ ಥಳಥಳಿಪ ಮಣಿಯ ಮಳೆಯಂ ॥

ಜನವಿನುತಸೋಮೆ ಜಗದಾಶ್ಚರ್ಯಗುಣಧಾಮೆ ।
ನಿನಗಲ್ಲದೀ ಸತ್ಯಮಿನ್ನುಳಿದವರ್ಗುಂಟೆ ।
ಯೆನುತ ಕೊಂಡಾಡಿಯಾವರ್ಣನೆಯುಮಂ ನಗರಿಯುರಿವಂತೆ ಕಾಣಿಸಿದರು ॥ ೫೪ ॥
ಆ ಸಮಯದಲ್ಲಿ ಸದ್ಧರ್ಮಸ್ವರೂಪಮಂ ।
ಭಾಸುರಗುಣಾಭರಣೆ ಸೋಮೆ ಪೇಳಲ್ಕೇಳ್ದು- ।
ದಾಸೀನಮಂ ಮಾಡಿ ಸಕಲಭೋಗೋಪಭೋಗಕ್ಕೆ ನಿರ್ವೇಗವೊದವೆ ॥
ಓಸರಿಸದರಸುತನಮಂ ಸುತಂಗಿತ್ತೆರಡು ।
ಸಾಸಿರ್ವರರಸುಗಳ್ಗಣಪಾಲಸೆಟ್ಟಿಸಹಿ- ।
ತಾ ಸುಮತಿಯೆಂಬ ಗುರುವಿಂ ದೀಕ್ಷೆಗೊಂಡನಾ ಭೂಭೋಗಭೂಪಾಲನು ॥ ೫೫ ॥
ಅರಸನರ್ಧಾಂಗಿ ಭೋಗಾವತಿಯುಮಾ ವೈಶ್ಯ- ।
ವರನ ನಿಜಸುದತಿ ಗುಣವತಿಯುಮಾ ಸೋಮೆಯುಂ ।
ಪುರದೊಳ್ಕೆಲಂಬರಬಲೆಯರುಸಹಿತಂ ಭದ್ರಮತಿಯೆಂಬ ಕಂತಿಯರೊಳು ॥
ಹರಿಸದಿಂ ದೀಕ್ಷೆಗೊಳಲಾ ರುದ್ರದತ್ತ ಭೂ- ।
ಸುರನುಮಾ ವಸುಮಿತ್ರೆಯಾ ಕಾಮಲತೆಯುಮತಿ ।
ಭರದಿ ಸುವ್ರತವ ಧರಿಸಿದರಲ್ಲಿ ಭದ್ರಪರಿಣಾಮಿಗಳ್ಕೆಲರಾದರು ॥ ೫೬ ॥
ಇಂತಾದ ದೃಷ್ಟಾಂತಮಂ ಕಂಡು ಸಮ್ಯಕ್ತ್ವ- ।
ಮಂತಸ್ಥಮೆನಗಾಯಿತೆಂದ ಗಂಧಶ್ರೀಗೆ ।
ಸಂತಸದಿನಿಚ್ಛಾಮಿಯೆಂಬ ವೈಶ್ಯೋತ್ತಮನ ತತ್ಕಾಮಿನಿಯರ ನುಡಿಯಾ ॥
ಅಂತರದ ಸತಿ ಕುಂದಲತೆಯೆಂದಳೀ ನುಡಿಗೆ ।
ಯೆಂತಾನುಮೊಡಬಡುವೆನೇ ಯೆಂಬ ನುಡಿಗೇಳಿ ।
ಕಂತುನಿಭನುದಿತೋದಯಾವನೀಪಾಲನಾ ಮಂತ್ರಿಯಿಂತೆಂದರಾಗ ॥ ೫೭ ॥
ಕಣ್ಣಾರೆ ಕಂಡು ಕಿವಿಯಾರೆ ಕೇಳ್ದುದ ಬಣ್ಣ- ।
ವಣ್ಣಿಗೆಯ ನುಡಿಯಿದೆಲ್ಲಂ ಮಿಥ್ಯೆಯೆಂದಿವರ ।
ಕಣ್ಣಕುಕ್ಕಿದ ತೆರದಿ ನುಡಿದ ಲಂಡೆಯನು ಹಿಡಿತರಿಸಿ ನುಡಿದಾ ಬಾಯೊಳು ॥
ಮಣ್ಣತುಂಬಿಸಿ ಬರಲ ತರಿಸಿ ನಗರಿಯ ಗಂಡು ।
ಹೆಣ್ಣೆಲ್ಲ ನೋಡುವಂದದಿ ಮೆಯ್ಕರಂ ಹುಣ್ಣು ।
ಹುಣ್ಣಾಗುವಂತೆ ನೆರೆ ಕೊಲಿಸಬೇಕಿವಳನಿನಮಂಡಲಂ ಮೂಡಲೊಡನೆ ॥ ೫೮ ॥
ಸುಲಲಿತಸ್ವರದ ಸಂಗೀತಕ್ಕೆ ಮಣಿದಲೆಯ- ।
ನೊಲೆವ ಫಣಿರಾಜನಂದದಿ ಕಿವುಡುಗರ ತಲೆ- ।
ಯುಲುಗುವುದೆ ಸಜ್ಜನರ ನುಡಿಗೆ ಸಭ್ಯರು ಲಾಲಿಪಂದದಿಂ ಕಿವಿಗೊಡುವರೇ ॥
ಖಳರೆನುತ ಮರದ ಮೇಲಣ ಚೋರನೆಣಿಸುತಿರೆ ।
ಲಲನೆಯಾಡಿದ ನುಡಿಗೆ ಮನಮಿತ್ತನಾ ವೈಶ್ಯ- ।
ಕುಲತಿಲಕನಮಲನರ್ಹದ್ದಾಸಜಿನಸಮಯವಾರ್ಧಿವರ್ಧನಚಂದ್ರನು ॥ ೫೯ ॥

ಇದು ವಿಬುಧಜನವಿನುತವಿದು ವಿಬುಧಜನವಿನತ- ।
ವಿದು ವಿದಿತಜಿನಸಮಯಶರಧಿಸಂಪೂರ್ಣೇಂದು ।
ಸದಮಲಯಶಸ್ಕಾಂತ ಯದುವಂಶನೃಪರ ಸಚಿವಾನ್ವಯಾಂಬರಹಂಸನು ॥
ಮದನಸಮರೂಪನುತ್ತಮಗುಣಕರಂಡಕಂ ।
ಚೆದುರಮಂಗರಸನುಸಿರ್ದೀ ಕೌಮುದೀಕಥೆಯೊ- ।
ಳೊದವಿರಂಜಿಸಿತು ಗುಣವಂತೆ ಸೋಮೆಯುದೊಂದು ಕಥನವಾರನೆಯಸಂಧಿ ॥ ೬೦ ॥

ಅಂತು ಸಂಧಿ ೬ ಕ್ಕಂ ಪದ ೩೬೩ ಕ್ಕಂ ಮಂಗಲಮಹಾ ॥ ಶ್ರೀ ॥



# ಏಳನೆಯ ಸಂಧಿ.



## ಸೋಮಶರ್ಮನ ಕಥೆ.

ಶ್ರೀಮದರ್ಹದ್ದಾಸವೈಶ್ಯವಿಭು ಕೇಳಲಾ ।
ತಾಮರಸವದನೆ ವಿಷ್ಣುಶ್ರೀ ಕರಂಗಳಂ ।
ಪ್ರೇಮದಿಂ ಮುಗಿದು ತನಗಾದ ಸಮ್ಯಕ್ತ್ವಮಂ ಜಿನ್ನಪಂಗೆಯ್ದು ಳಿಂತು ॥ ಪಲ್ಲ ॥

ಕೌಶಂಬಿಯೆಂಬ ನಗರಂ ಮಹಾಲಕ್ಷ್ಮೀಪ್ರ- ।
ವೇಶಕ್ಕೆ ತಾನೇ ನಿವೇಶಮೆನಿಸಿದ ವತ್ಸ- ।
ದೇಶವೇ ತನ್ನ ಬಳಸಿನೊಳೊಪ್ಪುತಿರೆ ಕನಕಸರಸಿರುಹದಳಮಧ್ಯದಾ ॥
ಕೋಶದಂಡದೊಳೆಸೆಯುಲದರೊಳಜಿತಂಜಯ ವಃ- ।
ಹೇಶನತಿರೂಪವತಿ ಸುಪ್ರಭೆವೆಸರ ಮತ್ತ ।
ಕಾಶಿನಿಯೊಳೊಡಗೂಡಿ ಸುಖಸಂಕಥಾವಿನೋದದೊಳರಸುಗೆಯ್ಯುತಿಹನು ॥ ೧ ॥

ಆತಗತಿಹಿತಮಂತ್ರಿ ಸೋಮಶರ್ಮಂ ಜನವಿ- ।
ನೂತ ಗುಣಭೂಷಣಂ ಮಿತ್ರಪರಿಣಾಮಿ ಸಂ- ।
ಪ್ರೀತಿಯಿಂದನುದಿನ ಕುಪಾತ್ರದಾನಂ ಮಾಡುತಿರಲಾ ಪುರದ ಬನದೊಳು ॥
ಭೂತಹಿತಪರನಾ ಸಮಾಧಿಗುಪ್ತಾಚಾರ್ಯ ।
ಜಾತರೂಪನುಮೊಂದು ಮಾಸೋಪವಾಸಮಂ ।
ಪ್ರೀತಿಯಿಂ ಕೈಕೊಂಡು ನಿರ್ಜಂತುಕ ಪ್ರದೇಶದೊಳೇಕಚಿತ್ತದಿಂದಾ ॥ ೨ ॥

ಈ ತಿಂಗಳೀ ತಾಣದಿಂದಾವುದುಪಸರ್ಗ- ।
ಮೇತೆರದಿ ಬಂದೊಡಂ ಕೆಯ್ಯೆತ್ತೆವೆಂದೆನು- ।
ತ್ತಾ ತನುವಿನಿಂದಸುವ ಜೀರ್ಕ್ಯೆಯ್ದು ತನ್ನಿಂದ ತನ್ನನೇ ಭಾವಿಸುತ್ತ ॥
ಆ ತಪೋನಿಧಿ ಶಾಂತರಸದ ಪುತ್ತಳಿಯಂತೆ ।
ಭೂತಳಂ ಪೊಗಳೆ ಕಾಯೋತ್ಸರ್ಗ್ಗದಿಂ ನಿಲಲ್ ।
ಜಾತಿವೈರಂದೊರೆದು ಖಗಮೃಗಾವಳಿ ನಿಂದು ನೋಡುತ್ತುಮಿರ್ದ್ದುವಾಗ ॥ ೩ ॥

ಕಾಲವಲ್ಲದಕಾಲದಲ್ಲಿ ನವಖರ್ಜೂರ ।
ಬಾಳೆ ಬಕುಳುಂ ಬಕ್ಕೆ ಜಂಬುಜಂಬೀರ ಕಿ- ।
ತ್ತೀಳೆ ಮಾಕಂದ ಮಾದಲ ಪೂಗ ಪುನ್ನಾಗ ನಾಗ ಚಂಪಕ ಪಾಟಲಿ ॥
ನಾಳಿಕೇರಾಶೋಕ ಮಂದಾರಕುರವಕಂ ।
ದಾಳಿಂಬ ನಾಗಕೇಸರಿ ಶಿರೀಷದ ವೃಕ್ಷ- ।
ಜಾಲಮೆಲ್ಲಂ ತಳಿರ್ತನೆಪಚ್ಚೆಗಾಯ್ದೋರೆವಣ್ಗಳಂ ಪಡೆದುವಾಗ ॥ ೪ ॥

ನೀರರತನೀರೇರುಹಾಕರಗಳೆಲ್ಲ ಪರಿ- ।
ಪೂರಿತಜಲಂಬಡೆದುವಂಬುರುಹ ಕುಮುದ ಕ- ।
ಲ್ಹಾಹರಕುವಲಯಮೆಲ್ಲವಲರೇರಿದುವು ತೆಂಕಣಾಸೆಯಿಂ ತಣ್ಪುವೆರಸಿ ॥
ಸೌರಭ್ಯವಾಯು ಮೆತ್ತನೆಮೆತ್ತನೂದಿದುದು ।
ಚಾರುಕೋಕಿಲದ ಕೊರಲೊಳು ಮುನ್ನಸಪ್ತಸರ ।
ಘೋರನುದಯಿಸಿ ಕಂತುವಂ ಪುಗಲ್ಪುಗಲೆಂದುವಾ ತಪಸಿಯಿರ್ದ್ದ ಬನಕೆ ॥ ೫ ॥
ಈ ತೆರದ ಮಾಸೋಪವಾಸಾಂತರದೊಳು ಮ- ।
ತ್ತಾ ತಪಸಿನಭಿವೃದ್ಧಿಗಿರಬೇಕು ತನುವೆಂದು ।
ಜಾತರೂಪಂ ಬನವ ಪೊರಮಟ್ಟು ಪುರಕೆಯ್ದೆ ಭಾವರಿಯುನಿಡಲು ಕಂಡು ॥
ಪ್ರೀತಿಯಿಂದೆಂಟು ತೆರದರ್ಚ್ಚನಾದ್ರವ್ಯಸಮು- ।
ಪೇತನಾ ಸೋಮಶರ್ಮ್ಮಂ ಬಂದು ಪದಕೆ ತ- ।
ನ್ನಾ ತಲೆಯುನಿಟ್ಟು ಪೂಜಿಸಿ ಬಳಿಕ ತಿಷ್ಠತಿಷ್ಠಾಯೆಂದು ಬಲವರುತವೆ ॥ ೬ ॥
ಬಳಿಕ ಭವನಕ್ಕೆ ಕೊಂಡೊಯ್ಯುತಾಸ್ಥಾಪನೋ- ।
ಜ್ವಲಪೀಠಪಾದೋದಕಂ ಪೂಜೆವಂದನಂ ।
ಸಲೆ ಮನೋವಾಕ್ಕಾಯಶುದ್ಧಿ ಯೇಷಣಶುದ್ಧಿಯೆಂಬ ನವವಿಧ ಪುಣ್ಯದಿ ॥
ಸುಲಲಿತ ಶ್ರದ್ಧೆ ವಿನುತಕ್ಷಮಾಭಕ್ತಿ ನಿ- ।
ರ್ಮ್ಮಲಬೋಧಮಲುಬ್ಧತೆ ಸಂತುಷ್ಟಿ ಶಕ್ತಿಯುಂ ।
ತಳೆದೇಳುಗುಣಗಳಿಂದಾ ತಪೋನಿಧಿಗೆ ಮತ್ತಾ ಮಂತ್ರಿಕುಲತಿಲಕನು ॥ ೭ ॥
ಸಾಕ್ಷಾತ್ಸುಬೋಧಯುತನೇ ಸ್ವರೂಪನೆ ಭುವನ- ।
ರಕ್ಷಾಮಣಿಯೆ ಎನುತ್ತಾ ಪಾಣಿಪಾತ್ರೆಗತಿ ।
ಸುಕ್ಷೇತ್ರದಲ್ಲಿಯುತ್ತಮುಮಪ್ಪ ಬೀಜಮುಂ ಬಿತ್ತುವಂದದೊಳಿಕ್ಕಿದಾ ॥
ಭಿಕ್ಷೆಯಂ ಕೊಂಡು ಕೆಯ್ಯಂದೊಳೆದು ಬಳಿಕಾ ಮು- ।
ಮುಕ್ಷುವಕ್ಷಯದಾನಮೆಂಬಾ ಕ್ಷಣದೊಳಂತ- ।
ರಿಕ್ಷದೊಳಗಪ್ಸರರ್ನ್ನೆರೆದು ಪಂಚಾಶ್ಚರ್ಯ್ಯಮಂ ಮಾಡೆ ಮನದೆಗೊಂಡು ॥ ೮ ॥
ಆವನು ಕಂಡಾ ಮಂತ್ರಿಯೆಂದನೆಲೆ ಮುನಿನಾಥ ।
ಸದಮಲಮೆನಿಪ್ಪ ವೈಷ್ಣವ ಶೈವ ವೈದಿಕಂ ।
ಮೊದಲಾದ ಸಮಯದೇಕದ್ವಿತ್ರಿದಂಡಿಸದ್ಬ್ರಾಹ್ಮಣಬ್ರಹ್ಮಚಾರಿ ॥
ವಿದಿತಾಗ್ನಿಹೋತ್ರ್ಯಾದಿ ಮಖಕರ್ತ್ತೃ ದೀಕ್ಷಿತ- ।
ರ್ಗ್ಗೊದವಿ ಬಹು ಕನಕತಿಲನಾಗಮಹಿದಾಸಿರಥ ।
ಸದನಕನ್ಯಾಕಪಿಲಧೇನುವೆಂದೆಂಬ ದಶವಿಧಮಪ್ಪ ದಾನಗಳನು ॥ ೯ ॥
ಮನವಾರೆ ಮಾಡೆಯೂ ಆಶ್ಚರಿಯ ಕಂಡುದಿ- ।
ಲ್ಲೆನೆ ಮಗನೆ ಕೇಳು ರಾಗದ್ವೇಷಬೋಧಯುತ- ।
ರೆನಿಸಿದ ಕುಪಾತ್ರಕ್ಕೆ ಮಾಡಿದ ದಾನಫಲ ಕರಲುನೆಲದೊಳು ಬೀಜವಾ ॥

ಎನಿತು ವಿಧದಿಂಗೆಯ್ದು ಚಿತ್ತಿಯುಂ ಸತ್ಫಲಮ- ।
ನಿನಿಸು ಹಡೆಯದ ತೆರದಿನುತ್ತರೋತ್ತರ ಪದಂ ।
ಕನಸುಮನಸಿನೊಳಿಲ್ಲಮದರಿಂದ ಸತ್ಪಾತ್ರ ಮುಖ್ಯಮದು ತಾನೆಂತೆನೆ ॥ ೧೦ ॥
ಸ್ವೇದ ಸಂಕ್ಲೇಶ ರುಜೆ ರತಿ ಮೃತಿ ಜರೆ ಪಸಿವು ವಿ- ।
ಷಾದ ಜನನ ಸುಷುಪ್ತಿ ಕಾಂಕ್ಷೆ ಭೀರುತೆ ಚಿಂತೆ ।
ಖೇದ ರಾಗದ್ವೇಷ ತೃಷೆ ಮೋಹಮೆಂಬ ಪದಿನೆಂಟುದೋಷಂ ಪೊರ್ದ್ದದಾ ॥
ಆದಿಮಧ್ಯಾಂತವಿರಹಿತನನುಪಮ ವಿಶ್ವ- ।
ವೇದಿಯೇ ದೈವಮಾತನ ಮುಖದೊಳೊಗೆದುದೇ ।
ವೇದಮದನರಿದು ಕೊಲೆ ಹುಸಿ ಕಳವು ಸತಿಯುರತಿಕಾಂಕ್ಷೆಯುಂ ಬಿಟ್ಟು ಬಳಿಕ ॥ ೧೧ ॥
ಮನೆಮಕ್ಕಳಾದಿಯ ಕುಟುಂಬ ನಾಡುಂ ಬೀಡು ।
ಧನಧಾನ್ಯಪಂಚೇಂದ್ರಿಯಂಗಳಿಷ್ಟೆಯಭೋಗ ।
ತನುವಿನಾಸಕ್ತಿ ರತಿಯರತಿ ಭೀರುತೆ ಹಾಸ್ಯಶೋಕಬೀಭತ್ಸರಾಗ ॥
ಘನತರದ್ವೇಷ ಮಿಥ್ಯಾಮಾರ್ಗ್ಗ ವೇದ ಬಲು ।
ಹೆನಿಸುವಾ ಕ್ರೋಧಮಾನಂ ಮಾಯೆ ಲೋಭಮೆಂ- ।
ಬಿನಿತಂ ಮನೋವಚನಕಾಯದೊಳ್ಮರೆದು ಸಚ್ಚಾರಿತ್ರದೊಳು ನೆಗಳುವಾ ॥ ೧೨ ॥
ಗುರುವೆ ಉತ್ತಮಪಾತ್ರಮಾ ಗುರುನಿರೂಪಮಂ ।
ಧರಿಸಿ ಪಂಚಾಣುವ್ರತವನು ಕೈಕೊಂಡು ಬಂ- ।
ಧುರಜಿನಾರ್ಚ್ಚನೆ ಗುರೂಪಾಸ್ತೆಯಾ ಸ್ವಾಧ್ಯಾಯಸಂಯಮತಪೋದಾನಮಂ ॥
ನಿರವಧಿಯೊಳಂಜಿಡದೆ ಮಾಡುವೃತ್ತಮಮುಪ್ಪ ।
ಚರಿತದೊಳ್ನೆಗಳ್ವ ಶ್ರಾವಕನು ಮಧ್ಯಮಪಾತ್ರ- ।
ವರುಹನೇ ದೈವಮೆಂದೆಂಬ ಸದ್ದರ್ಶನಿಕನಾತಂ ಜಘನ್ಯಪಾತ್ರಂ ॥ ೧೩ ॥
ನಿರುತದಿಂದೀ ಮೂರುತೆರದ ಸತ್ಪಾತ್ರಕ್ಕೆ ।
ನಿರವದ್ಯಮಪ್ಪನ್ನಮಭಯಭೈಷಜ್ಯ ಬಂ- ।
ಧುರಶಾಸ್ತ್ರದಾನಮಂ ಮಾಡಲಾ ಸ್ವರ್ಗ್ಗಾಪವರ್ಗ್ಗಮಂ ಪಡೆಯಬಹುದು ॥
ವರಮಂತ್ರಿ ಕೇಳು ಮತ್ತೀ ದಾನಗಳೊಳು ಸುರು- ।
ಚಿರಮೆನಿಸುವನ್ನದಾನವೇ ಮುಖ್ಯಮಾದಾನದುರು- ।
ಮಹಿಮೆಯಂ ಪೇಳ್ವೆವು ಲಾಲಿಸೆನುತ ಬಳಿಕಿಂತೆಂದು ನುಡಿದರಾಗ ॥ ೧೪ ॥
ರಾಜಿಸುವ ವೇಣಾತಟಾಕವೆಸರಂಬಡೆದ ।
ರಾಜಧಾನಿಯೊಳಗಧಿರಾಜರಾಜಪ್ರಭಂ ।
ರಾಜಪ್ರಭಾನಾಮದಂಗನಾಮಣಿಗೂಡಿಯರಸುಗೆಯ್ಯುತ್ತುಮಿರ್ದ್ದ ॥
ಭಾಜನಂ ಮಾಡಿ ಸತ್ಕೀರ್ತಿಗೆಯಜಾಂಡವಂ ।
ತೇಜಾಧಿಕನುಮಾಗಿ ಬ್ರಾಹ್ಮಣರ ಪೂಜೆಯುಮ- ।
ನೋಜೆಯಿಂ ಮಾಡುತ್ತಮಿರ್ದ್ದೊಂದು ದಿವಸದೊಳಗಿಂತೆಂದು ಚಿಂತಿಸಿದನು ॥ ೧೫ ॥

ಶತಯಾಗಮಂ ಮಾಡಿದವರಿಂದ್ರಪದವನು- ।
ನ್ನತಮಾಗಿ ಪಡೆವರೆಂಬಾ ಶಾಸ್ತ್ರವಚನಮಿೊ ।
ಕ್ಷಿತಿಯರಿಕೆಯೊಳಗುಂಟು ನಾನದಂ ತಿಳಿದಿರ್ದ್ದ ತದ್ವಿಧಿಯನಿರದೆ ಮಾಡಿ ॥
ಅತಿಸೌಖ್ಯಮಿೊ ಇಂದ್ರಪದಮಂ ಹಡೆವುದನುಳಿದು ।
ಮತಿವಿಕಳನಾಗಿರ್ದ್ದನಿಂದುವರಮೆನುತ ಭೂ- ।
ಪತಿ ನೆನೆದು ಶಾಸ್ತ್ರವಿದರಂ ಕರಸಿ ಬಳಿಕವರೊಳಿಂತೆಂದು ನುಡಿದನಾಗ ॥ ೧೬ ॥
ಯಾಗಮಂ ಮಾಡಲಿಂದ್ರತ್ವವಹುದೆಯೆನ- ।
ಲ್ಭೂಗಧಿಪ ಕೇಳೊಳ್ಳಿತಪ್ಪ ಕಾರ್ಯವ ನಾನು- ।
ರಾಗದಿಂದೆಣಿಸಿದೆಯಲಾ ಅದರ ಫಲದಿ ಹರಿದಾಳಿಯೊಳ್ಸುರಪುರವನು ॥
ಬೇಗದಿಂ ದೂಳಿಗೊಂಟಿಯುಗೊಂಡು ಸುರಪತಿಯ- ।
ನಾಗ ಬಾಳ್ವಲೆವಿಡಿದು ಬಳಿಕಿಂದ್ರಪುರಕೆಯರ- ।
ಸಾಗಿ ಶಚಿರಂಭೆಯೂರ್ವಶಿಯಾದಿಯಾದ ಸುದತಿಯರ ವರಿಯಿಸಲುಬಹುದು ॥ ೧೭ ॥
ಎಂಬ ನುಡಿಗೇಳಿ ಬೇಗದೊಳು ಸದ್ಬ್ರಾಹ್ಮಣಕ- ।
ದಂಬಮೆಲ್ಲಂ ಬರಲ್ಬೇಕೆನುತ ಡಂಗು- ।
ರಂಬೊಯಿಸಲಾ ಗೊಸಣೆಯಂ ಕೇಳಿಯತ್ಯಂತ ಹರ್ಷದಿಂದಾ ನಗರಿಗೆ ॥
ಅಂಬಿಕಾಪತಿಯು ಮತ್ಸರದಿ ದಕ್ಷಬ್ರಹ್ಮ- ।
ನೆಂಬವಂ ರಚಿಸುವಾ ಯಾಗಕ್ಕೆ ದೇವನಿಕು- ।
ರುಂಬಮೆಲ್ಲಂ ಬರ್ಪ್ಪ ತೆರದಿ ಪೃಥ್ವೀಸುರನಿಕಾಯಮೆಲ್ಲಂ ಒಂದುದು ॥ ೧೮ ॥
ವೇದವೇದಾಂಗಪಾರಗರ ಮೊತ್ತಂ ತತ್ವ- ।
ವಾದಿಗಳ ತಂಡ ದೀಕ್ಷಿತರ ಸಂದಣಿ ಮಾಯ- ।
ವಾದಿಗಳ ನೆರವಿ ಸನ್ಯಾಸಿಗಳ ಸಂಗಡಮುಪಾಧ್ಯಾಯರುಗಳ ಕೂಟಾ ॥
ವಾದಿಗಳ ತಂಡ ವಟುಜನದೊಗ್ಗು ಬಹುಶಾಸ್ತ್ರ- ।
ವೇದಿಗಳ ಜಂಗುಳಿ ಪುರಾಣಿಕರ ಗೊಂದಣಂ ।
ಮೇದಿನೀಪತಿ ಬೆಸಲೆಯಾದಂತೆ ನೆರೆಯೆ ಕಂಡತಿ ಮುದದಿ ಭೂಪಾಲನು ॥ ೧೯ ॥
ಎಲ್ಲಿನೋಡಿದೊಡಲ್ಲಿ ಪಾನೀಯಶಾಲೆ ಮ- ।
ತ್ತೆಲ್ಲಿನೋಡಿದೊಡಲ್ಲಿ ಭೂರಿಭೋಜನಶಾಲೆ ।
ಎಲ್ಲಿನೋಡಿದೊಡಲ್ಲಿ ಪಿರಿದು ಸೊಗಸಂಬಡೆದ ಮೃಷ್ಟಾನ್ನಭುಕ್ತಶಾಲೆ ॥
ಎಲ್ಲಿನೋಡಿದೊಡಮಿಚ್ಛಾಭೋಜನದ ಶಾಲೆ ।
ಎಲ್ಲಿನೋಡಿದೊಡಲ್ಲಿ ಬಹುದಾನಶಾಲೆ ಮ- ।
ತ್ತೆಲ್ಲಿನೋಡಿದೊಡಲ್ಲಿ ಯಾಗಶಾಲೆಗಳನನುಗೆಯ್ಸಿದಂ ಸಮ್ಮದದೊಳು ॥ ೨೦ ॥
ಇಂತು ನಾನಾಛತ್ರಸಾಲೆಗಳನನುಗೆಯ್ಸಿ ।
ಸಂತೋಷದಿಂದ ನೆರೆತಂದ ವಸುಧಾಸುರರ ।
ಸಂತಾನಕಿದಿರ್ವಂದು ಸಾಷ್ಟಾಂಗವೆರಗಿಯುಪರಿಡುವಕ್ಷತೆಯ ಪುಂಜಕೆ ॥

ಅಂತರಿಸದುತ್ತಮಾಂಗವನಿತ್ತು ಹರಕೆಗಳ- ।
ನಾಂತು ರಾಜಪ್ರಭಮಹೀಮಾನಿನೀನಾಥ- ।
ನಂತಿಂತುಟೆಂದೂಹಿಸಲ್ಬಾರದತಿಭಕ್ತಿಯಿಂದ ಸನ್ಮಾನಮಾಡಿ ॥ ೨೧ ॥
ಸಾನಂದಹೃದಯನಧ್ಯಕ್ಷದವರಂ ಕರಿಸಿ ।
ಈ ನೆರೆದ ಸದ್ಬ್ರಾಹ್ಮಣರ ತಂಡದಲ್ಲಿಯಿವ- ।
ರೇನನಿಚ್ಛೈಸಲಾ ಇಚ್ಛೆಯನಿನಿಸು ತಡಂ ಮಾಡದೇ ಸಲಿಸಿಯೆಂಬ ॥
ಆ ನುಡಿಯ ಕೇಳಿಯವರವರ್ಗೆ ತಕ್ಕಂದದಿಂ ।
ಸ್ನಾನಮಂ ಮಾಡಿಸಿ ಬಳಿಕ್ಕ ಭೋಜನಶಾಲೆ- ।
ಗಾನಂದದಿಂ ಬರಿಸಿ ಕುಳ್ಳಿರಿಸಲಾರೋಗಣೆಯ ಮಾಡುತಿರ್ದ್ದರಿಂತು ॥ ೨೨ ॥
ದೊನ್ನೆಗಳ ಹರಹಿ ಬಾಳೆಲೆಹಾಳೆಯುಂ ಹಾಕಿ ।
ಬಿನ್ನಣದಿ ಮಾಡಿದಾ ಚವುಕದೆಡೆಗಳ ಮುಂದೆ ।
ಜನ್ನಿವಾರಮಂ ಮೇಲೆತ್ತಿ ತಲೆಸುತ್ತುಮಂ ತೆಗೆದು ಸಡಿಲಿಸಿ ಧೋತ್ರಮಂ ॥
ಚೆನ್ನಾಗಿಯಾಪೋಷಣಮನೆತ್ತಿ ಕುಳ್ಳಿರ್ದ್ದು ।
ಭಿನ್ನರುಚಿಮಾಡಿ ಹರುಷದಿ ಗಡ್ಡಮೀಸೆಗಳು- ।
ಮಂ ನೀವಿಕೊಳುತ ತದ್ಭೋಜನಮನಿಂತು ಮಾಡುತ್ತಿರ್ದ್ದರಾ ಪಾರ್ವ್ವರು ॥ ೨೩ ॥
ಸಣ್ಣಕ್ಕಿಯೋಗರಂ ಹೆಸರತೊಯೆ ಹೊಚ್ಚಹೊಸ ।
ಬೆಣ್ಣೆಕಾಸಿದತುಪ್ಪ ಹಪ್ಪಳಂ ನಸುನಿಂಬೆ- ।
ವಣ್ಣಿಸಿಕ್ಕಿದ ಹಲವುಪರಿಯ ಹೋರಕಂ ಶಾಕಬಾಳು ಕಾವಳೆಯುಪಳಿದ್ಯ ॥
ಬಣ್ಣಿಸಿ ಸುಪಾಕಮಾಡಿದ ಪಿಟ್ಟು ಪಾಯಸಂ ।
ತಣ್ಣನೆಯ ಕಳಲು ಹಸಿಯಲ್ಲಮಂ ಬಡ್ಡಿಸ- ।
ಲ್ವಣ್ಣೆಪಣ್ಣೆಯೊಳು ಕುಳ್ಳಿರ್ದ್ದು ಪಂಕ್ತಿಯ ಕೊಳ್ಳುತ್ತಿರ್ದ್ದದಾ ಭೂಸುರಾಳಿ ॥ ೨೪ ॥
ವಡೆಯೊಟ್ಟಿಲುಂಡಲಿಗೆಗಳರಾಶಿ ಹೂರಿಗೆಗ- ।
ಳಿಡುಗುಡ್ಡೆ ಸಣ್ಣಸೇವಗೆಯ ಮೆದೆ ಯೆರೆಯಪ್ಪ ।
ದಡಕಿಲಿಡ್ಡಲಿಗೆಗಳ ಬೋನ ದೋಸೆಯಲಗ್ಗೆ ಬೆಲ್ಲಗಾರಿಗೆಯ ಬಣಬೆ ॥
ತಡೆತಡೆಯೆ ಪಾಯಸದ ಕಟ್ಟೆಯನೊಡೆವ ತುಪ್ಪ ।
ಪೆಡೆಮಾಡಿದೆಡೆಯ ಮುಂದೊಪ್ಪದಿಂ ಕುಳ್ಳಿರ್ದ್ದು ।
ಸಡಗರಂಗೊಂಡು ಗಂಟಲ್ಮುಟ್ಟುವಲ್ಲಿ ಪರಿಯಂತಪುಣುತಿರ್ದ್ದರಾಗ ॥ ೨೫ ॥
ಓಗರವ ತಾ ತೋಯೆಯನಿಕ್ಕು ಹಸನಾಯ್ತುಮೇ ।
ಲೋಗರವ ಬಡಿಸು ದೊನ್ನೆಗಳು ಹಿಡಿವಂತೆ ಪುಂ- ।
ಟಾಗಿ ಹೆರೆದುಪ್ಪವೆರೆಯಾ ಪಳಿದ್ಯಮನಟ್ಟು ಕಲಸುವೋಗರವತೋರು ॥
ಬೇಗದಿಂದೆಡೆಮಾಡಿದಿಡ್ಡಲಿಗೆ ದೋಸೆಗಳ ।
ಮೇಗೆ ಸಕ್ಕರೆ ಬಟ್ಟವಾಲಹೊಯ್ಯೆನುತುಮಾ- ।
ರೋಗಣೆಯನಾ ಹೊಟ್ಟೆಯೊಡೆವ ಮರ್ಯಾದೆಯೊಳಗುಂಡು ತೇಂಕುತ್ತಿರ್ದ್ದರು ॥ ೨೬ ॥

ಪಾಯಸದ ಪರಿಮಳಂ ನೋಡಿ ಪಂಡಿತರೆ ಸವಿ- ।
ಯಾಯಿತೇ ಆಯ್ತುಪಾಧ್ಯಾಯರೇ ಕರಜಿಗೆಯ ।
ಕಾಯಿ ದೋಸೆಗಳ ಹಸನಂ ಪುರೋಹಿತರೆ ಚೆನ್ನಾಗಿ ಸವಿಸವಿದು ನೋಡಿ ॥
ಈ ಯೆಣ್ಣೆಹೂರಗೆಯ ಮೃದುತರಕೆ ಸರಿಯುಂಟೆ ।
ಜೋಯಿಸರೆ ಕೇಳಿ ಸಕ್ಕರೆಬುರುಡೆಗಳ್ನಮ್ಮ ।
ಬಾಯಬರನಂ ಬಿಡಿಸುತಿವೆ ದೀಕ್ಷಿತರೆಯೆಂದು ಕೊಂಡಾಡಿ ಉಣುತಿರ್ದರು ॥ ೨೭ ॥
ಸಜ್ಜಿಗೆಯ ಪಾಯಸವ ಸುರಿದು ಕೆಣಿಕದಿ ಸಮೆದ ।
ಕಜ್ಜಾಯಮಂ ಮೆದ್ದು ಕೆಚರಿಬದನೆಯಕಾಯ ।
ಬಜ್ಜಿಗಳ ಲೇಹ್ಯಮಂ ಮಾಡಿ ಮೂಲಂಗಿಮಾಗುಳಿಯೆಳೆಯ ಕಾರಗೆಣಸು ॥
ಕಜ್ಜರಿಯ ಸಣ್ಣನಂ ಸವಿದು ಪನಸಿಮ್ಮಾವು ।
ಕಜ್ಜುರದ ಪಣ್ಗಳ ರಸಾಯನಮನೀಂಟಿತೆಳು- ।
ಮಜ್ಜಿಗೆಯ ಕೊಂಡು ನೀರ್ಗುಡಿದು ಹೊಟ್ಟೆಯ ತಡಹುತೆಳ್ದು ಕಯ್ದೊಳೆದರಾಗ ॥ ೨೮ ॥
ಈಪರಿಯೊಳಾರೋಗಣೆಯನು ಮಾಡಿಸುತ ಮ- ।
ತ್ತಾ ಪೃಥ್ವಿಪೊಗಳ್ವಂತೆ ಬಹುವಿಧದ ದಾನಮಂ ।
ಭೂಪಾಲಕಂ ಮಾಡಿ ಮುಂಪೇಳ್ದ ಯಾಗಮಂ ವಿರಚಿಸುವ ಕಾಲದಲ್ಲಿ ॥
ಆ ಪಟ್ಟಣದೊಳು ಬಳಿಕಾ ಯಜ್ಞಸಾಲೆಯಸ- ।
ಮೀಪದೊಳಗತಿದರಿದ್ರಂ ವಿಶ್ವಭೂತಿಯೆಂ- ।
ಬಾ ಪಾರ್ವನೊರ್ವ ಮನೆಯಂ ಕಟ್ಟಿ ಯಮನಿಯಮಸಂಯಮೋಪೇತನಾಗಿ ॥ ೨೯ ॥
ಒಂದುದಿನ ಪೊಡಲುಪಿಡಿವಂತೆ ಬಾಯ್ಸವಿಯಾಗು- ।
ವಂದದಿಂ ಕನಸುಮನಸಿನೊಳುಂಬುದಂ ಕಾಣ- ।
ನೊಂದುದಿನಮಾಗಿಯುಂ ಮೆಯ್ತುಂಬ ಹೊದೆಪುಮಂ ಹೊದೆವುದಂ ಕಂಡರಿಯನು ॥
ಕುಂದೇಂದುವಂತೆ ಕೃಶಮಂ ತನುವಿನೊಳಗಾಂತು ।
ಹಿಂದಣಘವಶದಿನೋವಿದ ದರಿದ್ರದೊಳಾದ ।
ದಂದುಗವೆ ಒಡಲಾಗಿಯುಂ ತನ್ನ ಸತ್ಕರ್ಮದೊಳಗಾಚರಿಸುತಿರ್ದ್ದನು ॥ ೩೦ ॥
ಈತೆರದಿನಾಚರಿಸುತಿರ್ದ್ದೊಂದುದಿನ ವಿಶ್ವ- ।
ಭೂತಿಪಾರ್ವಂ ಪೋಗಿ ಮುಷ್ಟಿಯಂ ಬೇಡಿತಂ- ।
ದಾ ತಂಡುಲವನು ನಿಚ್ಚಳಿಸಲ್ವಡೆಯದೆ ಜಲಮಿಶ್ರದಿಂ ಪಿಟ್ಟುಗುಟ್ಟಿ ॥
ಪ್ರೀತಿಯಿಂದಗ್ನಿಹೋತ್ರಕ್ಕೆಯತಿಥಿಗೆ ತನಗ- ।
ಮಾ ತನ್ನ ಸತಿಗವೊಂದೊಂದಾಗಿ ಪಿಂಡವ ವಿ- ।
ನೂತಗುಣಿ ನಾಲ್ಕನನುಗೆಯ್ದು ಭೋಜನದ ಪೊತ್ತಂ ಪಾರುತಿರಲಲ್ಲಿಗೆ ॥ ೩೧ ॥
ಅನಶನಮನೊಂದು ಮಾಸಂ ಮಾಡಿ ಬಳಿಕ ಜನ- ।
ವಿನೂತ ಪಿಹಿತಾಸ್ರವಾಖ್ಯ ಪ್ರತೀಂದ್ರಂ ನಗರ ।
ಜನಮೆಲ್ಲ ಕಂಡು ಕೆಯ್ಮುಗಿದು ಕೊಂಡಾಡುತ್ತಮಿರಲು ನಡೆತರೆ ಚರಿಗೆಗೆ ॥

ಅನುರಾಗವಂತರಂಗದೊಳಂಕುರಿಸೆ ಭಕ್ತಿ ।
ಕೊನೆವರಿಯೆ ಚಿತ್ತದೊಳಂದು ಪದಪಂಕಜಕೆ ।
ವಿನಯವಿನಮಿತನಾಗಿ ನಿಲಿಸಿ ಮನೆಗೊಡಗೊಂಡು ಪೋಗಿ ಸತ್ಕರ್ಮದಿಂದ ॥ ೩೨ ॥
ವೀತರಾಗಾಸನಮನಿತ್ತು ವಿಧಿಪೂರ್ವಕಂ ।
ಜಾತರೂಪನ ಜಲರುಹೋಪಮಾಂಘ್ರಿಯನು ಮನ- ।
ಪ್ರೀತದರ್ಚನೆಗೆಯ್ದು ಸಿದ್ಧಭಕ್ತಿಯ ಹೇಳಿ ತತ್ಪಾಣಿಪಾತ್ರೆಯಲ್ಲಿ ॥
ಪ್ರೀತಿಯಿಂದಾ ಮೂರುಪಿಂಡವಿತ್ತಾ ವಿಶ್ವ- ।
ಭೂತಿ ತನ್ನಂಗನೆಯ ಮೊಗನೋಡಲಾ ಜನವಿ- ।
ನೂತೆ ತನಗೆಂದಿರ್ದ ಪಿಂಡಮಂ ಕೊಡಲು ಕೊಂಡಕ್ಷಯಂ ದಾನಮೆನಲು ॥ ೩೩ ॥
ಮರಕತದ ಮಳೆಗರೆಯೆ ಮಾಣಿಕದ ಹನಿಹನಿಯೆ ।
ಸುರಿಯೆ ಕುಲಿಶದ ಸೋನೆ ಪುಷ್ಯರಾಗದ ತಂದ- ।
ಲಿರದೆ ಗೋಮೇದಿಕದ ಕುಟ್ಟುವನಿ ಬೀಳೆ ಹರಿನೀಲರತ್ನಂಗಳಾ ॥
ಸರಿಕುಟ್ಟೆ ವೈಡೂರ್ಯ್ಯಮಣಿಯ ಬೆಳ್ಸರಿ ಹುಯ್ಯೆ ।
ವರಮೌಕ್ತಿಕಪ್ರತತಿಯಾಲಿಕಲ್ಗಳ್ ಸೂಸು- ।
ತಿರೆ ಹವಳದಿಂದ್ರಗೋಪಂ ಬಿಳ್ದುದಾ ವಿಶ್ವಭೂತಿಯಾಲಯದ ಮುಂದೆ ॥ ೩೪ ॥
ಈರತ್ನಮೊದಲಾಗಿಯಾಶ್ಚರ್ಯ್ಯಪಂಚಕಂ ।
ಮೂರುತಪಥದಿನಾಗಲಾ ಪಾರ್ವ್ವನಂಗನೆ ಮ- ।
ನೋರಾಗದಿಂದೆತ್ತಿಕೊಂಡೊಯ್ವುದಂ ಕಂಡು ಯಜ್ಞಮಂಟಪದೊಳಿರ್ದ್ದ ॥
ಧಾರಿಣೀಸುರರೆಲ್ಲ ನೆರೆದು ರಾಜಪ್ರಭ ಮ- ।
ಹಾರಾಜನೆಸಗುವ ದಾನಫಲಮಿಾಗ ಕ- ।
ಯ್ಯಾರೆಕಾಣಿಸಿದ ಚಿತ್ರಮ ನೋಡಿಮೆಂದು ಮತ್ತಿಂತೆಂದುಲಿಯುತಿರ್ದ್ದರು ॥ ೩೫ ॥
ಕಂಡಿರೇ ದೀಕ್ಷಿತರೆ ವಿಶ್ವಭೂತಿಯದೊಂದು ।
ಲಂಡತನವನು ತನ್ನ ಮನೆಗೊರ್ವನಾ ಬೋಳ ।
ಮುಂಡೆಯ ಸವಣನೀಗ ದಡದಡಿಸುತೆಯ್ತಂದು ಬರಿಯಕ್ಕಿಯಿಂ ಕಲಸಿದಾ ॥
ಪಿಂಡಗಳನುಂಡ ಕಂಡಾ ಅದರಿನಾ ನಭೋ - ।
ಮಂಡಲದಿನಮರರೊಪ್ಪುವ ರತ್ನವೃಷ್ಟಿಯಂ ।
ತಂಡತಂಡದಿ ಸುರಿದರೆಂದರಸಗಿನಿಸಂಜದೇ ಕೊಂಡು ಹೋದ ಪರಿಯಾ ॥ ೩೬ ॥
ಎಂದು ಕೈಹೊಯ್ದುಟ್ಟಹಾಸದಿಂದರಮನೆಗೆ ।
ಬಂದು ತದ್ವಾರ್ತೆಯಂ ಪೇಳಲಾ ಭೂಸುರ- ।
ರ್ಮಂದೇತರ ಕ್ರೋಧದಿಂದ ರಾಜಪ್ರಭಂ ಕರಸಲಾ ವಿಶ್ವಭೂತಿ ॥
ಚಂದಚಂದದಿನೊಪ್ಪುವಾ ರತ್ನರಾಶಿಯಂ ।
ತಂದು ಮುಂದಿರಿಸಲವು ತತ್ಸಭೆಕರಂ ಬೆದರು- ।
ವಂದದಿಂ ತನಿಗೆಂಡವಾದುವಾ ವಿಸ್ಮಯವನೇನೆಂದು ಬಣ್ಣಿಸುವೆನು ॥ ೩೭ ॥

ಸಂದಣಿಸಿ ನೋಡುವಾ ಸಭೆಯುಮಾ ನೃಪತಿಯುಂ ।
ಪಿಂದೆಮಾಡಿದ ಕರ್ಮವಶದಿಂದ ಹೊಕ್ಕ ಭವ- ।
ವೆಂದೆಂಬ ವನಮನಳುರ್ವಗ್ನಿ ಮತ್ತವರರಿವ ಪರಿಪಾಕಮಂ ಮಾಡಲು ॥
ತಂದಿಟ್ಟ ಕಿಚ್ಚು ಮತ್ತವರ ಮನದಾವರಣ- ।
ದೊಂದು ದೋಷಾಂಧಕಾರವನು ಹರಯಿಸಲು ಬೇ- ।
ಕೆಂದು ಸುರುಹಿದ ಶಿಖಿಯು ಮಾಳ್ಕೆಯಿಂದೊಪ್ಪಿತಾ ರತ್ನದಿಂದಾದ ಕಿಚ್ಚು ॥ ೩೮ ॥
ಅಂತದಂ ಕಂಡು ತತ್ಸಭೆಯೊಳಿರ್ದವರರಸ- ।
ಗಿಂತೆಂದರೆಲೆ ನೃಪತಿಯೀ ವಿಶ್ವಭೂತಿ ನಿ- ।
ಶ್ಚಿಂತಮಾನಸನು ಮುನಿಗಾಹಾರದಾನಮಂ ಮಾಡಿದ ಮಾಹಾತ್ಮೆಯಿಂದ ॥
ಅಂತೊಪ್ಪುವಾ ರತ್ನಸಮಿತಿಯಿಲ್ಲಿಗೆ ತರ- ।
ಲ್ಕಿಂತುರಿವ ಕೆಂಡವಾಯ್ತೆನಲವಂ ಕುಡೆ ಮುನ್ನಿ- ।
ನಂತವನ ಸೋವಿಲೊಳು ದೇದೀಪ್ಯಮಾನಮಂ ಪಡೆದ ರತ್ನಗಳಾದುವು ॥ ೩೯ ॥
ಉತ್ತಮ ಹೃದಯವಿಶ್ವಭೂತಿ ರತ್ನತ್ರಯದ ।
ಬಿತ್ತಂ ಮನೋವಚನಕಾಯಶುದ್ಧಿಯೊಳಿರದೆ ।
ಬಿತ್ತಲವು ಬೆಳೆದು ಸತ್ಫಲವಾದುದೋ ಎಂಬ ತೆರದಿನಾ ರತ್ನಂಗಳಾ ॥
ಮೊತ್ತವಾತನ ಮಡಿಲೊಳೊಪ್ಪುತಿರೆ ಕಂಡು ಭೂ- ।
ಪೋತ್ತಂಸ ರಾಜಪ್ರಭಂ ಪಿರಿದು ವಿಸ್ಮಯಂ ।
ಬೆತ್ತು ಮಾಣಿಕ್ಯಮಯಮುಕುಟಮಂ ತೂಗಿ ಪಿರಿದುಂ ಪೊಗಳುತಿರ್ದನಾಗ ॥ ೪೦ ॥
ಈ ತೆರದ ಧರ್ಮದ ಮಹಾತ್ಮೆಯಂ ಕಂಡು ಸ- ।
ತ್ಪ್ರೀತಿಯಿಂ ಕರಕಮಲಯುಗವ ಮುಗಿದಾ ವಿಶ್ವ- ।
ಭೂತಿಗಿಂತೆಂದ ನೀನೀಗ ಮಾಡಿದ ದಾನಫಲದೊಳರ್ಧವನಿತ್ತೊಡೆ ॥
ಸಾತಿಶಯಮಪ್ಪೆನ್ನ ಯಜ್ಞಫಲದೊಳಗೆ ಮನ- ।
ವೋತರ್ಧಮಂ ನನ್ನ ರಾಜ್ಯದೊಳಗರ್ಧಮಂ ।
ಮಾತೇನೊ ಕೊಡುವೆನೆಂದೆಂಬ ನುಡಿಯಂ ಕೇಳಿಯುತ್ತರಂಗೊಟ್ಟನಿಂತು ॥ ೪೧ ॥
ಕಾಮಧೇನುವನು ಕಳ್ತೆಗೆ ಸಮಂಗೊಡುವ ಚಿಂ- ।
ತಾಮಣಿಯನಾ ಕಾಚಶಿಲೆಗೆ ಬೆಲೆಮಾಳ್ಪ ದಿ- ।
ವ್ಯಾಮೃತಮನಂಬುಕಣಕಿರದೆ ಮಾರುಂಗೊಡುವ ಕಡುಹೆಡ್ಡರಂತಲ್ಲವೇ ॥
ಶ್ರೀಮನ್ಮಹಾಮುಕ್ತಿಸುಖಸಂಪದವನು ಕೊಡು- ।
ವೀ ಮಹಾಸತ್ಪಾತ್ರದಾನದುತ್ತಮ ಫಲಕೆ ।
ಭೂಮಿಶ ಕೇಳಧಮವಸ್ತುವಂ ಕೊಂಬುದೇ ಎಂಬ ನುಡಿಯಂ ಕೇಳುತ ॥ ೪೨ ॥
ಆ ಸಂಯಮೀಂದ್ರಪಿಹಿತಾಶ್ರವರ ಬಳಿಗೆಯ್ದಿ ।
ವೋಸರಂ ಮಾಡದೇ ಸಾಷ್ಟಾಂಗವೆರಗಿ ಬಳಿ- ।
ಕಾ ಸರಸಿಜೋಪಮಕರಂಗಳಂ ಮುಗಿದೆಲೆ ಮುನಿಕುಲಾಂಬರಭಾನುವೇ ॥

ಭೂಸುರಂ ನಿಮಗಿತ್ತ ದಾನಫಲದೊಳ್ಸರಿಯು- ।
ನೇಸೇಸುಪರಿ ಬೇಡಿಬೇಡಿಕೊಂಡೊಡೆ ನನಗು- ।
ದಾಸೀನಮಂ ಮಾಡಿಕೊಂಡ ಕಾರಣಮನನುನಯದಿಂದ ನಿರವಿಸೆನಲು ॥ ೪೩ ॥
ಸದಮಲಜ್ಞಾನಿಯಿಂತೆಂದನಾ ನೃಪಗೆ ಭೂ- ।
ಸುದತೀಶ ಕೇಳ್ಧರ್ಮಮಂ ನಂಬಿ ನಡೆಯಿಸುವ ।
ಚದುರರ್ಗ್ಗೆ ದಾನಜಿನಪೂಜೆಶೀಲೋಪವಾಸಂಗಳೆಂದೆಂಬ ನಾಲ್ಕು ॥
ವಿದಿತವಿಧವೇ ಮುಖ್ಯಮಾನಾಲ್ಕರೊಳ್ಮೊತ್ತ- ।
ಮೊದಲಾವುದೆನೆ ದಾನಮಾದಾನಮೆಂದೆಂಬು- ।
ದದು ಭಾವಕರ್ಕ್ಕರಂ ಭಾವಿಸಿ ವಿಚಾರಿಸಲ್ನಾಲ್ಕು ವಿಧಮಾಗಿರ್ಪ್ಪುದು ॥ ೪೪ ॥
ಆ ನಾಲ್ಕುದಾನಂಗಳಾವುದೆಂದೊಡೆ ಮಹೀ- ।
ಮಾನಿನೀಪತಿ ಕೇಳು ಸತ್ಪಾತ್ರಕನುದಿನಂ ।
ಸಾನುರಾಗದೊಳೆಸಗುವನ್ನದಾನಂ ಪ್ರಸಿದ್ಧವನೆಪಡೆದಭಯದಾನಂ ॥
ಜ್ಞಾನಮಂ ನೆರೆಮಾಡಿಕೊಡುವ ಬಹುವಿಧ ಶಾಸ್ತ್ರ- ।
ದಾನಮೊದವಿದರೋಗಮಂ ಕೆಡಿಪ ಭೈಷಜ್ಯ- ।
ದಾನಮೆಂದದರ ಸಾಮರ್ಥ್ಯಮಂ ಪಿರಿದುಮನುರಾಗದಿಂ ಪೇಳ್ದರಿಂತು ॥ ೪೫ ॥
ಅರಸ ಕೇಳಾಹಾರಮಂ ಕೊಂಡೊಡಲ್ಲದೆ ।
ಸ್ಥಿರಮಾಗದೀ ದೇಹಮಿಾದೇಹದಿಂದಲ್ಲ- ।
ದುರುತರಜ್ಞಾನಮುದ್ಭವಿಸದಾ ಜ್ಞಾನದಿಂದಲ್ಲದೇ ಕರ್ಮ್ಮದೊದವು ॥
ಪರಿಹರಿಸದಾ ಕರ್ಮ್ಮನಾಶದಿಂದಲ್ಲದೆ ।
ಸುರುಚಿರಸ್ವರ್ಗ್ಗಾಪವರ್ಗ್ಗಪದಮಾಗದಿದು ।
ನಿರುತಮುದರಿಂದಮಾಹಾರಮೇ ದೇಹಿಗಳಿಗತಿ ಮುಖ್ಯಮಾಗಿರ್ಪುದು ॥ ೪೬ ॥
ಜೀವನಕ್ಕಾಶ್ರಯಂ ದೇಹಮಾ ದೇಹಕ್ಕೆ ।
ಜೀವದಾಶ್ರಯು ದೇಹಮಂ ತನ್ನದೆಂಬುದಾ ।
ಜೀವನಾಜೀವಮಂ ತನ್ನದೆಂದೇ ನಿಶ್ಚಯದಿನಿರ್ಪುದಾ ದೇಹವು ॥
ಜೀವಕ್ಕೆದೇಹವಳಿದಪುದೆಂಬ ಭೀತಿಯಾ ।
ಜೀವವಳಿದಪುದೆಂಬ ಭೀತಿಯಾ ದೇಹಕ್ಕೆ ।
ಯಾವರಿಸಿಕೊಂಡಿರ್ಪುದಾಗಿಯುಭಯುವೆ ಮುಖ್ಯಮಿಾ ದೇಹಕೀ ಜೀವಕೆ ॥ ೪೭ ॥
ಶ್ರುತದಿಂದ ಪಂಚಾಸ್ತಿಕಾಯುಷಡ್ದ್ರವ್ಯ ಸ- ।
ನ್ನುತ ಸಪ್ತತತ್ವ ನವವಿಧ ಪದಾರ್ಥಂಗಳಂ ।
ಮತಿಯಿತ್ತು ತಿಳಿಯೆ ರತ್ನತ್ರಯಂ ಸಂಜನಿಪುದಾ ರತ್ನಮೂರರಿಂದ ॥
ಹತಿಯಿಪುದು ಕರ್ಮ್ಮಮಾ ಕರ್ಮ್ಮದ ವಿನಾಶದಿಂ ।
ಸತತಸುಖಸಂಪದವನಿರದೆ ಕೊಡುವಾ ಮಹೋ- ।
ನ್ನತಮಪ್ಪ ಮೋಕ್ಷಮಹುದದುಕಾರಣಂ ಶಾಸ್ತ್ರಮುಖ್ಯಮಿಾ ದೇಹಿಗಳಿಗೆ ॥ ೪೮ ॥

ಔಷಧಮನೊಸೆದುಕೊಂಡೊಡೆ ಸಕಲರೋಗನಿ- ।
ಶ್ಶೇಷಮಪ್ಪುದದುಕಾರಣಂ ದೇಹಕ್ಕೆ ಪರಿ- ।
ತೋಷಮಾ ಪರಿತೋಷದಿಂದ ತಪಸಿಗೆ ಜಯಂ ತತ್ತಪೋವೃದ್ಧಿಯಿಂದ ॥
ದೋಷಂಗಳೆಲ್ಲ ಕೆಡುವುವು ಕೆಟ್ಟದೋಷದಿ ವಿ- ।
ಶೇಷವೆನಿಸುವ ಸೌಖ್ಯಮಂ ಕೊಡುವ ತ್ರೈಲೋಕ್ಯ- ।
ಭೂಷಣಮೆನಿಪ್ಪ ಪದವಹುದದರಿನೌಷಧವೆ ಮುಖ್ಯಮಿ ದೇಹಿಗಳಿಗೆ ॥ ೪೯ ॥
ಈತೆರದ ನಾಲ್ಕು ದಾನವನು ಸತ್ಪಾತ್ರಕ್ಕೆ ।
ದಾತೃಗಳ್ಕುಡಬೇಕು ಕೊಟ್ಟೊಡುತ್ತಮ ಫಲಂ ।
ಮಾತೇನೊ ತಪ್ಪದಪ್ಪುದು ಪಶುಗೆ ಪುಲ್ನೀರನೀಯೆ ಪಾಲ್ಗೊಡುವ ತೆರದಿ ॥
ಖ್ಯಾತಿಗೆ ನಿಮಿತ್ತಂ ಕುಪಾತ್ರಕ್ಕೆ ದಾನಮಂ ।
ಪ್ರೀತಿಯಿಂ ಮಾಡೆ ಫಣಿಪತಿಯ ಬಾಯೊಳ್ಪಾಲ- ।
ನೋತು ಕರೆದೊಡೆ ವಿಷಮನದು ಕೊಡುವ ತೆರನಪ್ಪುದದರ ಫಲವವನಿಪಾಲಾ ॥ ೫೦ ॥
ಸತ್ಪುರುಷರಾದವರ್ಸ್ವರ್ಗಕಲಕಲೆಯಲ್ಲಿ ಕಡು ।
ವಿತ್ಪನ್ನರಾದವರ್ಯ್ಯಾಯಾಚದಿಂದ ತ್ರಿಜ- ।
ಗತ್ಪತಿತ್ವಮನಿರದೆ ಕೊಡುವ ಕೇಡಿಲ್ಲದತಿಸುಖಮೀವ ಮುಕ್ತಿಯಲ್ಲಿ ॥
ಉತ್ಪತ್ತಿಯಂ ಮಾಡಿಕೊಂಬ ಸಾಮರ್ಥ್ಯದಾ ।
ಸತ್ಪಾತ್ರದಾನಫಲಮಂ ಕುಡುವರೇ ಭೂಜ- ।
ಗತ್ಪಾಲಕಾ ಎಡಹಿ ಕಂಡ ನಿಧಿಯಂ ಕಾಲೊಳೊದೆವ ಕಡುಹೆಡ್ಡರಂತೆ ॥ ೫೧ ॥
ಈ ತೆರನನುರೆ ತಿಳಿದ ಕಾರಣದಿನಾ ವಿಶ್ವ- ।
ಭೂತಿ ನಿನಗಾ ಫಲವನಿತ್ತುದಿಲ್ಲಾ ಎಂಬ ।
ಮಾತಿಂಗೆ ಮೆಚ್ಚಿ ಕೈಮುಗಿದೆಲೇ ಮುನಿನಾಥ ಸತ್ಪಾತ್ರದಾನಫಲವು ॥
ಭೂತಳದೊಳಿಂದು ಚೆನ್ನಾಗಿ ದೃಷ್ಟಸ್ಯಾನು ।
ಭೂತಮಾಯ್ತೆನಗದರಿನತಿ ನಂಜಿದೆಂ ಜನವಿ- ।
ನೂತ ನಿನ್ನೀ ದರ್ಶನದ ಸುವ್ರತಮನೆನಗೆ ಮನವೊಸೆದು ಕೊಡುವುದೆನಲು ॥ ೫೨ ॥
ಅತಿ ಕರುಣಹೃದಯನಾ ವ್ರತಿಕುಲಲಲಾಮನಾ ।
ವ್ರತಮನೊಸೆದೀಯೆ ಕೈಕೊಂಡು ರಾಜಪ್ರಭಂ ।
ಕ್ಷಿತಿಪೊಗಳೆ ನಡಸೆ ಕೆಲ ದಿವಸಮುರಸುಂಗೆಯ್ದು ಕಡೆಯಲ್ಲಿ ದೀಕ್ಷೆಗೊಂಡು ॥
ಹತಕರ್ಮ್ಮನಿಯಾಗಿ ಲೋಕೋತ್ತಮಮೆನಿಪ್ಪ ಸ- ।
ನ್ನುತಿಕೆವಡೆದುದ್ಧತ ಪದವ ಪಡೆದನೆನೆ ಕೇಳಿ ।
ಮತಿವಂತ ಸೋಮಶರ್ಮ್ಮಂ ತತ್ಸಮಾಧಿಗುಪ್ತರ್ಗ್ಗೆ ಕರಯುಗವ ಮುಗಿದು ॥ ೫೩ ॥
ಮುನಿಕುಲಲಲಾಮಕೇಳ್ನಿನ್ನ ಪದವೇ ಶರಣು ।
ನನಗದರಿನೊಳ್ಳಿತಪ್ಪೀ ಜೈನಧರ್ಮ್ಮಮಂ ।
ಮನವೊಸೆದು ಪಾಲಿಸುವುದೆನಲವನ ವಿಶ್ವಾಸಮಂ ಕಂಡು ಹರ್ಷದಿಂದ ॥

ಜನವಿನುತಮಪ್ಪ ಸುವ್ರತಮುನಿರದೀಯಲದ- ।
ನನುಕರಿಸಿ ಬಳಿಕ ಸಾನೀ ಜನ್ಮವುಳ್ಳನ್ನ ।
ಕನಸುಮನಸಿನೊಳಿನಿಸು ಹಿಂಸೆಯಂ ಮಾಳ್ಪುದಿಲ್ಲೆಂದು ಜಿನ್ನಪವ ಮಾಡಿ ॥ ೫೪ ॥
ಲೋಹದಿಂ ಸಮೆದ ಕೈದಂ ಹಿಡಿವುದಿಲ್ಲವಿೂ ।
ದೇಹಮುಳ್ಳಲ್ಲಿ ಪರಿಯಂತಮೆಂದಾ ವ್ರತಮಂ- ।
ನಾಹೃದಯಶುದ್ಧಿಯೊಳು ಕೈಕೊಂಡು ತನ್ನಸಿಯು ಬೀಳ್ಕೊಟ್ಟು ವ್ರತಿಕನಾಗಿ ॥
ಲೋಹದಸಿಯಂತೆ ಕಾಷ್ಠದ ಕೈದಿಗೊಂದೊರೆಯು ।
ಮೋಹರಿಸಿ ಹಿಡಿದು ಭೂಭುಜನ ಸೇವೆಯೊಳತಿ ।
ಗ್ರಾಹಕಂ ಸೋಮಶರ್ಮ್ಮಪ್ರಧಾನಂ ಜಗತ್ಪ್ರಖ್ಯಾತನಾಗಿರ್ದ್ದನು ॥ ೫೫ ॥
ಅಂತದಂ ಕಂಡು ಕೊಂಡೆಯರಿಳಾಕಾಂತನೊಳ- ।
ಗಿಂತೆಂದರೆಲೆ ನೃಪತಿ ಕಾಷ್ಠದಿಂ ಸಮೆದಸಿಯು ।
ಸಂತತಂ ಪಿಡಿದಿರ್ಪ್ಪವಂಗೆ ಸೇನಾಧಿಪತ್ಯವನೀವುದೊಳ್ಳಿತಾಯ್ತು ॥
ಎಂತು ಜಯಿಸುವೆ ವೈರಿಗಳನೆಂಬ ನುಡಿಗೇಳಿ ।
ಯಿಂತಿದಂ ನೋಳ್ಪೆನೆಂದೊಂದು ದಿನದಲ್ಲಿ ನೃಪ- ।
ಸಂತತಿಯು ಮಧ್ಯದೊಳ್ಸರ್ವ್ವಾವಸರಮೆಂಬ ಮಿಸುಗುವೋಲಗದೊಳಿರಲು ॥ ೫೬ ॥
ಕೆಲದಲ್ಲಿ ಕುಳ್ಳಿರ್ದ್ದ ಸೋಮಶರ್ಮನ ತೊಡೆಯೊ- ।
ಳಲೆವ ಕಾಷ್ಠದ ಖಡ್ಗಮಂ ಕಂಡು ತದ್ಧರಾ ।
ಲಲನೇಶನನುಮತದಿನೊರ್ವ್ವ ನೃಪಸುತನದಂ ನೋಡಬೇಕೆಂದು ಬೇಡೆ ॥
ಸಲೆ ಬೆದರಿ ಪಿಸುಣರಿಂದಿಂತಾಯಿತೆಂದು ನಿ- ।
ಷ್ಕಲಹೃದಯನೀ ಉಬ್ಬಸಂ ನನ್ನ ಮನದಲ್ಲಿ ।
ನೆಲಸಿದರ್ಹದ್ಭಕ್ತಿಯುಂಟಾದೊಡನಿಲನಂ ಕಂಡ ಸೊಡರಂತೆ ಕೆಡವಿ ॥ ೫೭ ॥
ಇನ್ನೆನಗೆ ಬಂದೀ ಮಹೋಪಸರ್ಗ್ಗಂ ಪಿಂಗು- ।
ವನ್ನೆವರ ಸನ್ಯಸನಮಿಂತಿದಂ ಕಳೆಯಲ- ।
ತ್ಯನ್ನತಿಕೆವಡೆದ ತಪದೆಸಕಮೇ ಶರಣೆಂದು ಮಿಗೆ ಭಾವಿಸುತ ಮನದೊಳು ॥
ಚೆನ್ನಾಗಿಯಪರಾಜಿತೋಲ್ಲಸಿತಮಂತ್ರಮಂ ।
ತಾಂ ನೆನೆಯುತುತ್ತಮಗುಣಾಬ್ಧಿಚಂದ್ರಂ ಮಂತ್ರಿ ।
ತನ್ನ ಕಾಷ್ಠದ ಖಡ್ಗಮಂ ಕೋಶದಿಂದುಚ್ಚ್ಗಯುವನ ಕೆಯ್ಯೊಳಗೆ ಕೊಡಲು ॥ ೫೮ ॥
ಪಿಸುಣರಸುವಂ ಪೀರ್ವ್ವೆನೆಂದು ಹೆಮ್ಮಾರಿ ಮಾ- ।
ಮಸಕದಿಂ ನೀಡಿದಾ ನಾಲಿಗೆಯೊ ಕಡೆಗಾಲ- ।
ದಸಿತಾಭ್ರದಿಂದ ಪೊರಮಟ್ಟ ಕುಡುಮಿಂಚೊ ಮುಸುಕಿದ ತನ್ನ ಮೆಯ್ಯುಹೆರೆಯಾ ॥
ಬಿಸುಟು ಥಳಥಳಿಪ ನಾಗರೊ ಎಂಬ ಮಾಳ್ಕೆಯಿಂ ।
ಮಿಸುಗುವೊರೆಯಿಂ ಸುಸುಳ್ದು ಬಂದವಂ ಕೊಟ್ಟ ಕೂ- ।
ರಸಿಯೊಪ್ಪಿತಾ ನೆರೆದ ಸಭೆಯೆಲ್ಲ ವಿಸ್ಮಯಂಬಟ್ಟು ನಡೆನೋಡುತಿರಲು ॥ ೫೯ ॥

ಮಾಸಂಕದಿಂದ ಮಹಿಮರ ಮೇಲೆ ಕೊಂಡೆ ಯಮ- ।
ನೋಸರಿಸದೇ ನುಡಿಯಬಹುದೆ ಎಂದರಸನಾ ।
ದೂಸಕರ ಬರಿಸಿಯಿ ಹುಸಿದ ಸಾಲಿಗೆಗಳಂ ಕುಯ್ದಿಕ್ಕಿಮೆಂದು ನುಡಿವ ॥
ಆ ಸಮಯದಲ್ಲಿ ಕರಕಮಲಯುಗಲವನು ಮುಗಿ- ।
ದಾ ಸೋಮಶರ್ಮನಿದು ಹುಸಿಯಲ್ಲ ನೀಮಿವರ ।
ಘಾಸಿಮಾಡಿಸಬೇಡವೆನುತ ಬಳಿಕಿಂತೆಂದು ಜಿನ್ನಪಂಗೆಯ್ದನಾಗ ॥ ೭೦ ॥
ಗುರುಸಾಕ್ಷಿಯಾಗಿ ನಾನೆನ್ನ ಜನ್ಮಾಂತರಂ ।
ನಿರುತದಿ ಮನೋವಚನಕಾಯಶುದ್ಧಿಯೊಳು ನಿ- ।
ಷ್ಠುರಮಪ್ಪ ಲೋಹದಸಿಯಂ ಪಿಡಿವುದಿಲ್ಲೆಂದು ಸುಲಲಿತವ್ರತಮನೊಸೆದು ॥
ಧರಿಸಿದೆನು ಇವರುಕ್ತಿ ಹುಸಿಯಲ್ಲವೆನ್ನ ಬಂ- ।
ಧುರಮಪ್ಪ ಸುವ್ರತದ ಮಹಿಮೆಯಿಂದೀ ಮರದ ।
ಕರವಾಳು ತೀಕ್ಷ್ಣತರವಾರಿಯಾಗ್ರ್ತೆಂದದರ ನಿಜರೂಪುದೋರಿಸಿದನು ॥ ೭೧ ॥
ಅದನು ಕಂಡಾ ನೆರದ ಸಭೆಯುಕ್ಕಜಂಬಡುವ ।
ಪದದಲ್ಲಿಯಾಶ್ಚರ್ಯಪಂಚಕಂ ಸಗ್ಗಿಗರಿ- ।
ನೊದವೆ ತದ್ಭೂವರನುಮಾಜನಮುಮಾ ಸೋಮಶರ್ಮನಂ ನೆರೆ ಪೂಜಿಸಿ ॥
ಸದಮಲಮೆನಿಪ್ಪ ಸದ್ಧರ್ಮಮೇ ಲೋಕಕ್ಕೆ ।
ಚದುರವ್ವಿಚಾರಿಸಿದೊಡಗ್ಗಳಮೆನುತ್ತ ಸಂ- ।
ಮದದಿನಜಿತಂಜಯಮಹೀಪಾಲ ವೈರಾಗ್ಯವಿದನಾಗಿಯುರುಭರದೊಳು ॥ ೭೨ ॥
ಪಟ್ಟದರಸಿಯ ಚೊಚ್ಚಿಲಣುಗಿನ ಕುಮಾರಕಂ ।
ದಿಟ್ಟ ಶತ್ರುಂಜಯಗೆ ರಾಜ್ಯಭಾರಮನಿತ್ತು ।
ಕಟ್ಟರಸುಗಳ್ಪಲಂಬರು ಸೋಮಶರ್ಮನುಂ ಬರಲಾ ಸಮಾಧಿಗುಪ್ತ ॥
ಭಟ್ಟಾರಕರ ಕೆಯ್ಯ ದೀಕ್ಷೆಯಂ ಧರಿಸಲಾ ।
ಪಟ್ಟಣದೊಳರ್ದ್ಧವಶ್ರಾವಕವ್ರತವ ಮನ- ।
ಮುಟ್ಟಿಕೊಂಡರ್ಕೆಲರ್ಭದ್ರಪರಿಣಾಮದೊಳಗೊಲಿದೊಂದಿ ಸುಖಿಮಿರ್ದರು ॥ ೭೩ ॥
ಆ ಮಹಿಪನರಸಿ ಸುಪ್ರಭೆ ಮಂತ್ರಿಕುಲತಿಲಕ ।
ಸೋಮಶರ್ಮನ ಸುದತಿ ಸೋಮೆಯುಂ ಮತ್ತೆ ಕೆಲ ।
ಭಾಮಿನಿಯರೊಡವರಲಭಯಮತಿಗಳೆಂಬಜ್ಜಿಕೆಯರಿಂದ ದೀಕ್ಷೆಗೊಳಲು ॥
ಆ ಮಹಾಶ್ರಾವಕವ್ರತಮಂ ಕೆಲ ಸುದತಿಯ- ।
ರ್ಪ್ರೇಮದಿಂ ಧರಿಸಿದರ್ಕೆಲರಂತದಕ್ಕೆ ಪರಿ- ।
ಣಾಮಿಸಿದರದರಿಂಡಮೆನಗೆ ರತ್ನತ್ರಯಂ ಸಂಜಾತಮಾದುದೆಂದು ॥ ೭೪ ॥
ಎಂದು ವಿಷ್ಣುಶ್ರೀ ನುಡಿದ ನುಡಿಗೆ ತದ್ವೈಶ್ಯ- ।
ವೃಂದಾರಕಂ ಮತ್ತಮಾ ಸತಿಯರರುವರುಂ ।
ಮುಂದೇತರಪ್ರಮೋದದಿನೊಡಂಬಟ್ಟೆವಾವೆಂದೆಂಬ ನುಡಿಯ ಕೇಳ್ ॥

ಮಂದಹಾಸದೊಳಿಂತಿದಪ್ರಮಾಣಂ ಮನದೊ- ।
ಳೊಂದಿನಿಸು ನನಗೆ ನಂಬುಗೆಯಾಗದೆಂದುಸಿರ್ವ ।
ಕುಂದಲತೆ ನುಡಿದ ನುಡಿಯಂ ಕೇಳಿಯಾ ನೃಪನುಮಾ ಸಚಿವರಿಂತೆಂದರೂ ॥ ೬೫ ॥
ಪ್ರತ್ಯಕ್ಷಮಾಗಿ ಕಂಡುದನುಸಿರ್ವ ಮಾತುಮಂ ।
ತಥ್ಯಮಲ್ಲೆಂದು ಬಂದುದನು ಬಾಯ್ಗುರೆವೀಯ ।
ಘಾತ್ಯೆಯಂ ಬೆಳಗಾಗಲೊಡನೆ ಹಿಡಿತರಿಸಿ ಊರೆಲ್ಲರುಂ ನೋಡುವಂತೆ ॥
ಅತ್ಯಂತ ಬಾಧೆಯಂ ಮಾಡಿಸುವ ಕೃತ್ಯಮೇ ।
ಕೃತ್ಯಮಲ್ಲದೆ ಮತ್ತೆ ಪೆರತಿಲ್ಲವೆಂದು ಸಲೆ ।
ಸತ್ಯಮಂ ಚಿಂತಿಸುತ್ತಿರ್ಪ್ಪಗಳಾ ಚೋರನಿಂತೆಂದು ಭಾವಿಸಿದನು ॥ ೬೬ ॥
ಚಂದನವ ಬಿಟ್ಟು ದುರ್ಗಂಧಕ್ಕೆ ನಡೆವ ನೊಣ- ।
ದಂದದಿಂದೊಳ್ಳಿತಪ್ಪಾ ಕಜ್ಜದೊಳ್ಮನಸ ।
ನೊಂದಿಸದೆ ನೀಚವೃತ್ತಿಗೆ ಮನಂಗೊಡುವುದಿದು ಪಾಪಿಷ್ಠ ಜನಕೆ ಸಹಜ ॥
ಎಂದೆನುತ್ತಿರಲತ್ತಲಾ ಸುಗುಣಮಣಿ ಮನುಜ- ।
ಮಂದಾರನಿಭ್ಯಕುಲತಿಲಕನರ್ಹದ್ದಾಸ- ।
ನಿಂದುನಿಭಕಾಂತಿಯುತನೊಪ್ಪಿದಂ ಜಿನಸಮಯವಾರ್ಧಿವರ್ಧನಚಂದ್ರನು ॥ ೬೭ ॥
ಇದು ವಿಬುಧಜನವಿನುತಮಿದು ವಿಬುಧಜನವಿನತ- ।
ಮಿದು ವಿದಿತಜಿನಸಮಯಶರಧಿಸಂಪೂರ್ಣೇಂದು ।
ಸದಮಲಚರಿತ್ರಚಂಗಾಳ್ವಭೂವರನ ಸಚಿವಾನ್ವಯಾಂಬರಹಂಸನು ॥
ಮದನಸಮರೂಪನುತ್ತಮಗುಣಕರಂಡಕಂ ।
ಚದುರಮಂಗರಸ ರಚಿಸಿದ ಕೌಮುದೀ ಕಥೆಯೊ- ।
ಳೊದವಿದುದು ಸೋಮಶರ್ಮ್ಮನದೊಂದು ಕಥನವೇಳನೆಯ ರಂಜಿಸುವ ಸಂಧಿ ॥ ೬೮ ॥
ಅಂತು ಸಂಧಿ ೭ಕ್ಕಂ ಪದ ೪೬೩ಕ್ಕಂ ಮಂಗಲಮಹಾ.

---



# ಎಂಟನೆಯ ಸಂಧಿ.



## ಮುಂಡಿಕೆಯ ಕಥೆ.

ಶ್ರೀಮದರ್ಹದ್ಧಾಸವೈಶ್ಯವಿಭು ಕೇಳಲಾ ।
ತಾಮರಸವದನೆ ನಾಗಶ್ರೀ ಕರಂಗಳಂ ।
ಪ್ರೇಮದಿಂ ಮುಗಿದು ತನಗಾದ ಸಮ್ಯಕ್ತ್ವಮಂ ಬಿನ್ನಪಂಗೆಯ್ದಳಿಂತು ॥ ಪಲ್ಲ ॥

ಧಾರಿಣೀಸತಿಯ ದರಹಸಿತಮುಖದಂತೆ ಕಾ- ।
ಶ್ಮೀರಜನಪದದ ಮಧ್ಯದೊಳು ಕಡು ಸೊಗಯಿಸುವ ।
ವಾರಣಾಸಿಯೆಂಬ ರಾಜಧಾನಿಯೊಳು ಶೋಭಿಪ ಸೋಮಕುಲದೀಪನು ॥
ಚಾರುಗುಣಮಣಿಗಣಾಭರಣನಾಶ್ರಿತಜನಾ- ।
ಧಾರ ಜಿತಶತ್ರುವೆಂದೆಂಬ ಭೂಪಾಲಕಂ ।
ನಾರಿ ಕಾಂಚನಚಿತ್ರೆಯೆಂಬಳೊಡಗೂಡಿ ಸುಖದಿಂದರಸುಗೆಯ್ಯುತಿಹನು ॥೧॥

ಉತ್ತಮಗುಣಾನ್ವಿತರ ವರಗರ್ಭದಲ್ಲಿಯು- ।
ತ್ಪತ್ತಿಯಂ ಪಡೆದು ಮುಂಡಿಕೆಯೆಂಬ ನಾಮಮಂ ।
ಪೆತ್ತು ಬೆಳೆಯುತ್ತ ಕಿರುಗೂಸಿನೊಳ್ಮುನ್ನಮಾಡಿದ ಪಾಪದೆಸಕದಿಂದ ॥
ಮೃತ್ತಿಕೆಯನನುದಿನಂ ತಿಂದು ಮೈಯೊಳು ರೋಗ ।
ಹತ್ತಿ ವಿದ್ರೂಪಾಗಲಂತದಂ ಕಂಡು ಭೂ- ।
ಪೋತ್ತಂಸನತ್ಯುದಾಸೀನಮಂ ಮಾಡೆ ಪೆರತೊಂದು ತಾಣದೊಳು ಬೆಳೆದು ॥ ೨ ॥

ಒಂದುದಿನದಲ್ಲಿಯಾಪೂರ ಮಧ್ಯದ ಚೈತ್ಯ- ।
ಮಂದಿರದೊಳೊರ್ವ್ವ ಕಂತಿಯುರಬಲೆಯರ್ಗೆ ಮನ- ।
ಸಂದು ಧರ್ಮ್ಮೋಪದೇಶಂಗೆಯ್ದು ಸುವ್ರತಂಗಳನೆ ಕೊಡುವುದನು ಕಂಡು ॥
ಬಂದು ತಾನವರ ಪಾದಾಂಬುರುಹಕತಿಭಕ್ತಿ- ।
ಯಿಂದ ವಂದನೆ ಮಾಡಿ ಧರ್ಮ್ಮಮಂ ಕೇಳಿಯುವ- ।
ರಂದದಿಂ ನನಗೊಂದು ಸುವ್ರತಮನೀಯಬೇಕೆಂದು ಬಿನ್ನವಿಸಲಾಗ ॥ ೩ ॥

ಕರುಣದಿಂದಾ ಕಂತಿಕೆಯರೆಂದರೆಲೆ ಮಗಳೆ ।
ಕರಮೊಳ್ಳಿತಾಯ್ತು ನೀನೆಣಿಸಿದುದು ಭವಭವಾಂ- ।
ತರದೊಳೊದವಿದ ಪಾಪದಂಡಲೆಯಿನಿಂತಾಯ್ತು ನೀನೀಗ ಮೃತ್ತಿಕೆಯನು ॥
ಪಿರಿದಾಗಿ ಸೇವಿಸಲ್ಕೆಯ್ಗೆಟ್ಟುದದನು ನೀಂ- ।
ಪರಿಹರಿಸಬೇಕೆನುತ್ತಾ ವ್ರತಮನೀಯಲದ ।
ಕೈಕೊಂಡು ಪರಿಪಾಲಿಸುತ್ತಿರಲು ತದ್ರೋಗಮೆಲ್ಲಂ ಕೆಟ್ಟುದು ॥ ೪ ॥

ಅನಿಲಸಖಮುಖದಿನಾಯುಧಮನಿರದಾಶ್ರಯಿಸಿ- ।
ದಿನಿಸು ಜಲಮುನ್ಮತ್ತಗಜಘಟಾಳಿಯ ಶಿರಮ- ।
ನನುವೇಗದಿಂದ ಖಂಡಿಸುವಂತೆ ತನ್ನ ನಿಜಗುರು ಪಾಲಿಸಿದ ಸುವ್ರತಂ ॥
ಮನದೊಳೊಂದಿನಿಸು ಹೊರೆಯಿಲ್ಲದೇ ತಳೆದ ಸ- ।
ಜ್ಜನೆಯ ಮುಂಡಿಕೆಯ ಸದ್ಗುಣಗಣಾಲಂಕೃತೆಯ ।
ತನುವಿನಾ ವ್ಯಾಧಿಯಿಂದಾದ ವಿದ್ರೂಪೆಲ್ಲ ಕೆಟ್ಟಿತಿನ್ನೇನೆಂಬೆನು ॥ ೫ ॥
ಸಿದ್ಧರಸಮಂ ಸೋಂಕಿದವಲೋಹಮೆಲ್ಲಮತಿ ।
ಶುದ್ಧಸ್ವರೂಪ ಕಾಂಚನಮಪ್ಪ ತೆರದಿನಾ ।
ಉದ್ಧತವ್ಯಾಧಿ ಹೊದ್ದಿದ ಮುಂಡಿಕೆಯ ದೇಹಮಾವ್ರತಂ ಸೋಂಕಲೊಡನೆ ॥
ನಿರ್ಧರದಿನತ್ಯಂತ ರೂಪುಲಾವಣ್ಯರಸ- ।
ವೃದ್ಧಿಯಂ ಪಡೆದು ಜವ್ವನವಾಂತು ಜಗದೊಳ್ಪ್ರ- ।
ಸಿದ್ಧತ್ವಮಂ ಪಡೆದು ಬಳಿಕೊಂದುದಿವಸಮಾ ಗುರುವಿಂಗೆ ನಮಿಸಿ ಬಳಿಕ ॥ ೬ ॥
ಎಲೆ ಗುರುವೆ ನಿನ್ನ ಕರುಣದಿನೆನ್ನ ರೋಗ ಹರಿ- ।
ದಿಳೆಯೆಲ್ಲ ಪೊಗಳ್ವ ರೂಪಾಯಿತೆನ್ನಂಗಮೆನೆ ।
ಸುಲಲಿತ ಚರಿತ್ರನಿಧಿ ಕೇಳ್ಸುವ್ರತದ ಫಲದಿಸುರಗನರನಾಕಮೆಂಬಾ ॥
ನೆಲಕೊಡೆಯರಾಗುವಕ್ಕೈರ್ವಲ್ಯಕಾಂತೆಯೊಳ- ।
ಗಲಸದೇ ಕೂಡುವರಿದೇನುದೊಡ್ಡಿತ್ತೆನ- ।
ಲ್ಲಲನೆ ಹರ್ಷೋತ್ಕರ್ಷೆಯಾಗಿ ಸದ್ಧರ್ಮಮಂ ನಂಬಿ ನಡೆಯಿಸುತಮಿರಲು ॥ ೭ ॥
ತಳತಳಿಸಿ ತರಳತ್ವಮಂ ಪಡೆದುವಕ್ಷಿಗಳ್ ।
ತುಳುಕಿದುದು ಲಾವಣ್ಯಮಂ ಕೋಮಲಾಂಗದು- ।
ಜ್ಜಳಿಸಿದುದು ತನಿಗಂಪನಾ ತೋಳ ಮೊದಲಳಕತತಿ ಕುಟಿಲಮಾಯ್ತುರದೊಳು ॥
ಮೊಳೆದೋರಿದುವು ಮೊಲೆಗಳೂರುಗಳ್ಕಡು ನುಣ್ಪು- ।
ದಳೆದುವಂಕುರಿಸಿದುದು ಲಜ್ಜೆ ಚಿತ್ತದೊಳು ಮುಡಿ- ।
ಯುಲಘುತರಮಂ ಪಡೆದುದಾ ರಾಜನಂದನೆಗೆ ಬಂದ ಪೊಸಜವ್ವನದೊಳು ॥ ೮ ॥
ರತಿಯ ಬಾಳಂ ಕೆಡಿಸುವತ್ಯಂತರೂಪು ಭಾ- ।
ರತಿಯ ಬದುಕಂ ಬಯಲುಮಾಳ್ಪ ಕಡುಜಾಣ್ಮೆ ಪಾ- ।
ರ್ವತಿಯೇಳ್ಗೆಯಂ ಗಾರುಗತಮಾಳ್ಪ ಗಾಡಿ ಪಂಕರುಹನಾಭನ ಪಟ್ಟದಾ ॥
ಸತಿಯಿರವ ಹರಿಹಂಚುಮಾಡುವ ವಿಲಾಸದು- ।
ನ್ನತಿಕೆಯಮರೇಶನಂಗನೆಯ ತೇಜಂಗೆಡಿಸು- ।
ವತಿವಿಭವಮುಂಟೇಕೆಗೆಂದು ಕೊಂಡಾಡುತ್ತುಮಿರ್ಪ್ಪರಾ ಮುಂಡಿಕೆಯನು ॥ ೯ ॥
ಚಂಡಿಕಾಪತಿಯ ಚಕ್ಷುವಿನುರಿಯ ನಂದಿಪಾ ಪ್ರ- ।
ಚಂಡಿಕೆಯ ಪಡೆದ ಪಂಚೇಷುವಿನ ಖಡ್ಗದೆಡೆ- ।
ಗೆಂಡಿಕೆಯ ಸಮೆದ ನಡುವಿನ ವಿರಕ್ತರ ಮನದ ಶಾಂತರಸದೊಬ್ಬುಳಿಯನು ॥

ಹಿಂಡಿ ಕೆಡಿಸುವ ಜಾಣ್ಮೆಯಿಂ ರಸಿಕಜನತತಿಯ ।
ಚೆಂಡಿಕೆಯನೆರಗಿಸುವ ಮೃದುಪದಂಗಳನಾಂತ ।
ಮುಂಡಿಕೆಯ ರೂಪುಯೌವನವಿಲಾಸವನು ಬಣ್ಣಿಪರಾರಿಳಾತಳದೊಳು ॥ ೧೦ ॥
ಸುಲಲಿತ ಸುಧಾಸೂತಿಸನ್ನಿಭ ನಿಜಾನನದ ।
ಜಲಜಾಕ್ಷಿಯಾ ನೃಪಾತ್ಮಜೆಯೊಂದುದಿವಸದೊ- ।
ಳ್ಕಲಿನವಿಜಯಂಗೆ ಸದ್ಭಕ್ತಿಪೂರ್ವಕದಿನುತ್ತಮಮುಪ್ಪ ವಸ್ತುವಿಂದಾ ॥
ಅಲವರಿಕೆಯಿಲ್ಲದಭಿಷೇಕಪೂಜೆಯನು ಮನ- ।
ದೊಲವಿನಿಂ ಮಾಡಿ ಗುರುವಿಂಗೆ ವಂದಿಸಿ ಬಳಿ- ।
ಕ್ಕಲರ್ವಿಲ್ಲನರಸಿಯಂದದಿ ಸಿದ್ಧಶೇಷೆಯಂ ಕೊಂಡು ನಡೆತರುತಿರ್ದ್ದಳು ॥ ೧೧ ॥
ಥಳಥಳಿಸೆ ಹಸ್ತಶಾಖಾನಖಪ್ರತತಿ ಪೊರ- ।
ವಳಯದೊಳ್ಕರಯುಗಮನೆತ್ತಿ ನೀಲೋತ್ಪಲದ ।
ಲಲಿತಪ್ರಸೂನದುತ್ತಮ ಸಿದ್ಧಶೇಷೆಯಂ ಮಡಗಿ ನವಮಾಣಿಕ್ಯದಾ ॥
ಲಲಿತಪಾತ್ರಂಬಿಡಿದು ನಡೆವ ನೃಪತನುಜೆ ಕ- ।
ಣ್ಗೊಳಿಸಿದಳ್ಸತ್ತೆಂಟುತಾರೆಸಹಿತಂ ಮೂಡಿ ।
ಪೊಳೆವ ಪೂರ್ಣೇಂದುಬಿಂಬಂ ಬೆರಸಿ ಬರ್ಪ್ಪೆಂದ್ರದಿಗ್ವನಿತೆಯೆಂಬಂದದಿ ॥ ೧೨ ॥
ಸಾಕ್ಷಾದ್ವಚೋವನಿತೆ ಸಾನುರಾಗದೊಳು ಪ್ರ- ।
ತ್ಯಕ್ಷಮುತ್ತಮ ಕುಸುಮದಿಂಡೆಯಂ ತನ್ನ ನಿಜ ।
ದಕ್ಷಿಣಕರಾಗ್ರದಿಂ ಕೊಡುವಂತೆ ಮಣಿಮಯ ಕಿರಿಟೋತ್ತಮಾಂಗದೊಳಗೆ ॥
ಇಕ್ಷುಕೋದಂಡಮದಮರ್ದನನ ಮೂಲೋಕ- ।
ರಕ್ಷಾಮಣಿಯ ಸೇಸೆಯಂ ತಳಿವ ತರುಣ ಹರಿ- ।
ಣಾಕ್ಷಿಯ ವಿಲಾಸದೇಳ್ಗೆಯನೀಕ್ಷಿಸುತ್ತ ತಲೆಯಂ ತೂಗಿ ತಜ್ಜನಕನು ॥ ೧೩ ॥
ಇಂಬುವಡೆದಾ ಮಗಳ ಚೆಲ್ವಿಕೆಗೆ ಹರ್ಷಾವ- ।
ಲಂಬಿ ಜಿತಶತ್ರುಧರಣೀನಾಥನೊಸೆದಾ ಸ್ವ- ।
ಯಂಬರದೊಳಲ್ಲದೇ ಮತ್ತಾರು ಬೇಡಿದೊಡೆ ಮನಸಂದು ಕೊಡುವುದಿಲ್ಲ ॥
ಎಂಬುದೊಂದಾ ವಾರ್ತೆಯಂ ಕೇಳಿ ಭಗದತ್ತ- ।
ನೆಂಬರಸು ಚಕ್ರಕೋಟಾಪುರೀನಾಥನಲ- ।
ರಂಬಸಮರೂಪನಪ್ರತಿಮಪ್ರತಾಪ ಮಹದೈಶ್ವರ್ಯಸಂಪನ್ನನು ॥ ೧೪ ॥
ಆ ಸುಗುಣಮಣಿ ಮುಂಡಿಕೆಯ ಬೇಡಿ ತನ್ನ ವಿ- ।
ಶ್ವಾಸಿಗಳ ಕಳುಹಲವರೆಯ್ದಿ ಜಿತಶತ್ರುಧರ- ।
ಣೀಸತೀವಲ್ಲಭನ ಕಂಡು ಪಾದಾಕ್ರಾಂತರಾಗಿ ವಸುಧಾವಲ್ಲಭಾ ॥
ಓಸರಿಸದೇ ನಿಮ್ಮ ನಿಜತನೂಭವೆ ಸದ್ವಿ- ।
ಲಾಸವತಿಯಂ ನಮ್ಮ ನರನಾಥಗೀವುದೆನೆ ।
ಭಾಸುರಗುಣಾಭರಣನಾ ನಿಯೋಗಿಗಳ ಕೂಡಿಂತೆಂದು ನುಡಿದನಾಗ ॥ ೧೫ ॥

ನಮ್ಮೊಳಗೆ ನಿಮ್ಮೊಳಗೆ ಕೊಳ್ಳುಕೊಡೆಯೇ ಬಯಲ- ।
ಹಮ್ಮನಾಡಲದೇತಕೀ ಲೋಕದರಿಕೆಯೊಳು ।
ನಿಮ್ಮೊಡೆಯನೀಗ ವಿವರಿಸಿ ನೋಡಿದೊಡೆ ನಮ್ಮ ರವಿಕುಲದ ಸೋಮಕುಲದಾ ॥
ಸೊಮ್ಮಿನವನಲ್ಲ ತನಗೀಗ ಬಂದೈಸಿರಿಯು ।
ಸುಮ್ಮಾನದಿಂದ ಬೇಡುವುದೀಗ ಬಲ್ಲವರ ।
ಸಮ್ಮತವೆಯೆಂಬ ಭೂವರಸ ನುಡಿಗುತ್ತರಂಗೊಟ್ಟರಿಂತಾ ಸಚಿವರು ॥ ೧೬ ॥
ಮುತ್ತಮಾಂಸದೊಳು ಜನಿಯಿಸಿ ಉಳಿದ ರತ್ನಕ್ಕೆ ।
ಮೊತ್ತಮೊದಲಾಯಿತಿಲ್ಲವೆ ಕಾಡಮಿಗದೊಳು- ।
ತ್ಪತ್ತಿಯಂ ಪಡೆದು ಕಸ್ತೂರಿಕರ್ಪೂರಕಾಶ್ಮೀರಕೆಣೆಯಾಯ್ತಿಲ್ಲವೇ ॥
ಉತ್ತಮದರೂಪುರಸಿಕತೆ ಸದ್ವಿಲಾಸಸಂ- ।
ಪತ್ತುಸಾಹಸವಿತರಣಂಬಡೆದ ಭೂಮಿಪಾ- ।
ಲೋತ್ತಂಸರೊಳಗೆ ಹಿಂದಂ ಹಿಸಿಕಿನೋಳ್ಪರೇ ಬಲ್ಲವರ್ಧರಣಿಪಾಲಾ ॥ ೧೭ ॥
ಈ ತೆರದಿ ನುಡಿದವರ್ಗ್ಗಿಂತೆಂದನಾ ನೃಪತಿ ।
ನೀತಿಯೆಂಬುದು ನೀರಮೇಲೆ ತೇಲುವ ತೆಪ್ಪ ।
ಮಾತಬಲ್ಲವರೆತ್ತ ತೆಗೆದಂತೆ ಬಹುದದಂ ಕೇಳಿದೊಡೆ ಹುರುಳಾಗದು ॥
ಏತರದು ಮಾತದಂತಿರಲಿ ಸದ್ವಂಶಪ್ರ- ।
ಸೂತರಲ್ಲದವರ್ಗ್ಗೆ ಕೂಸಕೊಟ್ಟೊಡೆ ನಗದೆ ।
ಭೂತಳಮದಕ್ಕೆ ಸಂದೇಹಮೇ ಅದುನಿಮಿತ್ತಂ ನಿಮ್ಮ ಭಗದತ್ತಗೆ ॥ ೧೮ ॥
ಪರಮ ಸಮ್ಯಗ್ದೃಷ್ಟಿ ಪರಿರಂಜಿತಜ್ಞಾನಿ ।
ನಿರುಪಮಚರಿತ್ರ ರತ್ನತ್ರಯದ ಮೂರ್ತಿಯಂ ।
ಸುರುಚಿರ ಸುವರ್ಣ್ಣಸಂತಾನಕ್ಕೆಯಲ್ಲದೆ ಸೇರಿಸುವುದುಚಿತಮಲ್ಲ ॥
ನಿರುತದಿಂದೆಂದವರನಾ ಅರಸು ಬೀಳ್ಕೊಡ- ।
ಲ್ತಿರಿಗಿಬಂದಾ ತಮ್ಮ ಪುರವರಕ್ಕಾ ನುಡಿಯ ।
ನೊರೆಯಲಾ ಭಗದತ್ತಭೂಪಾಲ ಸಿಡಿಲದನಿಗೇಳ್ದ ಹರಿಯಂತೆ ಕೆರಳಿ ॥ ೧೯ ॥
ಇರ್ದ್ದಿರವಿನಲ್ಲಿ ಹರಿದಾಳಿಯಂ ಮಾಡಿ ತಾ ।
ನಿರ್ದ್ದರನಿನಿಸರೊಳ್ದೂಳಿಗೊಂಚೆಯು ಕೊಂಡು ।
ಬಾಳ್ದಲೆಯ ಹಿಡಿದು ತನ್ನಂ ಮೊದಲ್ಕೊಡೆನೆಂಬ ಕೂಸನಾ ಮಂದಿರದೊಳು ॥
ಇರ್ದ್ದ ವಸ್ತುಗಳನೆಲ್ಲವ ಬಾಚಿಕೊಂಡು ಬರ- ।
ದಿರ್ದ್ದೊಡಿವು ಮೀಸೆಯೇ ಎಂದು ಗದ್ದುಗೆಯ ಹೊ- ।
ಯ್ದಿರ್ದ್ದು ಕೋಪಿಸುವಾಗ ಸದ್ಬುದ್ಧಿಯೆಂಬ ಮಂತ್ರೀಶನಿಂತೆಂದನಾಗ ॥ ೨೦ ॥
ಒಚ್ಚೆಯಕೆ ಬದುಕಬೇಕೆಂಬ ನೀತಿಯು ಬಿಟ್ಟು ।
ತುಚ್ಚತನಕೀಡಾಗಿ ಬದುಕುವರೆ ದೊಡ್ಡವ- ।
ರ್ಮ್ಮಚ್ಚರಂ ಮಾಡಿದವನತಿಪರಾಕ್ರಮಿ ನನ್ನ ಸೇನೆಯಿಂದವನ ಸೇನೆ ॥

ಹೆಚ್ಚೆಂದು ಹೇಡಿವಟ್ಟಾರು ಕಾರ್ಯ್ಯಂಗಳನು ।
ಮೊಚ್ಚತಂ ಪ್ರಾಣವಳಿದಲ್ಲದೇ ಕೊಡುವರೇ ।
ಹುಚ್ಚರಲ್ಲಾ ಇಂತಿದಂ ತಿಳಿಯದವರು ವಿಶ್ವಂಭರಾಮಂಡಲದೊಳು ॥ ೨೧ ॥
ಏಣಾಕ್ಷಿಯರನೆಣಿಸಿ ಯೆದೆಗೆಟ್ಟ ಮೋಹಿಗ- ।
ಳ್ಕೇಣಕ್ಕೆ ಬದುಕಬೇಕೆಂಬುದನೆ ಭಾವಿಸರು ।
ಸಾಣಳಿವುದಿಂತಿದರಿನೆಂದೆಂಬುದಂ ಕನಸುಮನಸಿನೊಳಗಿನಿಸರಿಯರು ॥
ಊಣೆಯುಮನೆಣಿಸರುರ್ವಿೀತಳದೊಳಪಕೀರ್ತಿ ।
ಹೂಣಿಹಬ್ಬುವುದೆಂಬುದಂ ನೆನೆಯರಾ ತಮ್ಮ ।
ಪ್ರಾಣವಳಿವಲ್ಲಿಪರಿಯಂತರಮುಮೆಂಬುದಿದು ಭೂಲೋಕದೊಳ್ಪ್ರಸಿದ್ಧ ॥ ೨೨ ॥
ಎಂದಿವಾದಿಯ ಪಲವು ತೆರದ ನೀತಿಯನುಸಿರ- ।
ಲೊಂದಿನಿಸು ಮನಕೆ ತಾರದೆ ಕಿವುಡುಗೇಳ್ವರಸ ।
ನಂದಮಂ ಕಂಡು ಕಡುನೊಂದಾ ವಿನಾಶಕಾಲಕ್ಕೆ ವಿಪರೀತಬುದ್ಧಿ ॥
ಬಂದಲ್ಲದೇ ಮಾಣದಾ ಕೌರವಾಧೀಶ ।
ಮುಂದರಿಯದೇ ದುರ್ಬ್ಬುತನದಿಂದ ಕೆಟ್ಟುಹೋ- ।
ದಂದಮಾಯ್ತಲ್ಲಾ ಎನುತ್ತ ಬಿಸುಸುಯ್ದು ಬಳಿಕಿಂತು ಬಿನ್ನಪಗೆಯ್ದನು ॥ ೨೩ ॥
ಈ ಮಾತನುಲ್ಲಂಘನಂ ಮಾಳ್ಪೆನೆಂಬೆಯಾ ।
ಸಾಮಮಂ ಮಾಡಿಯತಿಬಹಳಬಲವೆರಸಿ ಪರ- ।
ಭೂಮೀಶರಂ ತಾಗೆ ಸೊಡರುರಿಯಮೇಲೆ ಬಿರುಗಾಳಿ ಬೀಸಿದವೊಲಹುದು ॥
ವೈಮನಸಿನಿಂದ ಮುಂದಂ ನೋಡದೇ ಸಕಲ ।
ಸಾಮಗ್ರಿಯಂ ಕೂಡಿಕೊಳ್ಳದೇ ನಡೆದು ಸಂ- ।
ಗ್ರಾಮಮಂ ಮಾಡಿದೊಡೆ ಸೊಡರುರಿಯಮೇಲೆ ಬೀಸಿದ ಪತಂಗನವೊಲಹುದು ॥ ೨೪ ॥
ಸಲ್ಲದೀ ಕೃತ್ಯವೆಂದೆಂಬ ಸಚಿವನ ಮಾತ- ।
ನುಲ್ಲಂಘನಂ ಮಾಡಿಯುನ್ಮತ್ತಯೌವನಂ ।
ಪೊಲ್ಲಮುನಿಸಿಂದ ಪೊರಮಟ್ಟು ಪೊಳಲಂ ತನಗೆ ಮಾರ್ಮ್ಮಲೆವರಿಲ್ಲವೆಂದು ॥
ದಲ್ಲಾಳಿತನದಿಂದ ದಂಡುನಡೆದಂ ಧರಣಿ- ।
ಯೆಲ್ಲಮಾ ಬಲುಭಾರಕಲ್ಲಾಡುವಂದದಿಂ ।
ಬಲ್ಲಿದಂ ಭಗದತ್ತ ಭೂಪಾಲಕಂ ದಂಡಧರ ಬಂಡು ನಡೆವ ತೆರದಿ ॥ ೨೫ ॥
ತಂಡತಂಡದ ಪೌಜುವೆರಸಿ ವಿಶ್ವಂಭರಾ- ।
ಮಂಡಲಂ ತೆರಪಿಲ್ಲವೆಂದೆಂಬ ಮಾಳ್ಕೆಯೊಳ- ।
ಖಂಡಿತ ಬಲಂಬೆರಸು ಬಿಟ್ಟ ಸುಠಿಯಲ್ಲಿ ಬಿಡುದಾಣಮಂ ಬಿಡಲೊಲ್ಲದೆ ॥
ಗಂಡುಗಲಿ ಗಡಿಯುಂಕಭೀಮರೆನಿಪುದ್ದಂಡ- ।
ಮಂಡಳೇಶ್ವರರೆಡಬಲಂಬಿಡಿದು ಬರಲಾ ಪ್ರ- ।
ಚಂಡಪ್ರತಾಪಿ ನಿಜವೈರಿ ಭೂಪಾಲಕನ ನಾಡಗಡಿವಾಡಕೆಯ್ದಿ ॥ ೨೬ ॥

ಆರವೆಯು ತರಿದು ಕೆರೆಗಳನೊಡೆದು ಸುಟ್ಟಗ್ರ- ।
ಹಾರ ಮೊದಲಾದೂರುಗಳನು ತುರುಸೆರೆಯು ಹಿಡಿ- ।
ದಾರಯ್ಯದಿದಿರಾದ ಬಲುದುರ್ಗಗಳನು ಧೂಳೀಪಟ್ಟಮಂ ಮಾಡುತ ॥
ಆರುಭಟೆಯಿಂದ ದಾಳಿಯನಿಟ್ಟು ನಿಸ್ಸಾಣ- ।
ಭೇರಿದುಂದುಭಿಯು ರವ ಘೂರ್ಣಿಸಲ್ಕೊವಳಸಿ ।
ವಾರಣಾಸೀಪುರವ ಮುತ್ತಿದಂ ಜೇನಹುಳು ಝೋಂಕರಿಸಿ ಮುತ್ತುವಂತೆ ॥ ೨೭ ॥
ನೆಲಕೆ ಬಾಗಿಸಿದ ಪಲವರಿಯು ಡೆಂಕಣಿ ಕವಣೆ ।
ತೊಲೆ ಸಬಳ ಹೇರಿಟ್ಟ ದಸುಗುಂಡು ಕಾಸುವಂ ।
ಬಲಿ ಸಾರಮಾರಿ ನೆಲಗುಮ್ಮ ಬಿಸಿಯೆಣ್ಣೆ ಹುರಿಮಳಲು ಹಾವಿನಹೇಳಿಗೆ ॥
ಬಲುಹುಲ್ಲದೊಂದೆ ಬಿಲ್ಲಂಬುಕತ್ತರಿಪಂದಿ- ।
ದಲೆ ಹಾರೆ ಬಿರಿಕೊರಡು ಪೆಟಲ ತಿರುಗಣಿಬೀಸು- ।
ವಲೆ ತಳಿಯುಮರದ ಗೊಂದಣದ ಸಂವರಣೆಯಿಂದಾ ಕೋಂಟೆ ಕಣ್ಗೊಪ್ಪಿತು ॥ ೨೮ ॥
ಹೊತ್ತಿಸಿದ ಹುಲ್ಲದೊಂದೆಗಳ ಕೇಸುರಿಗಳಿಂ ।
ಸುತ್ತುವರೆದೆಸುವ ಶರಸಂತತಿಯ ಸಮಿತಿಯಿಂ- ।
ದುತ್ತಮದ ಬೀರರರಿಬಿರುದನಿರದೊದರ್ವ ಕಲಕಲಮೆಂಬ ಮಂತ್ರದಿಂದ ॥
ಬಿತ್ತರಂಬಡೆದು ನರಯಾಗಮಂ ಮಾಡುವೆನೆ- ।
ನುತ್ತ ಸಮವರ್ತಿಯೆಂದೆಂಬ ದೀಕ್ಷಿತನು ಬಗೆ- ।
ವೆತ್ತು ರಚಿಸಿದ ಹೋಮಕುಂಡದಂತಾ ನಗರಿ ದಾರುಣತರಂಬಡೆದುದು ॥ ೨೯ ॥
ಹೂಳಿಯುಗಳಂ ಹುಲ್ಲಹಾಕಿ ಡೆಂಕಣಿಗಳಂ ।
ಮೇಳೈಸಿ ನಡೆ ಚಪ್ಪರವನು ನಡೆಯಿಸಿ ಕೋಂಟೆ- ।
ಯಾಳು ತಲೆಯೆತ್ತಲೊಡನಾ ಬದ್ದರದ ಮರೆಯೊಳಿದ್ದ ಬಿಲ್ಲಾಳ್ಗಳೆಲ್ಲ ॥
ಬೀಳಲೆಸೆಡೆಗ್ಗಯಂ ನೂಂಕಿ ಸೇತುವನೊಟ್ಟಿ- ।
ಯಾಳೋಚನೆಯ ಮಾಡದಿಕ್ಕಿ ನಿಚ್ಚಣಿಗೆಯುಂ ।
ದೂಳಿಗೋಂಟೆಯ ಕೊಳ್ಳಬೇಕೆಂಬ ಪಡಿಯರರ ಕಲಕಲಂ ಕರವೊಪ್ಪಿತು ॥ ೩೦ ॥
ದೊರೆದೊರೆಗಳೆಲ್ಲ ಹೊಗದ ಕೋಂಟೆಯುಂ ಕಂಡು ।
ಪಿರಿದು ಕೋಪಾಟೋಪದಿಂದ ತಂತಮ್ಮ ಕರಿ- ।
ತುರಗರಥಸಂತತಿಯನಿಳಿದು ಸೀಸಕಜೋಡುಸವಗಮಂ ತೊಟ್ಟುಕೊಂಡು ॥
ಭರದಿನಾಲಗಳ ತಿಟ್ಟಿಗೆ ಬಂದು ನಿಂದು ಬ- ।
ದ್ದರದ ಮರೆಯೊಳ್ನೊಲಹರಿಗೆಯುಂ ಹಿಡಿದು ತ- ।
ದ್ವರವೀರ ಭಟನಿತತಿಯುಂ ಹತ್ತಿ ಹತ್ತಿಯೆಂದೊತ್ತಂಬರಿಸುತಿರ್ದರು ॥ ೩೧ ॥
ಹಿಂದುಮುಂದಂ ನೋಡದಿಕ್ಕಿ ನಿಚ್ಚಣಿಗೆಯುಂ ।
ಗೊಂದಣಂಗೊಂಡಾಳ ತಲೆಗಳಂ ಹತ್ತಿ ಬ- ।
ಲ್ಪಿಂದ ಮೇಗಣ ಕಲ್ಲಬಿಲ್ಲದಸಿಗಳದೊಂದು ಖುರಪಾಟಕಿನಿಸಂಜದೆ ॥

ಮುಂದೆ ಬಿಳ್ದಾಳಹೆಣನಂ ಮೆಟ್ಟಿ ಮೇಲಕೆ- ।
ಯ್ತುಂದು ಕೋಂಟೆಯ ಹತ್ತಿ ತೆನೆಗಳೊಳ್ಕಾಲಿಟ್ಟು ।
ಸಿಂದುದಾ ವೀರಭಟವಿತತಿ ವೀರಸ್ವರ್ಗಕಿರದೆ ದಾಳಿಡುವ ತೆರದಿ ॥ ೩೨ ॥
ಕಡುಭರದಿ ಹತ್ತಿ ಕೋಂಟೆಯ ಮೇಲೆ ಕುದುರೆ ಕಾ- ।
ಲಿಡುವುದಂ ಕಂಡೆಕ್ಕಟಿಗಳೊಳಗಣಿಂ ಬಂದು ।
ಕೆಡೆವಂತೆ ಹುಯ್ದು ಬಿಳ್ವಾಗಳಾ ಕಾಲ್ಗಳಂ ತೆನೆಗಳೊಳ್ಕಟ್ಟಿ ಜಗಿಯೆ ॥
ಬಿಡದೆ ತಲೆಕೆಳಗಾಗಿ ಜೋಲುತ್ತಮಿರ್ದ್ದು ಕೆಳ- ।
ಗಡೆ ಹತ್ತುವರನಂಜದೇ ಹತ್ತಿಯೆನುತ ಕ- ।
ಯ್ಗೊಡುತ ಹತ್ತಿಸಿಕೊಂಬ ಭಟತತಿಯ ಶೌರವನದೇನೆಂದು ಬಣ್ಣಿಸುವೆನು ॥ ೩೩ ॥
ಅರುಣಜಲವೆಡೆಬಿಡದೆ ಪೊರೆಯೆ ಮೊದಲಿಂದ ತುದಿ- ।
ವರಮಿನಿಸು ಬಿಡುವಿಲ್ಲದೇ ಹತ್ತುವಾಳ್ಗಳಿಂ ।
ಪಿರಿದು ರಂಜಿಸಿದುದಾ ಪುರವರದ ಕೋಂಟೆಯುಂತಕನೆಂಬ ಚಕ್ರೇಶನೂ ॥
ನರಲೋಕಕೆಯ್ತುಂದು ಬಿಟ್ಟ ದಂಡಿನೊಳು ತ- ।
ನ್ನರಮನೆಗೆ ಬಳಸಿ ಕೆಂಬಣ್ಣದಪರಸ್ಥಲದ ।
ಪರಿರಂಜಿಸುವ ಚಿತ್ರಪಟದ ಸರವತಿಗೆಯುಂ ಬಿಟ್ಟಂತಿರೊಪ್ಪಿತಾಗ ॥ ೩೪ ॥
ಹುರಿದ ಮಳಲಂ ಹುಯ್ದು ಹುಲ್ಲಕಿಚ್ಚಂ ಹಿಡಿದು ।
ಹರಿವ ಹಾವಂ ಹಾಕಿ ಕಾಸಿದಂಬಲಿಯೆರೆದು ।
ಪರಿಪರಿಯ ಡೆಂಕಣಿಗಳಿಂದ ತಲೆವೊರೆಯಿಂ ಕೆಯ್ಯಿಂದ ಕವಣೆಯಿಂದ ॥
ಸುರುಹಿ ಕಲ್ಲಂ ಪಂದಿದಲೆಯುಂಬುಪೆಟಲುದಸ- ।
ಮರಸಾರಮಾರಿಯಿಂದಾ ಹತ್ತುವಾಳ್ಗಳಂ ।
ಧರೆಗುರುಳ್ವ ತೆರದಿ ಕೊಂದಿಕ್ಕಿದರ್ಪ್ಪೆಣದಿಂದಮಾ ಪರಿಖೆ ಪೂಳುವಂತೆ ॥ ೩೫ ॥
ತುತ್ತುರುಂ ಚಾಗಿಯುಗಳಿಗೆ ಬಿಳ್ದು ಕೋಂಟೆಯುಂ ।
ಹತ್ತಲೆಂದಂಗವಿಸುವಾ ಹರಿಗೆಯಾಳ್ಗಳೊಂ- ।
ದೊತ್ತಂಬರವನು ಕಂಡಾಳ್ದನೊಳ್ ನೋಡುನೋಡೆಂದು ಬಲು ಪಂಥವಾಡಿ ॥
ಮತ್ತಲ್ಲಿ ಕೊರೆದ ನೆಲದಿಡ್ಡಿಯಂ ತೆಗೆತೆಗೆಯೆ- ।
ನುತ್ತ ಪೊರಮಟ್ಟಾರುತೋಸಳಿಕುಮಾಡದೆ ಕ- ।
ರುತ್ತು ಕೆದರಿಸಿತೋಳಹೊಯ್ದುತೊಳಹೊಗುವೆಕ್ಕಟಿಗರೋಳಿ ಕಣ್ಗೊಪ್ಪಿತು ॥ ೩೬ ॥
ಸಡೆಚಪ್ಪರವನು ನಡೆಯಿಸಿಡಲಗ್ಗವರೆಗಳಂ ।
ಜಡಿದು ಹೊಯಿಸುವ ಭರವಸಕ್ಕೆ ಬದ್ದರಗಳೊಳ- ।
ಗಡಗಿ ಗುದಲಿ ಹಾರೆಯಿಂದಗೆವ ರಭಸಕ್ಕೆ ಬಲುಪೆಟಲು ಗುಂಡಿನಿಂದ ॥
ಇಡುವ ನಿಬ್ಬರಕೆ ಬಿಳ್ವ ಕೋಂಟೆಯುಂ ಕಂಡು ।
ಕಡುವೇಗದಿಂದ ತಳೆಯುಂ ನೆಡುತ್ತೊಳಮುರಿದು ।
ಬಿಡದೆ ಕೋಂಟೆಯನಿಕ್ಕುವವಸರಂ ಕರಮೆಸೆದುದಾ ಕೋಂಟೆಗಾಳಗದೊಳು ॥ ೩೭ ॥

ತಲೆಸಳಿತು ಕೈಮರೆದರಂತೆಯೆಸುವಾಳುಗಳ್ ।
ನಿಲೆಕಂಡು ಕೋಂಟೆ ಹೋಯ್ತೇಳೇಳಿಯೆನುತಿರದೆ ।
ಕುಲಿಲಿಯೆಂದಾರಿ ಕೊಬ್ಬಿರಿದು ಹುಲಿಮೊಗದೊಳಗೆ ಹೊಗಲೊಡನೆ ಸೂತ್ರವಿಡಿದು ॥
ಬಲೆಯ ಬಲಿದೆತ್ತಲಾಗಸಕೇಳುವಾ ಭಟಾ- ।
ವಳಿಯುಮಂ ಕಾಣುತಾ ಕದನಮಂ ನೋಳ್ಪಮರ ।
ಲಲನೆಯರಿವಂ ನನಗಿವಂ ನನಗೆನುತ್ತ ಪಸುಗೆಯ ಮಾಡಿಕೊಳುತಿರ್ದ್ದರು ॥ ೪೮ ॥
ಇಡುವ ಡೆಂಕಣಿಗಯ್ಯುಮುರಿವ ಹೂಡೆಯುಗಳಂ ।
ಹುಡಿಹುಡಿಯ ಮಾಳ್ಪ ಹುಲಿಮೊಗದಂಕಮಂ ನುಗ್ಗು- ।
ವಡೆವಂತೆ ತಾಗುವೂರೊಳಗಡ್ಡವಾಯ್ವರಿಲ್ಲೆಂಬಂತೆ ತಾಗಲಿಡುವಾ ॥
ಕಡೆಯಕಾಲದ ಸಿಡಿಲ ದಂಡು ನಡೆತಂದು ಪೊರ- ।
ಗಡೆಪಾಳೆಯಂ ಬಿಟ್ಟಿತೋ ಎಂಬ ತೆರದಿ ಘುಡು ।
ಘುಡಿಸುತೆಡವಿಡವಿಲ್ಲದೇ ಪಿಡುವ ಲೋಹಯಂತ್ರದ ರವಂ ಘೂರ್ಣಿಸಿದುದು ॥ ೪೯ ॥
ಕಡು ಮುನಿಸಿನಿಂದ ಕುಲಧರಣೀಧರಪ್ರತತಿ ।
ನಡೆತರ್಩್ಪ ತೆರದಿ ನಡೆಯಿಪ ಸೇತುಸಮಿತಿಯಿಂ ।
ನಡೆಚಪ್ಪರಗಳೆಂಬ ಬಿಲದಿಂದ ಪೊರಮಟ್ಟು ಪೊಳಲೆಂಬ ಭಾಸ್ಕರನನು ॥
ತುಡುಕಲೆಂದೆನುತ ಮಾಮುಸಕದಿಂ ಬಹುರೂಪು ।
ವಡೆದು ತಾಗುವ ರಾಹುಕೇತುವೋ ಎಂಬಂತೆ ।
ಗಡಿಯಿಲ್ಲದಲ್ಲಲ್ಲಿ ಹಾಯಿಸುವಡೆಗ್ಗವರನತಿಭೀಕರಂ ಬಡೆದುವು ॥ ೫೦ ॥
ಸತ್ತವರ್ಗ್ಗಡಿಯಿಲ್ಲ ಸಾವವರ್ಗ್ಗಡಿಯಿಲ್ಲ ।
ಹೊತ್ತ ಗಾಯದೊಳುರುಳಬೀಳುವರ್ಗ್ಗಡಿಯಿಲ್ಲ ।
ತತ್ತರಂದರಿಯಿಸಿಕೊಳುತ್ತ ಹೊಯ್ದಾಡುವರ್ಗ್ಗಡಿಯಿಲ್ಲ ತೆನೆಯಹಿಡಿದು ॥
ಹತ್ತುವರ್ಗ್ಗಡಿಯಿಲ್ಲ ನಿಚ್ಚಣಿಗೆಯಂ ಹಾಕಿ ।
ಹತ್ತೆ ಸಾರುವರಿಗಡಿಯಿಲ್ಲವದರಿಂ ಕೋಂಟೆ ।
ಮುತ್ತಿಗೆಯ ಸುತ್ತುವೊತ್ತಂಬರವನೇನಂತುಟೆಂತುಟೆಂದೆನಲುಬಹುದೆ ॥ ೫೧ ॥
ಆ ಸಮಯದಲ್ಲಿ ಜಿತಶತ್ರುಭೂವರಗೆ ವಿ- ।
ಶ್ವಾಸಿ ಸಂಭಿನ್ನಮತಿಯೆಂಬ ಮಂತ್ರೀಶನಂ ।
ದೋಸರಿಸದೇ ಕರಗಳಂ ಮುಗಿದೆಲೇ ದೇವ ಚಿತ್ತೈಸು ಪೊರಗೆ ಕೊಟ್ಟಾ ॥
ಕೂಸು ಕುಲಕಿಲ್ಲವೆಂದೆಂಬ ನಾಣ್ನುಡಿಯುಂಟು- ।
ದಾಸೀನಮಂ ಮಾಡದನ್ನ ಬಿನ್ನಪಮನಾ ।
ಸಖಿಂಗಿತ್ತು ಮನೆಯುಂ ಕಾಯ್ದುಕೊಳ್ಳಬೇಕೆಂದು ಬಿನ್ನಪಗೆಯ್ಯಲು ॥ ೫೨ ॥
ಕೇಣಕ್ಕೆ ಬದುಕಬೇಕಲ್ಲದೇ ಸಂಗರ- ।
ಕ್ಷೋಣಿಯೊಳಗಾ ವೈರಿಯತ್ಯಂತವೀರ್ಯ್ಯನೆ ।
ಕ್ಷೂಣಬಲನವನೊಳಗೆ ಕಾದಿ ಜಯಿಸುವುದೆನಗೆ ತೀರದೆನ್ನಿ ಬಲಕ್ಕೆ ॥

ತ್ರಾಣವಿಲ್ಲೆಂದು ಕುಲಹೀನಂಗೆ ಕೂಸಕುಡ- ।
ಲೂಣೆಯುಂ ನಮ್ಮ ಸದ್ವಂಶಕ್ಕೆ ಬಾರದೇ ।
ಪ್ರಾಣವೇಂ ಪಲವು ಪಗಲೀದೇಹದೊಳ್ ನಿಲ್ಲದೆಂಬುದನರಿಯಬೇಡವೇ ॥ ೪೩ ॥
ಎಂದು ಸನ್ನಾಹಭೇರಿಯ ಹೊಯ್ಸಿಯಾಪ್ತರೆ- ।
ಯ್ತುಂದಲ್ಪಬಲವೆರಸಿ ಪೊರಮಡುವುದೊಳ್ಳಿತ- ।
ಲ್ಲೆಂದಡ್ಡನಿಲಲವರಮಾತುಮಂ ಮೀರಿ ಕೆಂಗಣ್ಣಾಸಗಿ ತನ್ನೊಳುಳ್ಳಾ ॥
ಮಂದಿಮದದಾನೆ ರಥವಾಜಿಯೊಳ್ ಬೆನ್ನಬಿಡ- ।
ದೊಂದಾಗಿ ಬರ್ಪ್ಪ ಕಗ್ಗಲಿಗಳೆತ್ತಂ ಬನ್ನಿ- ।
ಮೆಂದಾಯುದ್ಧಕೊಂಡು ಕಡುವೇಗದಿಂದಾ ಪೊಳಲ ಪೊರಮಟ್ಟು ಜವನಂದದಿ ॥ ೪೪ ॥
ನೆಲಹೊರದ ತೆರದಿ ನೆರೆದಾ ಸೇನೆಯಂ ಕೊಂಡು ।
ಬಲವೆನಗೆ ಬಲ್ಲಿತಿಲ್ಲೀ ಬವರಮಂ ಪೊಕ್ಕು ।
ಗೆಲವ ಹಡೆವುದಕಾಗದೆಂಬುದಂ ಭಾವಿಸದೆ ಸೆರಗು ಬೆರಗಂ ಪಾರದೆ ॥
ತಲೆಹೋಕತನದಿಂದ ಬಂದು ಪವುಜಿಕ್ಕಿಯಿನಿ- ।
ಸಲವರಿಕೆಯಿಲ್ಲದೇ ಹೊಕ್ಕೇರಿಯಿರಿದನಾ ।
ಛಲದಂಕನೇಕಾಂಗಧೀರನದಟರದೇವ ಜಿತಶತ್ರುಭೂಪಾಲನು ॥ ೪೫ ॥
ಅತ್ತ ಕೋಂಟೆಗೆ ಲಗ್ಗೆ ಮಾಡುವವರಿಳಿದಿಲ್ಲ ।
ಯಿತ್ತಮೈಗಾಪಿನಾಳ್ಗಳನು ಕಳುಹಿದುದಿಲ್ಲ ।
ವತ್ತಿತ್ತಲಿರ್ದ್ದಪವುಜೇ ತಮ್ಮತಮ್ಮಿಚ್ಛೆಯೊಳಗೆ ನೃಪನಂ ಕೇಳದೆ ॥
ಒತ್ತಂಬದಿಂದ ರಿಪುಭೂವರನ ಪಡೆ ನಿಂದು ।
ನಿತ್ತರಿಸಬಾರದೆಂಬಂತಿರೋಡಿದುದು ಭಗ- ।
ದತ್ತಭೂಪಾಲಕನ ತಳತಂತ್ರ ಮಾರ್ವ್ವಲದ ಬಹಳತೆಯನೇನೆಂಬೆನೂ ॥ ೪೬ ॥
ಇಂತು ಬಂದಾ ಬಲವ ಕಂಡು ಜಿತಶತ್ರುಕಾ ।
ಲಾಂತಕಂ ಮರ್ತ್ಯಲೋಕಕ್ಕೆಯ್ದಿ ಮನುಜರೂ ।
ಪಂ ತಳೆದನೋ ಎಂಬ ತೆರದಿ ಕೆಕ್ಕಳಗೆರಳಿ ತನ್ನ ನಿಜಸೇನೆವೆರಸಿ ॥
ಅಂತರಂ ಮಾಡದೇ ಹೊಕ್ಕಿರಿದನರಿಬಲವ ।
ತಿಂತಿಣಿಯನೇನನೆಂದೆಂಬೆನಾ ನೆಲಹೇಸು- ।
ವಂತೆ ಖಾಡಾಖಾಡಿಯಲಿ ಮೇಲಣಸುರರ್ ಬಿಸವಂದವಡುವಂದದಿ ॥ ೪೭ ॥
ವೀರಭಟವಿತತಿಯೊಳ್ವೀರಭಟವಿತತಿ ಮದ- ।
ವಾರಣಪ್ರತತಿಯೊಳ್ವಾರಣಪ್ರತತಿ ಬಲು ।
ತೇರತಿಂಥಿಣಿಯೊಳಾತೇರತಿಂಥಿಣಿ ವಾಜಿಯೊಡ್ಡಿನೊಳ್ವಾಜಿಯೊಡ್ಡು ॥
ಆರಯ್ಯದಧಿಕರೌದ್ರಾವೇಶದಿಂ ಹಿಂದ ।
ಹಾರೈಸದೇ ನಿಂದು ಕೈಹೇಸ ಮೈಹೇಸ- ।
ದಾರಭಟೆಯಿಂದ ಕಾದುತ್ತಿರ್ದ್ದುದಾ ಯಿರ್ವ್ವರವನಿಪಾಲಕರ ಸೇನೆ ॥ ೪೮ ॥

ಅಣಿಯು : ಇಯೊಳು ಕೋಳಹೊಯ್ದು ತಂದೊಪ್ಪಿಸುವ ।
ರಣರಸಿಕರೊಡ್ಡುವೊಡ್ಡಣವ ಕಂಡೊಲ್ಲಯಿಸು- ।
ವಣಿಯುರಕೆ ಹಿಂದಾಗಿ ನಡೆದುಬರ್ಪೆಕ್ಕಟಿಗರೇರಿ ಹಿಡಿಗುದುರೆಗಳನು ॥
ಎಣಿಕೆಮಾಡದೆ ಹಿಡಿವ ರಾಯರಾವುತರು ಟಿಂ- ।
ಟಿಣಿಸಿ ಮಾರ್ಮಲೆತು ಕಾದುವ ಮಾವತಿಗರು ಬಿ- ।
ನ್ನಣದಿ ನಸುಹೋಹ ಹೊತ್ತರಿಯದೆಚ್ಚಾಡುವ ಮಹಾರಥಿಕರೆಸೆದರಲ್ಲಿ ॥ ೪೯ ॥
ದಬ್ಬುದಲೆಗೊಂಡು ನರಲ್ವರೆವೆಣಂಗಳ ತಂಡ ।
ವುಬ್ಬಸಂಗೊಂಡೇಳ್ವಬಿಳ್ವ ಹಯವೇತಂಡ ।
ನಿಬ್ಬರದಿ ನಡೆದು ಪಿಡಿದಸಿಗಳಂ ಝಳಪಿಸುವ ಮುಂದೆ ಮುಗ್ಗಿರಿವ ಮುಂಡಾ ॥
ಬೊಬ್ಬಿರಿದು ನೆಗೆದು ನೆಲಕುರುಳೆ ಬೀಳುವ ರುಂಡ ।
ಕೆಬ್ಬಿವಣ್ಣಂ ಕೆದರಿದಂತೆಸೆವ ಕಡಿಕಂಡ ।
ದೊಬ್ಬುಳಿಯಿನೆಸೆವ ಬಿಸಿಯುರುಣಜಲಗಳ ಕೊಂಡವೆಸೆದುವಾ ಧುರಧರೆಯೊಳು ॥ ೫೦ ॥
ಬಲ್ಲಿದಂ ಭಗದತ್ತಭೂಮಿಪಾಲಕನ ಬಲ- ।
ದಲ್ಲಿ ಕೆಲವೌಜುನಿತ್ತರಿಸಲಾರದೆ ಚಿಲ್ಲಿ- ।
ಪಿಲ್ಲಿಯಾದುದು ಕೆಲವು ಕೆದರಿಬೆದರಿತು ಕೆಲವು ಪಿಂದಕೋಡಿದುದು ಕೆಲವು ॥
ತಲ್ಲಣಂಗೊಂಡು ತಕ್ಕಳಿದು ನಿಂದೆಡೆಯುಲ್ಲಿ ।
ನಿಲ್ಲದಾಯಿತು ಕೆಲವು ಪಿಂಡುಗೆದರಿತು ಕೆಲವು ।
ವೊಲ್ಲಯಿಸಿದತ್ತು ಕೆಲವುದುಪುಗೆಟ್ಟಿತು ಕೆಲವು ಜಿತಶತ್ರುವಿರಿವಿರಿತಕೆ ॥ ೫೧ ॥
ಅದನು ಕಂಡಾ ನೃಪತಿ ತನ್ನನಿರದೋಲೈಸು ।
ವದಟರೆನಿಪತಿರಥಮಹಾರಥರ್ಸಮರಥ- ।
ರ್ಮೊದಲಾದ ರಥಿಕರುಂ ದಶಲಕ್ಷಶತಕೋಟಿಗೊಬ್ಬೊಬ್ಬ ವೀರಭಟರೂ ॥
ಕದನಕರ್ಕಶ ಕರಿತುರಂಗವಾಹಕರೊಡನೆ ।
ಹುದುಗಿಬರೆ ನೆಲನೀದ ತೆರದಿ ಮೂವಳಸಲಾ ।
ಉದಧಿಯೊಳ್ಬೆರಣಿಯುಂ ಹಾಕಿದಂತಾಯ್ತು ಜಿತಶತ್ರುಭೂಪನ ವಾಹಿನಿ ॥ ೫೨ ॥
ಇತ್ತ ಪುರಜನಮೆಲ್ಲ ಕೆಟ್ಟೆವಿನ್ನೇಕೆ ಯಿ- ।
ನ್ನೆತ್ತಣದು ನಮ್ಮ ಜಿತಶತ್ರುಭೂಪತಿಗೆ ಬದು- ।
ಕೆತ್ತ ವೋಡುವೆವು ನಮ್ಮಂ ಕಾವರಾರು ನಮ್ಮೊ ಪೊಳಲನೊತ್ತರಿಸಿದಾ ॥
ಮುತ್ತಿಗೆಯೊಳೀ ಹೆಂಡಿರೀ ಮಕ್ಕಳೆಲ್ಲರುಂ ।
ಸತ್ತುಹೋಹಂತಾಯಿತೆಂದೆನುತ ಬಾಯಂ ಬಿ- ।
ಡುತ್ತ ಮದ್ದಳೆಯು ಹೊಕ್ಕಿಲಿಯಂತಿರತ್ತಿತ್ತಹುಡುಹಾವುತಿರ್ದರಾಗ ॥ ೫೩ ॥
ದುರುದುಂಬಿತನದಿ ಧುರಮಂ ಮಾಳ್ಪೆನೆಂದೂರ ।
ಪೊರಮಟ್ಟು ತನ್ನ ಸೇನೆಯುನು ಪರಬಲಕೆ ಕು- ।
ಯ್ಗುರಿಮಾಡಿ ನಾಡುಬೀಡಂ ಕೆಡಿಸಿಕೊಂಡನಲ್ಲಾ ನಮ್ಮ ನೃಪತಿಯೆಂದು ॥

ಗುರುಮಂತ್ರಗೊಂಡು ಗುಡ್ಡಿಣಿಕೆಯುಂ ಮಾಡಿ ಕೈ ।
ಮರೆದುನಿಂದಾ ಕೋಂಟೆಯಾಳ್ಗಳಂ ಕಂಡು ಕೊ- ।
ಬ್ಬಿರಿದು ಕೋಂಟೆಯುಸು ತಡವಿನ್ನೇತಕೆಂದು ಹಬ್ಬುತ್ತಿರ್ದ್ದುದರಿವಾಹಿನಿ ॥ ೫೪ ॥
ಈತೆರದಿನಾದ ಪುರದೊತ್ತಂಬರವ ಕಂಡು ।
ನೀತಿವಿದೆ ನಿರ್ಮ್ಮಲಚರಿತ್ರನಿಧಿ ಸಜ್ಜನವಿ- ।
ನೂತೆ ಮುಂಡಿಕೆ ತನ್ನೊಳಿಂತೆಂದಳೆನ್ನಕತದಿಂದೆಮ್ಮ ಮನೆಗೆ ಕೇಡು ॥
ಭೂತಳಂ ತಿಳಿವ ತೆರನಾಯ್ತು ಮುಂದಕ್ಕೆ ನನ- ।
ಗೇತರದು ಬದುಕೆಂದು ಪೊಳಲನೊತ್ತರಿಸಿ ಪರಿ ।
ವಾತರಂಗಿಣಿಯ ಮಡುವಂ ಹೊಕ್ಕಳಬುಧಿಯುಂ ಪುಗುವ ರೋಹಿಣಿಯ ತೆರದಿ ॥ [illegible] ॥
ಜಂಬಾಲಜಾತನಿಭಮುಖದ ಜಲಚರಸನ್ನಿ- ।
ಭಾಂಬಕದ ಚಕ್ರಸ್ತನದ ಪುಳಿನತಳನಿಭನಿ- ।
ತಂಬದಾವರ್ತ್ತನಾಭಿಯ ನವಮೃಣಾಳ ಹಸ್ತದ ಕೈರವಾಮೋದದಾ ॥
ಕಂಬುಕಂಧರದ ಕೂರ್ಮ್ಮೋಪಮಾಂಘ್ರಿಗಳ ಕಾ- ।
ದಂಬಸಮಗತಿಯ ಲಾವಣ್ಯರಸವಾರಿಯ ನಿ- ।
ತಂಬಿನೀಮಣಿ ನಿಮ್ನಗಾನಾರಿ ನದಿಗೆ ನಂಟೆಯ್ದಿದವೊಲೊಳಹೊಕ್ಕಳು ॥ ೫೬ ॥
ಸರಸವಟಪಕ್ವಫಲ ಸನ್ನಿಭಾಧರೆ ತರುಣ ।
ಹರಿಣೀವಿಶಾಲವಿಲಸದ್ವಿಲೋಚನೆ ಮನೋ- ।
ಹರತರಾಮೃತವಾಣಿ ಭವ್ಯಕುವಲಯಮೈತ್ರಿ ವಿಮಲವೃತ್ತಾಭಿರಾಮೆ ॥
ವಿರತಿಶಯಕಾಂತಿಯುತೆ ಸೌಮ್ಯಜನ್ಮಸ್ಥಾನೆ ।
ಪರಮಹಿಮಕರಭಾಸಿದೋಷಾಪಹಾರಿ ತ- ।
ತ್ತರುಣಿಮುಂಡಿಕೆ ಶರಧಿಯುಂ ಪುಗುವ ಶಶಿಯಂತೆ ಮಡುವಂ ಹೊಕ್ಕಳೂ ॥ [illegible]೭ ॥
ಎನಗೀ ಮಹೋಪಸರ್ಗ್ಗಂ ಪಿಂಗುವನ್ನೆವರ ।
ಮನಘನರ್ಹತ್ಪತಿಯ ಸಾಕ್ಷಿಯೊಳ್ಸನ್ಯಸನ- ।
ಮೆಸುತ ಕಯ್ಯಿಕ್ಕಿ ಕುಳ್ಳಿರ್ದ್ದ ಮುಂಡಿಕೆಯ ಸಮ್ಯಕ್ತ್ವದ ಮಹಾತ್ಮೆಯಿಂದಾ ॥
ಎನಿತೆನಿತಗಾಧಮಪ್ಪಾ ನದಿಯ ನೀರಿಂಗ ।
ಲನಿತರೊಳ್ಜಲದೇವತೆಯುರೆಯ್ದಿ ಹರಿಸದಿಂ ।
ಕನಕಮಯಮಪ್ಪ ಕರುಮಾಡವೊಂದಂ ರಚನೆಗೆಯ್ದುದರ ಮೇಲ್ನೆಲೆಯೊಳೂ ॥ ೫೮ ॥
ಪಜ್ಜಳಿಪ ಹಲವು ರನ್ನದ ಪೀಠದೊಳಗಿರಿಸಿ ।
ಮಜ್ಜನಂಬುಗಿಸಿ ಹದಿನಾಲ್ಕು ನದಿಯಂಬುವಿಂ ।
ಸಜ್ಜುಕಂ ಮೊದಲಾದ ಷೋಡಶಾಭರಣಮಂ ಲಲಿತೋತ್ತಮಾಂಗದಿಂದ ॥
ಪಜ್ಜೆವರಮನುಗೊಳಿಸಿ ನಿನ್ನಂದದಿಂದೀ ಜ- ।
ಗಜ್ಜಾಲದೊಳಗೆ ಸಮ್ಯಕ್ತ್ವಮಂ ನೆರೆತಳೆದ ।
ಸಜನೆಯರಾರೆಂದು ಕೊಂಡಾಡಿ ನಗರದೇವತೆಗಳಂ ಕೂಡಿಕೊಂಡು ॥ ೫೯ ॥

ಉತ್ತಮ ಜಿತಾರಿಭೂಪಾಲಕನ ಮೂವಳಸಿ ।
ವೊತ್ತಂಬರಂ ಮಾಡುವಾ ನಗರಿಯುಂ ಸುತ್ತ- ।
ಮುತ್ತಿಹತ್ತುವ ಸೇನೆಯೆಲ್ಲಮಂ ಭಿತ್ತಿಯೊಳಗೆತ್ತಿಸಿ ಹಸಂಮಾಡಿದಾ ॥
ಪುತ್ತಳಿಗಳಂತೆ ಕೀಲಿಸಿ ಪಿಡಿದ ಕಯ್ದನಿನಿ ।
ಸೆತ್ತದಂದದಿ ಮಾಡಿ ಬಳಕ ಕೋಪದೊಳು ಭಗ- ।
ದತ್ತಭೂಪಾಲಕನ ಕಣ್ಗೆಯದ್ಭುತಮಪ್ಪ ರೂಪಮಂ ಧರಿಸಿಕೊಂಡು ॥ ೬೦ ॥
ಕಾಲಸಿಕ್ಕಲ್ಕದಕ್ಕದಿಸಿದುದು ಭೂಮಿಕ- ।
ಣ್ಣಾಲಿಯುಂ ತೆರೆಯೆ ಕಾಸಿದ ಕಪ್ಪರದ ತೆರಂ ।
ನಾಲಗೆಯು ನೀಡೆ ಕಡಲಂ ನೆಕ್ಕುವಂದದಾಸ್ಫೋಟನಂಗೆಯ್ಯಲಾಗ ॥
ಕಾಲರುದ್ರನ ಕಯ್ಯ ಢಕ್ಕೆ ಕೈನೀಡಿ ದಿ- ।
ಗ್ಜಾಲಮಂ ಮುಟ್ಟುವುವು ಮಂಡೆಸುತ್ತಾದುದಾ ।
ಮೇಲಣ ಮುಗಿಲ್ವಟ್ಟೆಯಿಂತಪ್ಪ ಭೀಕರಾಕಾರಮಂ ತಳೆದು ನಿಂದು ॥ ೬೧ ॥
ಎಲವೊ ಸಮ್ಯಕ್ತ್ವಚೂಡಾಮಣಿಯುನೀ ತೆರದಿ ।
ನಲಿಪಡಿಸಿ ಸಂಕಟಂ ಬಡಿವುದೌಚಿತ್ಯಮೇಂ ।
ಛಲದಂಕನವನ ಚರಣವನು ಮಡುವಂ ಹೊಕ್ಕ ಮುಂಡಿಕೆಯ ಮೃದುಪದವನು ॥
ಸಲೆಭಕ್ತಿಯಿಂದ ವಂದನೆಗೆಯ್ಯದೊಡೆ ನಿನ್ನ ।
ತಲೆಗೊಂಬೆನೆಂದು ದಡಿಗುಂಡುಬಡಿಯಂ ಕೊಂಡು ।
ನೆಲದಿನಾಕಾಶಂಬರಂ ಬೆಳೆದು ಘುಡುಘುಡಿಸಿ ಬೆದರಿಸುತ್ತಿರಲು ಕಂಡು ॥ ೬೨ ॥
ದಬ್ಬುದಲೆಗೊಂಬ ವಾರಣವಾಹಕಪ್ರತತಿ ।
ತಬ್ಬಿಬ್ಬುಗೊಂಬ ತುರಗಾರೋಹಕಪ್ರತತಿ ।
ಬೆಬ್ಬಳಿಸಿ ಬಿಳ್ದು ಬಿಲ್ಲುಂ ಬೆರಗುವಟ್ಟುನಿಂದಾ ಮಹಾರಥಸಂತತಿ ॥
ತಿಬ್ಬಳಿಯಡಂಗಿಬಿಳ್ವಾ ವೀರಭಟವಿತತಿ ।
ಸಿಬ್ಬದಿಗೊಳುತ್ತ ಸಿಡಿಮಿಡಿಗೊಂಬ ನೃಪಸಮಿತಿ ।
ಯುಬ್ಬರಂಗೊಂಡಿದೆಲ್ಲಿಯುಮಿಳ್ಳುವೆಮಗೆಂದು ಭಗದತ್ತ ಧರಣೀಪತಿ ॥ ೬೩ ॥
ಹಾವಡರ್ದ ಹಂದೆಯಂದದಿ ಹಮ್ಮದಂಬೋಗಿ ।
ಜೀವಪ್ರತಿಷ್ಠೆಯಂ ಮಾಡೆಂದು ಜಿತಶತ್ರು- ।
ಭೂವರನ ಪದಪದ್ಮಕೆರಗಿಯಾತಂಬೆರಸಿ ನೀರುಪ್ಪರಿಗೆಯ ಮೇಲೆ ॥
ತಾವರೆಯ ಕರ್ಣಿಕೆಯ ಸಿರಿಯುಂದದ ವೊಲಿರ್ಪ್ಪ ।
ಭಾವೆಯ ಪದಕ್ಕೆರಗಿ ನೀನೆನ್ನ ದೋಷಮಂ ।
ಭಾವಿಸದೆ ತಲೆಗಾವುದೆಲೆ ಮಾತೆ ಎಂದು ಕರಯುಗಲಮಂ ಮುಗಿದು ನಿಲಲೂ ॥ ೬೪ ॥
ಪಾಪಿ ನಾನೊಂದು ಜೀವಕ್ಕಾಗಿ ಯೆಲೆ ಮೇದಿ- ।
ನೀಪಾಲಕರಿರಾ ನಿಮ್ಮಿರ್ವರ್ಗಗ್ಗವಿಾತೆರದಿ- ।
ನಾಪತ್ತುಬಂದಿತಲ್ಲಾ ಇದಂ ಕ್ಷಮಿಯಿಸಿಮೆನುತ್ತವರ ಸಂತವಡಿಸಿ ॥

ಆ ಪುಣ್ಯವಂತೆ ಮುಂಡಿಕೆ ಮುನ್ನಕೀಲಿಸಿ- ।
ದರ್ದ್ದ ಪಡೆಯನಾ ನಗರದೇವತೆಗಳಿಂ ಬಿಡಿಸ- ।
ಲಾ ಪವನಪಥದಲ್ಲಿ ಪಂಚಾಶ್ಚರ್ಯ್ಯವಾದುದೆಲ್ಲರಾಶ್ಚರ್ಯ್ಯವಡಲು ॥ ೬೫ ॥
ಅಂತದಂ ಕಂಡು ನಿರ್ವ್ವೇಗಪರನಾ ಮಹೀ- ।
ಕಾಂತ ಭಗದತ್ತನಾ ಜಿತಶತ್ರುಭೂಪಾಲ- ।
ಗಿಂತೆಂದನತ್ತ್ಯತ್ತಮಂಬಡೆದ ಧರ್ಮ್ಮದಿಂದಗ್ಗಳಮದಾವುದೆನಲು ॥
ಸಂತಸಂಬಟ್ಟು ಬಳಿಕಾ ನುಡಿಯ ಕೇಳಿ ತಾ- ।
ನಿಂತೆಂದನಾ ವಿಮಲಧರ್ಮದ ಮಹಾತ್ಮೆಯುಮ- ।
ನಂತಿಂತುಟೆಂದೂಹಿಸಲ್ಬಲ್ಲನೀರನವನಾರು ಧರಣೀತಳದೊಳು ॥ ೬೬ ॥
ಎಂದು ಸದ್ಧರ್ಮ್ಮದ ಮಹಾತ್ಮೆಯಂ ಪೊಗಳಲಾ- ।
ನಂದದಿಂ ಭಗದತ್ತ ಭೂಪಾಲಕಂ ತನ್ನ ।
ನಂದನಂಗರಸುಪಟ್ಟಂಗಟ್ಟಿ ಬೆನ್ನಬಿಡದೆಯ್ದೆಯರಿಕೆಯ ಭೂಪರಾ ॥
ಗೊಂದಣಂ ಶ್ರೀಮತಿವೆಸರ ಪಟ್ಟದರಸಿ ತ- ।
ನ್ನೊಂದಾಗಿ ಬರಲಾಶ್ರುತಾಬ್ಧಿಯೆಂದೆಂಬ ಮುನಿ- ।
ವೃಂದಾರಕರಪದೋಪಾಂತದೊಳ್ ಪ್ರಾವ್ರಾಜ್ಯಮಂ ತಳೆದನಿಳೆಪೊಗಳಲು ॥ ೬೭ ॥
ಧಾತ್ರೀಪತಿಗಳು ಪಲಬರ್ನ್ನಿಜಸ್ತ್ರೀಕನಕ- ।
ಚಿತ್ರಾಮಹಾದೇವಿ ಸಜ್ಜನಸ್ತುತೆ ಸತ್ಪ- ।
ವಿತ್ರೆ ಮುಂಡಿಕೆಯೊಡನೆ ವೈರಾಗ್ಯಪರರಾಗಿ ಬೆಂಬತ್ತಿ ಬರಲು ತನ್ನಾ ॥
ಪುತ್ರಂಗೆ ರಾಜ್ಯಮಂ ಕೊಟ್ಟು ತನ್ಮುನಿಯ ಶತ- ।
ಪತ್ರಪಾದೋಪಾಂತದಲ್ಲಿ ದೀಕ್ಷೆಯನು ಜಿತ ।
ಶತ್ರುಭೂಪಾಲಕಂ ಕೈಕೊಂಡನೀಲೋಕವಾಲೋಕಮರಿವ ತೆರದಿ ॥ ೬೮ ॥
ಅವೂರೊಳರ್ದ್ಧವರ್ಸ್ಸವ್ಯಕ್ತ್ವಪೂರ್ವ್ವಕಂ ।
ಶ್ರಾವಕವ್ರತಮನನುಕರಿಸಿದರ್ಕೆಲರು ಸ- ।
ದ್ಭಾವದೊಳ್ ಲೋಕಕಿದುವೇ ಧರ್ಮ್ಮವೆಂದು ಪರಿಣಾಮಿಸಿದರದುಕಾರಣಾ ॥
ಆವರಿಸಿತೆನ್ನ ಮನದಲ್ಲಿ ಸಮ್ಯಕ್ತ್ವಮೆಂ- ।
ದಾ ವನಜವದನೆ ನಾಗಶ್ರೀಯ ನುಡಿಗೇಳಿ- ।
ಯಾ ವೈಶ್ಯತಿಲಕನರ್ಹದ್ದಾಸನಾ ಸತಿಯರೆಲ್ಲರಿಚ್ಛಾಮಿಯೆನಲು ॥ ೬೯ ॥
ಕಿರಿಯ ಸತಿ ಕುಂದಲತೆಯಿಂತು ನುಡಿದಳಿದು ।
ಲೌಕಿಕಮಿದಕ್ಕೆ ನಾನೊಡಬಡುವುದಿಲ್ಲೆಸ- ।
ಲ್ಭೊಕಾಂತನಾ ಸಚಿವರಿಂತೆಂದರಿದಕೆ ಯಿಚ್ಛಾಕಾರಮಂ ಮಾಡದಾ ॥
ಈ ಕುದೃಷ್ಟಿಯನುದಯುದಲ್ಲಿ ಊರರಿಕೆಯೊ- ।
ಳ್ಳಾಕುಮಾಡಿಸಿ ನಮ್ಮ ನಗರಿಯಂ ಪೊರಮಡಿಸ ।
ಬೇಕೆನುತ್ತಿರಲು ಮತ್ತಾ ಚೋರನಿಂತೆಂದ ತನ್ನ ಸದ್ಭಾವದೊಳಗೆ ॥ ೭೦ ॥

ಸೊಗಯಿಸುವ ತನಿವಾಲಬಿಟ್ಟು ನೆಲವೊಲೆಯಲ್ಲಿ ।
ಮೊಗಮನಿಟ್ಟಲ್ಲದರುಣಾಂಬುವಂ ಸೇವಿಸುವ ।
ಜಿಗುಳೆಗಾ ಗುಣಮೇ ಸ್ವಭಾವಮುತ್ತಮಗುಣಕ್ಕೆಳಸದೆ ನಿಕೃಷ್ಟಜನವು ॥
ಮಿಗೆಮನಂಗೊಡುವರೆನುತಿರಲಿಭ್ಯಕುಲತಿಲಕ- ।
ನಗಣಿತಗುಣಾಭರಣನನುಪಮಚರಿತ್ರ ಭೂ- ।
ಜಗವಿನುತನೆಸೆದನರ್ಹದ್ದಾಸ ಜಿನಸಮಯವಾರ್ಧಿವರ್ಧನಚಂದ್ರನು ॥ ೭೧ ॥

ಇದು ವಿಬುಧಜನವಿನುತಮಿದು ವಿಬುಧಜನವಿನತ- ।
ಮಿದು ವಿಧಿತಜಿನಸಮಯಶರಧಿಸಂಪೂರ್ಣೇಂದು ।
ಸದಮಲಯಶಸ್ಕಾಂತ ಯದುವಂಶನೃಪರ ಸಚಿವಾನ್ವಯಾಂಬರಹಂಸನು ॥
ಮದನಸಮರೂಪನುತ್ತಮಗುಣಕರಂಡಕಂ ।
ಚದುರಮಂಗರಸನುಸಿರ್ದೀ ಕೌಮುದೀಕಥೆಯೊ- ।
ಳೊದವಿರಂಜಿಸಿದುದಭಿನವಚಂಡಿಕೆಯ ಮುಂಡಿಕೆಯ ಕಥನವೆಂಟನೆಯ ಸಂಧಿ ॥ ೭೨ ॥

ಅಂತು ಸಂಧಿ ೮ಕ್ಕಂ ಪದ ೫೩೪ಕ್ಕಂ ಮಂಗಳಮಹಾ ।

---



# ಒಂಭತ್ತನೆಯ ಸಂಧಿ.

## ಪದ್ಮಶ್ರೀಯ ಕಥೆ.

ಶ್ರೀಮದರ್ಹದ್ವಾಸವೈಶ್ಯವಿಭುಕೇಳಲಾ ।
ತಾಮರಸಮುಖಿ ಪದ್ಮಲತೆ ಕರಯುಗಂಗಳಂ ।
ಪ್ರೇಮದಿಂ ಮುಗಿದು ತನಗಾದ ಸಮ್ಯಕ್ತ್ವಮಂ ಬಿನ್ನಪಂಗೆಯ್ದಳಿಂತು ॥ ಪಲ್ಲ ॥
ಇಂಬುವಡೆದಂಗದೇಶದ ಮಧ್ಯದೊಳು ಚಂಪೆ- ।
ಯೆಂಬ ಪುರದೊಳ್ ದಾಡಿವಾಹನವೆಸರ ನೃಪತಿ- ।
ಯಂಬುರುಹವದನೆ ಪದ್ಮಾವತಿವೆಸರ ಸುದತಿಗೂಡಿ ಸುಖಿಸಿರ್ಪನಲ್ಲಿ ॥
ಶಂಬರರಿಪುಧ್ವಂಸಭಕ್ತಂ ವಿಮಲದಾಸ- ।
ನೆಂಬವಂಗವನ ಸತಿ ಪದ್ಮೆಗಂ ಜನಿಸಿ ಶಶಿ- ।
ಬಿಂಬನಿಭವದನೆ ಪದ್ಮಶ್ರೀವೆಸರನಾಂತು ಬೆಳೆದು ಜವ್ವನವಡೆದಳು ॥ ೧ ॥
ತಳಿರ್ವಜ್ಜೆ ತಾರಾಳಿನಖ ಕೂರ್ಮಪಾದ ಪೊಳೆ- ।
ವೆಳೆವಾಳೆದೊಡೆ ತೋರಪೊರವಾರು ತನುಮಧ್ಯ ।
ಸುಳಿನಾಭಿ ಸೊಗಯಿಸುವ ತಿವಳಿ ಬಡಬಾಸೆ ಬಲ್ಮೊಲೆ ಕಂಬುನಿಭಕಂದರ ॥
ನಳಿತೋಳ್ಗಳಬ್ಜಮುಖಬಿಂಬ ಬಿಂಬಾಧರಂ ।
ತಿಲಕುಸುಮನಾಸಿಕ ವಿಶಾಲಾಕ್ಷಿ ಕುಡುಪುರ್ಬ್ಬ ।
ತೆಳುಗದಪು ಹೆರೆನೊಸಲ್ತುಂಬಿಗುರುಳ ಲಘುತರಕಬರಿ ಕಣ್ಗೆಸಿಯಿತವಳಾ ॥ ೨ ॥
ಪದ್ಮನೇತ್ರಂ ಪದ್ಮಕರ್ಣಿಕಾ ನಾಸಿಕಂ ।
ಪದ್ಮರಾಗಾಧರಂ ಪದ್ಮವದನಂ ಕನಕ ।
ಪದ್ಮಕೋರಕಕುಚಂ ಪದ್ಮಲತಿಕಾಬಾಹು ಪದ್ಮಾಂಘ್ರಿ ಪದ್ಮಹಸ್ತಂ ॥
ಪದ್ಮಪ್ರಸೂನೋತ್ತಮಾಮೋದಮುಲ್ಲಸಿತ ।
ಪದ್ಮಿನೀಜಾತಕಂ ತನಗಾಗೆ ಸಿರಿಯಿಂದೆ ।
ಪದ್ಮೆಗೆಣೆಯಾಗಿ ಪದ್ಮಶ್ರೀವೆಸರನೆ ತಾಂ ಪಡೆದಳನ್ವರ್ಥದಿಂದ ॥ ೩ ॥
ಆ ವನಿತೆಯೊಂದುದಿನಮುಖದೊಳ್ಪ್ರಮೋದದಿಂ- ।
ದಾಪೂರ ಮಧ್ಯದೊಳ್ ಕಡುಶೋಭೆಯಿಂ ಪಡೆದ ।
ಶ್ರೀವಾಸುಪೂಜ್ಯತೀರ್ಥಂಕರರ ಹೊಚ್ಚಹೊಸ ಹೊನ್ನಕೆಲಸದ ಬಸದಿಗೆ ॥
ಭಾವಜನಸತ್ಕೀರ್ತಿವಧು ನಡೆದು ಬರ್ಪಂತೆ ।
ಭಾವಶುದ್ಧಿಯೊಳು ಬಂದೊಳಹೊಕ್ಕು ಪೂಜೆಯಂ ।
ಸಾವಧಾನದೊಳು ಸದ್ವಿಧಿಪೂರ್ವಕಂ ಮಾಡುತಿರಲು ಮತ್ತಾಪುರದೊಳು ॥ ೪ ॥

ಬುದ್ಧದರ್ಶನದಲ್ಲಿ ಬದ್ಧಹೃದಯಂ ವೈಶ್ಯ ।
ಬುದ್ಧದಾಸಂಗೆ ಮತ್ತಾತನ ಮನೋರಮಣಿ ।
ಬುದ್ಧದಾಸಿಗೆ ಜನಿಸಿ ಸರ್ವವಿದ್ಯಾಕಲಾಸಂಪನ್ನನಾಗಿ ಬೆಳೆದು ॥
ಬುದ್ಧಸಂಘಂ ಮನೋಹರರೂಪಲಾವಣ್ಯ ।
ವೃದ್ಧಿಯಂ ತಳೆದು ಯೌವನನಾಗಿ ಜಗದೊಳ್ಪ್ರ- ।
ಸಿದ್ಧತ್ವಮಂ ಪಡೆದು ಬಳಿಕವನಾದಿನ ತಜ್ಜಿನಾಲಯಕೆ ಬಂದು ನಿಲಲು ॥ ೫ ॥
ಶಚಿಮಹಾದೇವಿ ಸದ್ವಿಧಿಯಿಂದ ಪೂಜೆಯಂ ।
ರಚಿಯಿಸುವ ತೆರದಿನತ್ಯಂತಮುದದಿಂ ಮನೋ- ।
ವಚನಕಾಯವಿಶುದ್ಧಿಯಲ್ಲಿ ನಿರವದ್ಯಮಪ್ಪರ್ಚನಾದ್ರವ್ಯದಿಂದ ॥
ಶುಚಿಶುದ್ಧಸಮ್ಯಕ್ತ್ವಗುಣಮಣಿಗಣಾಭರಣೆ ।
ಸಚರಾಚರೋರ್ವೀಶವೀತರಾಗಾಂಘ್ರಿಯಂ ।
ಪ್ರಚುರತರ ವೈಭವದಿನೀಕ್ಷಿಸುವರಕ್ಷಿದಣಿವಂತೆ ಮಾಡುತ್ತಿರ್ದಳು ॥ ೬ ॥
ಸುರಭಿಸಮ್ಮಿಶ್ರನಿರ್ಮಲತೀರ್ಥವಾರಿಯಿಂ ।
ವರಮಧುರರಸಭರಿತ ಫಲಪಾನಕಂಗಳಿಂ ।
ನಿರವದ್ಯ ರಸರೂಪಗಂಧಪ್ರಯುಕ್ತ ಸಲ್ಲಲಿತ ಗೋಘೃತಧಾರೆಯಿಂ ॥
ಸುರುಚಿರ ಸುಧೋಪಮಾನಕ್ಷೀರದಿಂ ಮನೋ- ।
ಹರತರ ಶರದ್ಘನಸಮಾನ ದಧಿಯಿಂ ಕರಂ ।
ನಿರುಪಮವಿಲಾಸಯುತೆ ನಿತ್ಯತೃಪ್ತಂಗೆಯಭಿಷೇಕಮಂಗೆಯ್ದಳಾಗ ॥ ೭ ॥
ನಗೆಮೊಗದ ನಾರಿ ನವವಿಧತೀರ್ಥಜಲಮನಾ ।
ಮಗಮಗಿಪ ಮೈಗಂಪಿನಬಲೆ ಗಂಧವನು ।
ಧಗಧಗಿಪ ದಶನದ್ಯುತಿಯ ನೀರೆ ಧವಲಾಕ್ಷತೆಯ ಫುಲ್ಲಾಕ್ಷಿಪುಷ್ಪಗಳನು ॥
ಸೊಗಸುವಾತಿನ ಸುಭಗೆ ಸವಿವಡೆದ ಭಕ್ಷ್ಯಮಂ ।
ಸುಗುಣಮಣಿ ಮಣಿದೀಪಮಂ ಸಣ್ಣಸುಯ್ಲ ಸತಿ ।
ಪೊಗೆಗಂಪನಾ ಬಿಂಬಫಲನಿಭಾಧರೆ ಫಲಮನಭಗವಗರ್ಚನೆಗೆಯ್ದಳು ॥ ೮ ॥
ಆಕ್ಷೇಪದಿಂದ ಮೊದಲರಿಯದೆ ನಿನಗೆ ಸಮ- ।
ರಕ್ಷೋಣಿಯಲ್ಲಿ ಯಿದಿರಾದೆನ್ನ ಪತಿಗುತ್ತ- ।
ಮ ಕ್ಷಮಾಭಾವವನೆ ಮೆರೆದು ನಿಂ ಪ್ರಾಣಪ್ರತಿಷ್ಠೆಯಂ ಮಾಳ್ಪದೆಂದು ॥
ಸಾಕ್ಷಾತ್ಪ್ರಸೂನಾಯುಧನ ಮಡದಿ ಮೂಲೋಕ ।
ರಕ್ಷಾಮಣಿಯ ಪದಕ್ಕೆರಗುವಂದದಿ ಪಂಕ- ।
ಜಾಕ್ಷಿ ಪದ್ಮಶ್ರೀ ಮನೋರಾಗದಿಂದ ಸಾಷ್ಟಾಂಗವಿನಮಿತೆಯಾದಳು ॥ ೯ ॥
ಆಕೆಯನನಂಗಚಕ್ರೇಶನ ಪರಾಕ್ರಮ ಪ- ।
ತಾಕೆಯಂ ಪ್ರದ್ಯುಮ್ನಶರಸದೃಶ ವಿಲಸಿತ ವಿ- ।
ಲೋಕೆಯಂ ವಿಶ್ರುತವಿಲಾಸವತಿಯಂ ಮನೋಭವನಿಧಾನದ ಬಯ್ಕೆಯಂ ॥

ಈಕೆಯಿನ್ನೇಕೆಂದು ರತಿಯನಂಗಜನಿಂದ ।
ಸಾಕೆಂದೆನಿಸಿ ತಿರಸ್ಕಾರಮಂ ಮಾಡಿಸುವ ।
ಲೋಕೈಕರೂಪೆಯಂ ಬುದ್ಧಸಂಘಂ ನೋಡಿ ನನೆಯ ಶರಕೊಳಗಾದನು ॥ ೧೦ ॥
ಲಲನಾಮಣಿಯ ಲಲಿತ ಲಾವಣ್ಯಸರಸಿಯೊಳ- ।
ಗೆಳವಾಳೆಯಂತೆ ತೊಳತೊಳಪ ನಗೆಮೊಗಮೆಂಬ ।
ವಿಲಸದ್ವಿಮಲಸುಧಾಸೂತಿಮಂಡಲದೊಳುನ್ಮದ ಚಕೋರಂಗಳಂತೆ ॥
ಥಳಥಳಿಪ ಬೊಗಸೆಗಣ್ಣೆಂಬ ನವತಾಮರಸ ।
ದಳಗಳೊಳಗಳಿಕಳಭದಂತೆ ನೆರೆ ನಲಿದುವಾ ।
ಅಲಸದೆವೆಯಿಡದೆ ನಡೆನೋಡುತಿರ್ಪ್ಪ ಬುದ್ಧಸಂಘನ ವಿಲೋಚನಗಳು ॥ ೧೧ ॥
ಸಾತಿಶಯಮಪ್ಪ ಸೌಭಾಗ್ಯವಂತೆಯನತಿ- ।
ಪ್ರೀತಿಯಿಂ ಮಿಗೆನೋಡುವಾ ವೈಶ್ಯನಂದನನ ।
ಕಾತರಿಪ ಚಿತ್ತ ಕರಗುವ ಲಜ್ಜೆಯೋಸರಿಸುವರಿವು ತಡಬಡಗುಟ್ಟುವಾ ॥
ಮಾತು ಮೈವಿಡದ ಬೆರಗಂ ಕಾಣುತಾ ಚಿತ್ತ- ।
ಜಾತನಲರಂಬುಗಳನಿಟ್ಟು ಕರ್ವ್ವಿನಬಿಲ್ಗೆ ।
ಭೂತಳದೊಳಂಬುಗೂಡಾಗಿಬಿಳ್ವಂತೆ ಕೆಡೆಕೆಡೆಯೆನುತ್ತೆಚ್ಚನಾಗಾ ॥ ೧೨ ॥
ಅಲರಂಬಹೊತ್ತುಹೊಮ್ಮಿರಿದು ಬೆಳ್ದಿಳ್ದ ನಿಜ ।
ನಿಲಯಕ್ಕೆ ಬಂದಶೋಕೆಯ ತಳಿರ ತಲ್ಪದೊಳ್ ।
ಮಲಗಿ ಮಲಯಜದ ಚರ್ಚ್ಚೆಯನಿಕ್ಕಿ ಪೊಚ್ಚಪೊಸಪನಿನೀರಧಾರೆಯೆರೆದು ॥
ಲಲಿತಪ್ರಸೂನವೀಜನದೆಲರ್ಗ್ಗಂಗಮಂ ।
ಸಲಿಸಿ ಸಿರಪಚ್ಚೆವುಡಿಯ ತಳಿದುಕೊಂಡು ಸ- ।
ಲ್ಲಲಿತೆ ಪದ್ಮಶ್ರೀಯ ವಿರಹದಿಂದಾದವಸ್ಥೆಯೊಳೆ ಪೊರಳುತುಮಿರ್ದ್ದನು ॥ ೧೩ ॥
ಕರಿಯಕಬ್ಬಿನ ಬಿಲ್ಲೊ ಕುಡುವುರ್ವ್ವೊ ನಗೆಗಣ್ಣೊ ।
ಸುರಭಿಶರವೋ ಪಿಡಿದ ಪಳಯಿಗೆಯೊ ಮುಡಿಯೊ ಕೆಂ- ।
ಬರಲ ಕಂಡ್ಗೊರಡೊ ಚೆಲ್ಲಂದಳೆದ ಚೆಂದುಟಿಯೊ ಎಂಬ ಶಂಕಾಭಾವದಿ ॥
ಸ್ಮರಶಸ್ತ್ರಶಾಲೆಯಾದಂಗದಂಗನೆಯ ಬಂ- ।
ಧುರಮೂರ್ತಿಕಣ್ಮನಂ ಬಿಡಿಯೆ ಜನಿಯಿಸಿದವಸ್ಥೆ ।
ಯುರಿವೊಳಗುವರಿದು ಸುಡುವುದಿದೇನು ಚಿತ್ರವೋ ಭಾವಿಸಲ್ಕಾ ವಿರಹಿಯಾ ॥ ೧೪ ॥
ಬಿಸಿಲೊಳಗೆ ಬಿಸುಟ ಬಿರಿಮುಗುಳಂತೆ ತೀವ್ರಮ- ।
ಪ್ಪಸಮಶರಶಿಖಿಮುಖದಿ ಸಿಲುಕಿ ಗುಂಗುದಿಬಿಟ್ಟು ।
ನಸುಬಲಂಬಡೆಯಲಾ ಮಗನ ಮೊಗಮಂ ನೋಡಿ ಕೆಟ್ಟೆನಿನ್ನೇವೆನೆಂದು ॥
ಅಸವಳಿದು ಎಲೆ ಮಗನೆ ನಿನಗೆ ಬಂದನುವರಮ- ।
ನುಸಿರು ಮರೆಬೇಡೆಂದು ಕಟ್ಟುಮ್ಮಳಂಗೊಂಡು ।
ಬೆಸಗೊಂಡ ತಾಂಕೊಡನವಂ ಲಜೆದೊರೆದು ಬಳಿಕಿಂತೆಂದು ನುಡಿದನಾಗ ॥ ೧೫ ॥

ಎಲೆ ತಾಯೆ ಕೇಳು ನಿನ್ನೊಳಗೆ ಕರೆಮರೆಯೇಕೆ ।
ಯಲರಶರನಧಿದೇವತೆಯು ತೆರದಿನೊಪ್ಪುವಾ ।
ಲಲಿತಾಂಗಿ ವಿಮಲದಾಸನ ತನೂಜಾತೆ ಪದ್ಮಶ್ರೀಯು ರೂಪುಗಂಡು ॥
ಸಲೆಸೋಲ್ತೆನದರಿಂದ ಮೆಯ್ಮರಂಬಡವಾಯಿ- ।
ತಲವರಿಕೆಯಿಂ ಮಾಡದವಳನೇ ನನಗೆ ನೀ ।
ವೊಲಿದು ಮದುವೆಯು ಮಾಡದಿರ್ದೊಡೆ ದಶಾವಸ್ಥೆಯಿಂದೆನಗೆ ಸಾವಪ್ಪುದು ॥ ೧೬ ॥
ಎಂಬ ನುಡಿಯಂ ಕೇಳಿ ಯೆದೆಹಳಿರೆಂದು ಮಿಗೆ ಹಮ್ಮ ।
ದಂಬೋಗಿ ಎಲೆ ಮಗನೆ ಹೇಳವ ಮಾನಿಸ ಹಣ್ಗೆ ।
ಹಂಬಲಿಸುವಂತಾಯ್ತು ನಿನ್ನೇಣಿಕೆಯೆಂದದಂ ತನ್ನ ಗಂಡನೊಳುಸಿರಲು ॥
ತಿಂಬುಂಬ ಸಮಯಮೆಮ್ಮದು ನಮ್ಮ ನಡೆಯುವ- ।
ಗ್ಗಿಂಬಾಗದಾ ಮೂಲಸಂಘದವರತಿನೀಚ- ।
ರೆಂಬರದರಿಂದವರ ಹೆಣ್ಣ ಬೇಡುವುದು ನಮಗುಚಿತಮಲ್ಲೆನಲು ಕೇಳಿ ॥ ೧೭ ॥
ಪಿರಿದನಾಡಲದೇಕೆ ಪೀವರಸ್ತನೆಯುಸತಿ ।
ಭರದಿಂದ ಮದುವೆ ಮಾಡದೊಡೆ ನನಗುಳಿವಿಲ್ಲ ।
ನಿರುತಮೆಂಬಾ ನುಡಿಯು ಕೇಳಿ ನಿಜನಂದನಂಗೆಂದನಾ ಬುದ್ಧದಾಸಂ ॥
ತರಹರದಿನತಿಶೈತ್ಯವತಿಮೃದುವನುಳ್ಳನೀ- ।
ರಿರದೆ ಪಾತಾಳಮಂ ಭೇದಿಸುವುದದರಿಂದ ।
ತರುಣ ಕೇಳ್ಕ್ಷಮಮಂ ಮಾಡಿದೊಡೆ ತಾ ನೆನೆದ ಕಾರ್ಯ್ಯಮಪ್ಪುದು ತಪ್ಪದೆ ॥ ೧೮ ॥
ಎಂದು ಮಗನಂ ಸಂತಸವಡಿಸಿ ಜಿನಮಂದಿರಕೆ ।
ಬಂದು ಕಪಟದಿ ಯಶೋಧರಮುನಿಯ ಪಾದಾರ- ।
ವಿಂದಕ್ಕೆ ನಮಿಸಿ ಎಲೆ ಮುನಿನಾಥ ನಾನಿತು ಕಾಲವಲ್ಲದ ಸಮಯವಾ ॥
ಮುಂದರಿಯದೇ ಪೊದ್ದಿ ಗತಿಗೆಟ್ಟು ಪೋದೆನದ- ।
ರಿಂದ ಲೋಕೋತ್ತರವೆನಿಪ್ಪ ನಿನ್ನೀ ಸಮಯ- ।
ದೊಂದು ಸುವ್ರತಮನೀಯಲ್ಬೇಕೆನುತ್ತವಂ ಕೈಕೊಂಡು ಮನೆಗೆ ಬಂದು ॥ ೧೯ ॥
ಗರಳಮಂ ಬಿಡದೆ ಹೆಡೆಯುಂ ಬಿಸುಡುವಹಿಯಂತೆ ।
ದುರುಳನವನಂತರಂಗದ ದೋಷಮಂ ಬಿಡದೆ ।
ಪಿರಿದು ಕಪಟದಿ ತನ್ನ ಮೊದಲವೇಷವ ಬಿಟ್ಟು ಸದ್ದರ್ಶನವ್ರತವನು ॥
ಧರಿಸಿ ನಡೆಯುತ್ತಿರಲ್ಕಾ ವಿಮಲದಾಸನುರು- ।
ತರಮುದದಿನಿವನಂತೆ ಪರಮಧಾರ್ಮಿಕನಾರು ।
ಧರಣಿಯೊಳಗೆಂದವನಕೂಡೆ ಮೈತ್ರೀಭಾವಮಂ ಮಾಡಿ ಸುಖದಿನಿರಲು ॥ ೨೦ ॥
ಅಂದವಡೆದೀ ತೆರದಿ ಸದ್ಧರ್ಮ್ಮವಾತ್ಸಲ್ಯ ।
ದಿಂದವಗತಿಸ್ನೇಹಮಂ ಮಾಡಿಕೊಂಡಿರಲ್ ।
ನಂದೀಶ್ವರನೋಂಪಿ ಬರಲವನಕೂಡಿ ನೋಂಪಿಯನೆಂಟುಪಗಲುಮಾಡಿ ॥

ಅಂದಿನುಪವಾಸಾಂತರದ ಪಾರಣೆಯನು ಮನ- ।
ಸಂದೆಮ್ಮ ಮನೆಯಲ್ಲಿ ಮಾಡಬೇಕೆಂದು ಮುದ- ।
ದಿಂದ ತದ್ವಿಮಲದಾಸಶ್ರೇಷ್ಠಿಯಾ ಬುದ್ಧದಾಸನಂ ಸನ್ಮಾನಿಸಿ ॥ ೨೧ ॥
ಸಡಗರದಿ ಮಂದಿರಕ್ಕೊಡಗೊಂಡುಬಂದು ಸಂ- ।
ಗಡದಿನೊಂದೇ ಪಂಕ್ತಿಯಲ್ಲಿ ಕುಳ್ಳಿರಿಸಿ ಸವಿ- ।
ವಡೆದ ನಾನಾತೆರದ ಭಕ್ಷ್ಯಮಂ ಹೊಸಹೊನ್ನ ಹರಿಯಣದೊಳೆಡೆಮಾಡಿಸಿ ॥
ಕಡು ಬಳಲ್ದಿರಿ ಭೋಜನಂ ಮಾಡಿಯೆಂದೆಂಬ ।
ನುಡಿಗೇಳಿ ಯೆಡೆಯಲ್ಲಿ ಬುದ್ಧದಾಸಂ ಕಯ್ಯ- ।
ನಿಡದಿರಲ್ಸಂಶಯಂ ಬಟ್ಟದೇಕೆಂಬ ಸಜ್ಜನಬಂಧುಗಿಂತೆಂದನು ॥ ೨೨ ॥
ಎಲೆ ವೈಶ್ಯಕುಲತಿಲಕ ನಿನ್ನ ಸುಕುಮಾರಿ ಸ- ।
ಲ್ಲಲಿತೆ ಪದ್ಮಶ್ರೀಯನೆನ್ನ ನಿಜತನುಜಾತ- ।
ಗೊಲಿದು ಕೊಟ್ಟೊಡೆ ಭೋಜನಂ ಮಾಳ್ಪೆನಲ್ಲದೊಡೆ ನಿನ್ನಮನೆಯೊಳಗುಣಿಸನು ॥
ನೆಲೆಯಾಗಿಮಾಳ್ಪುದಿಲ್ಲೆಂಬ ನುಡಿಗೇಳಿ ನಿ- ।
ರ್ಮಲಹೃದಯನಾ ವಿಮಲದಾಸನಿಂತೆಂದನಾ ।
ಖಳನೊಡನೆ ಶುದ್ಧಸಮ್ಯಗ್ದೃಷ್ಟಿ ನಿನಗೆ ಮಗಳಂ ಕುಡುವುದಕ್ಕೆಣಿಕೆಯೇ ॥ ೨೩ ॥
ಎಂದು ನುಡಿದೊಂದು ಪಂಕ್ತಿಯೊಳೂಟಮಂ ಮಾಡಿ ।
ಸಂದಹರ್ಷದಿ ಮನೆಗೆ ಬೀಳ್ಕೊಟ್ಟು ಬಳಿಕ ಭರ- ।
ದಿಂದೊಂದು ಶುಭಮುಹೂರ್ತದೊಳು ಪದ್ಮಶ್ರೀಯನಾ ಬುದ್ಧಸಂಘಗೊಲಿದು ॥
ಮುಂದೇತರಪ್ರಿಯದಿ ಮದುವೆಯಂ ಮಾಡಿ ಪಲ- ।
ವಂದದಡುವಲಿಗೊಟ್ಟು ನಿಜಸುತೆಯನಾ ಅಳಿಯ- ।
ನೊಂದಾಗಿ ಕಳುಹಿ ನಿಶ್ಚಿಂತದಿಂದಾ ವೈಶ್ಯವಿಭು ವಿಮಲದಾಸನಿರಲು ॥ ೨೪ ॥
ಅತ್ತ ಕಾಪಟ್ಯಹೃದಯಂ ಬುದ್ಧದಾಸನಾ ।
ವೃತ್ತಮುವ್ರತವ ಕೆಲದಿವಸದಿಂದಂ ಮೇಲೆ ।
ಪತ್ತುವಿಟ್ಟಾ ತನ್ನ ಬುದ್ಧಸಮಯದ ದುಶ್ಚರಿತ್ರಮಂ ಹೊದ್ದೆ ಕಂಡು ॥
ಎತ್ತಣಿಂದೆತ್ತಬಂದಿತ್ತು ಎನಗಜ್ಞತೆಯೆ- ।
ನುತ್ತ ವೊತ್ತರವೊತ್ತಿದಂತೆ ಬಾಳ್ದವನಲ್ಲ ।
ಸತ್ತವನುಮಲ್ಲದಾ ವಿಮಲದಾಸಂ ಮಗಳ ಪಾಪನೀತೆರನಾದುದು ॥ ೨೫ ॥
ಎನುತ ತನ್ನಜ್ಞತೆಗೆ ಯವನಸಿಕ್ಕುಸುಗುಂಟು- ।
ತನಕೆ ತಾನೇ ನಾಣ್ಚಿ ವಿಮಲದಾಸಂ ತನ್ನ ।
ಮನದೊಳೆಣಿಸುತ್ತಿರಲ್ಕತ್ತಲಾ ಖಳನ ನಿಜಗುರು ಪದ್ಮಸಂಘನೆಂಬಾ ॥
ಅನುಮಾನಶಾಸ್ತ್ರಯುತನಾ ಮನೆಗೆ ಬಂದು ಜನ- ।
ವಿನುತೆ ಪದ್ಮಶ್ರೀಯೊಳಿಂತೆಂದನವನಿಯೊಳ್ ।
ಘನತರಂಬಡೆದುದೆಮ್ಮ ಸಮಯಮಲ್ಲದೆ ಮತ್ತೊಂದು ಸಮಯಮಿಲ್ಲ ॥ ೨೬ ॥

ಅದನರಿದು ನಮ್ಮ ಸಮಯಮನಾಚರಿಸು ಮುದದಿ- ।
ನಿದರಿಂದ ಕೈವಲ್ಯವಹುದೆಂದೆನಲ್ಕೇಳಿ ।
ಸದಮಲಚರಿತ್ರನಿಧಿ ಸುಭಗೆ ಪದ್ಮಶ್ರೀಯುವನೊಳಿಂತೆಂದು ನುಡಿದಳಾಗ ॥
ಅದುಲೇಸು ಮದ್ಯಮಾಂಸವನು ತಿಂಬುಂಬ ಸಮ- ।
ಯದೊಳುಂಟೆ ಮುಕ್ತಿಮಾರ್ಗಂ ದಯಾಮೂಲಧ- ।
ರ್ಮದೊಳಲ್ಲದೇ ಅದಂ ಬಿಡುವುದಮೃತವಬಿಟ್ಟು ನಂಜುಂಬರಂತಪ್ಪುದು ॥ ೨೭ ॥
ಎನಲವಳ ನುಡಿಗುತ್ತರಂಗುಡುವುದಾಗದೇ ।
ಮನೆಗವಂ ಪೋಗೆ ಪದ್ಮಶ್ರೀಗುಣಾಬ್ಧಿಯಾ ।
ಮನೆಯಲ್ಲಿ ಕೂಳುನೀರಂ ಕೊಳ್ಳದಿರೆ ಕಂಡು ತತ್ಕ್ಷಂತಬುದ್ಧಸಂಘಂ ॥
ಮನೆವಾರೆಯುವಳೊಳತಿಸೋಲ್ತುಕಾರಣದಿಂದ ।
ವನಿತೆ ನಿನ್ನಾಚರಣೆಯಲ್ಲದೇ ಬೇರೊಂದು ।
ಕನಸುಮನಸಿನೊಳಿಲ್ಲವೆಂದವಳ ಸಂತಯಿಸಿಯಾಮನೆಯ ಸೀಮೆಯಲ್ಲಿ ॥ ೨೮ ॥
ಆರುಹೊದ್ದದ ತೆರದಿ ಬೇರೊಂದು ಮನೆಗಟ್ಟಿ ।
ಚಾರಿತ್ರವಂತೆಯೊಳ್ಸುಖವಾಳುತಿರಲತ್ತ ।
ಕಾರುಣ್ಯನಿಧಿ ವಿಮಲದಾಸಂಗೆ ರೋಗದಿಂದುತ್ತಮುಸಮಾಧಿಯಾಗೆ ॥
ವಾರಿರುಹವದನೆ ಪದ್ಮಶ್ರೀ ಕರಂ ದುಃಖ- ।
ವಾರಾಶಿಯೊಳ್ಮುಡಿಮುಳುಗುತಿರಲದನು ಕೇ-
ಳ್ದಾರಯ್ಯದವಳನುಪಚರಿಪೆನೆಂದವಳೆಡೆಗೆ ಗುರುಬುದ್ಧಸಂಘ ಬಂದು ॥ ೨೯ ॥
ತಾತನಳಿದುದಕೆ ತರಳಾಕ್ಷಿ ಚಿಂತಿಸಲೇಕೆ ।
ಭೂತಳದೊಳಾರ್ತ್ತಂದೆತಾಯಿತನುಜಾತ- ।
ರೀತೆರನನರಿಯಬೇಡವೆ ನಿನ್ನ ಜನಕನಳಿದೀ ಊರ ಕಾನನದೊಳು ॥
ಮಾತೇನು ಮೃಗವಾಗಿ ಜನಿಯಿಸಿದನವನೊಳಗೆ ।
ಪ್ರೀತಿಯಿಂ ಮಾಡಿ ಕರೆಕರೆಗೊಂಬರೇ ಜನವಿ- ।
ನೂತೆ ಕೇಳೆಂದೆಂಬ ಬುದ್ಧಗುರುವಿನೊಳಾ ಚರಿತ್ರನಿಧಿ ನುಡಿದಳಿಂತು ॥ ೩೦ ॥
ಹರಿಣಿಬಸಿರೊಳಗೆನ್ನ ಜನಕನುದಿಸಿದನೆಂಬ ।
ಪರಿಯನೀವೆಂತರಿವಿರೆನಲೆಂದನಾ ಬೌದ್ಧ ।
ಗುರು ತರುಣಿ ಕೇಳ್ನಮಗೆ ಕಾಲತ್ರಯಮನರಿವ ಬೋಧವುಂಟದು ಕಾರಣಾ ॥
ನಿರುತವಿೂ ತೆರನೆಂಬ ನುಡಿಗೇಳಿ ನಸುನಕ್ಕು ।
ಗರುವೆ ತನ್ನೊಳಗೆ ತಾನಿಂತೆಂದಳಾ ತಮ್ಮ ।
ದರುಶನದ ಕುರುಹನಾನರಿಯೆನೇ ಬೇರಬಲ್ಲವರಿಲೆಯ ಕುರುಹರಿಯರೇ ॥ ೩೧ ॥
ಎಂದೆಣಿಸಿ ಬಹಿರಂಗದೊಳಗೊಳ್ಳಿತಂ ನುಡಿದು ।
ಮಂದಿರಕೆ ಕಳುಹಿ ಪತ್ತೆಂಟು ದಿನಗಳ ಮೇಲೆ ।
ಯಿಂದೀವರಾಕ್ಷಿ ಪದ್ಮಶ್ರೀ ನಿಜಾಲಯಕ್ಕಾ ಬೌದ್ಧಗುರುವಾತನಾ ॥

ಒಂದಾಗಿಯವನ ಶಿಷ್ಯರುಗಳಂ ಕರಿಸಿ ನೀ- ।
ವಿಂದು ನನ್ನಾಲಯದೊಳೂಟಮಂ ಮಾಡಬೇ- ।
ಕೆಂದು ಸನ್ಮನಿಸಲವರತ್ಯಂತಹರ್ಷದಿಂ ಕುಳ್ಳಿರಲ್ಕಾ ಕೋಮಲೆ ॥ ೩೨ ॥
ಅವರೆಡದ ಕಾಲಕೆರಹುಗಳನೊರ್ವ್ವಳ ಕಯ್ಯೊ- ।
ಳವರರಿಯದಂದದಿಂ ತರಿಸಿ ಸಂಬಳಿಸಿ ಬಳಿ- ।
ಕವರ ವಿವರಮನಾರರಿಯದಂತೆ ಸಂಭಾರಮಂ ಹಾಕಿ ಪಾಕಗಳನು ॥
ಸವಿಯಪ್ಪ ತೆರದಿ ಹಸನಾಗಿ ಮಾಡಿಸಿ ಕರಂ ।
ಸವಿನಯದಿನೆಡೆಯ ಮಾಡಿಸಿ ತಂದುಕುಳ್ಳಿರಿಸಿ ।
ನವಭಕ್ಷ್ಯಗಳ ಮಧ್ಯದಲ್ಲಿ ಬಡಿಸಿದೊಡೆ ಸವಿಸವಿದುಂಡರತಿಹರ್ಷದಿ ॥ ೩೩ ॥
ಉಂಡು ಕಯ್ದೊಳೆದು ಕರ್ಪ್ಪೂರತಾಂಬೂಲಮಂ ।
ಕೊಂಡು ಕಸ್ತೂರಿಕಾಶ್ಮೀರ ಪನಿಸೀರು ಸಿರಿ- ।
ಖಂಡಾದಿಯಾದ ಸೌರಭ್ಯಲೇಪನಮುಮಂ ಧರಿಸಿ ಪದ್ಮಶ್ರೀಯನು ॥
ಕೊಂಡಾಡಿ ಪಲವು ಸೂಳೆಲೆಮಗಳೆ ನೀ ಮನಸು- ।
ಗೊಂಡೆಮ್ಮ ಸದ್ಗತಿಯನೀವ ಧರ್ಮ್ಮವನು ಕೈ- ।
ಕೊಂಡೊಡುತ್ತಮಮಪ್ಪುದೆಂದೊಡಂತೆಗೆಯ್ವೆನೆನೆ ಮನೋರಾಗದಿಂದ ॥ ೩೪ ॥
ವರಗೃಹಕೆ ಪೋಪೆವಾವೆಂದುಜ್ಜುಗಿಸಿ ತಮ್ಮ ।
ಚರಣರಕ್ಷೆಗಳೊಳೊಂದೊಂದು ತಾಮಾಮುನ್ನ- ।
ಮಿರಿಸಿದೆಡೆಯೊಳಗಿಲ್ಲದಿರೆ ಮರುಗಿಯಲ್ಲಿರ್ದ್ದಳೊರ್ವ್ವ ಚೇಟಿಯನು ಕೇಳೆ ॥
ಸರಸವೇ ನಿಮ್ಮೊಡನೆ ನಾನೆಂತು ಬಲ್ಲೆನೆನೆ ।
ತಿರುಗಿ ಮತ್ತಾ ಸತ್ಯವಂತೆಯಲ್ಲಿಗೆ ಬಂದು ।
ತರುಣಿ ನೀನರಿದುದಿಲ್ಲವೆ ನಮ್ಮ ಪದರಕ್ಷೆಗಳು ಹೋದ ಹೊಲಬನೆನಲು ॥ ೩೫ ॥
ಕಾಲತ್ರಯಜ್ಞಾನಿಗಳ್ನಾವೆನುತ್ತೆಂದು ।
ಕಾಲಗಂಡಯ್ಯನಾಮ್ಯಗವಾದನೆಂಬುದಂ ।
ಹೇಳುವೆಡೆಯಲ್ಲಿ ಸಾಮರ್ಥ್ಯರಾದವರೀಗ ನಿಮ್ಮೊಡವೆ ಹೋದಹದನಾ ॥
ಹೇಳಲಿಲ್ಲವೆಯೆನಲ್ಕವರು ಸುಮ್ಮನೆಯಿರಲ್ ।
ಬಾಲೆಯಿಂತೆಂದಳಾ ನಿಮ್ಮೊಡಲೊಳಿರ್ದ್ದವಂ ।
ಹೇಳಲರಿಯದರಿದಿರನೆಂತರಿವಿರೆನಲವರ್ನ್ನೀನೆಂತು ಬಲ್ಲೆಯೆನಲು ॥ ೩೬ ॥
ಗರುವೆ ಪದ್ಮಶ್ರೀ ನುಡಿದಳವರೊಳಿಂತೆಂದು ।
ಪರಮ ಜಿನಧರ್ಮಮಂ ಪೊರ್ದಿದಾ ಶ್ರಾವಕರು ।
ನಿರುಪಮಜ್ಞಾನವಿದರೆನಲದಂ ಪುಸಿಯೆನಲ್ಕನ್ನ ನುಡಿ ತೊದಲಾದೊಡೆ ॥
ಮರಳಿಸಿಯದಂ ನೋಡಿಮೆನಲವರ್ಬಾಯೊಳಗೆ ।
ಬೆರಲಿಕ್ಕಿವಾಂತಿಯಂ ಮಾಡಿಯೊಡಲಿಂ ಸುರಿದ ।
ಕೆರಹಿನಟ್ಟೆಗಳ ತುಂಡಂ ಕಂಡು ಪಿರಿದಾಗಿ ಕೊಕ್ಕರಿಸಿ ಚಿಃ ಎನುತವೆ ॥ ೩೭ ॥

ಕೌಟಿಲ್ಯದಿಂ ಸ್ನೇಹಮಂ ಮಾಡಿ ತನ್ನ ಮನೆ- ।
ಯೂಟಕ್ಕೆ ಕರಿಸಿ ನಮ್ಮಾ ವ್ರತಂಗೆಡಿಸಿದೀ ।
ತಾಟಗಿತ್ತಿಗೆ ತಕ್ಕುದಂ ಮಾಡಿಸದೊಡೆ ನಾಪೇತರವರೆಂದುಬಂದು ॥
ಕೂಟದರಸುಗಳೋಲಗದೋಳಿರ್ದ ನೃಪಗವಳ್ ।
ಚಾಟುತನದಿಂ ಮಾಡಿದಟಮಟವನುಸಿರೆ ಕೋ- ।
ಪಾಟೋಪದಿಂದಮಿಾಲಂಡೆಯಂ ಪೊರಮಡಿಸಿ ನಮ್ಮ ಪೊಳಲಿಂದಮೆಸಲು ॥ ೩೮ ॥
ತ್ವರಿತದಿ ತಳಾರರೆಯ್ತಂದು ಪದ್ಮಶ್ರೀಯು- ।
ನಿರಬೇಡವೆಂದೆನಲ್ಬುದ್ಧಸಂಘಂ ತನ್ನ ।
ವರಸತಿಯಕೂಡೆ ಪೊರಮಡುವುದಂ ಕಂಡು ತತ್ಪಿತೃ ಕೆಲವು ವಿತ್ತಮಿತ್ತು ॥
ಪುರದಿಂದ ಕಳುಹಿ ಪೊರಮಟ್ಟು ಬರುತಿರಲಲ್ಲಿ ।
ಪರದೇಶದಿಂ ಬಂದು ಪರದುಗೆಯ್ಯಲ್ಕೆಸುತ ।
ಪರದರಿಭದತ್ತನೀಶ್ವರದತ್ತನೆಂಬವರ್ಬಿಟ್ಟ ಬೀಡಿಂಗೆ ಬರಲು ॥ ೩೯ ॥
ಆ ವಣಿಗ್ವರೊಳಿಭದತ್ತನೆಂಬವನವರ- ।
ಸಾವಾಸಕೊಡಗೊಂಡು ಪೋಗಿಯಾಸತ್ಯಸಿಧಿ ।
ಲಾವಣ್ಯವಂತೆ ಪದ್ಮಶ್ರೀಯನಾ ತನ್ನ ಪೆಂಡಿರಿರ್ದೆಡೆಯೊಳಿರಿಸಿ ॥
ಆವಾಗಮಾ ಬುದ್ಧಸಂಘಂಗೆ ತನ್ನಂತೆ ।
ಭಾವಶುದ್ಧಿಯೊಳೂಟಮಿಾಹಮಂ ಮಾಡಿಸು- ।
ತ್ತೋವದೊಡಹುಟ್ಟಿದರ ಕಂಡಂತೆ ಕಂಡು ಬಂಧುತ್ವಮಂ ಬಲಿಯುತಿರಲು ॥ ೪೦ ॥
ಮತ್ತವರೊಳಿಭದತ್ತನಂ ಕೊಲಲ್ಬೇಕೆಂದೆ- ।
ನುತ್ತುಮಿಾಶ್ವರದತ್ತನತಿಕಪಟದಿಂದ ಬಗೆ- ।
ಯುತ್ತವನ ಭೋಜನಕೆ ಪಾಕಮಾಡುವಳೋರ್ವಳಂ ಕರೆದುಕೊಂಡು ಬಹಳ ॥
ವಿತ್ತಮಂ ಕೊಟ್ಟವಳನೊಡಬಡಿಸಿಕೊಂಡು ಬಳಿ- ।
ಕೊತ್ತಂಬದಿಂ ಕೊಲಲ್ಗರಳಮಂ ಕೊಟ್ಟೊಡವ- ।
ಳುತ್ತಮದ ಕಜ್ಜಾಯದೊಡವೆರಸಿಯಡುಗೆಯಂ ಮಾಡಿಯೆಡೆಮಾಡಲಾಗ ॥ ೪೧ ॥
ಜನವಿನುತ ನಿಭದತ್ತನಾ ಬುದ್ಧಸಂಘಸಂ ।
ವಿನಯದಿಂದರ್ಧವರ್ಸ್ಸಹವಾಸಿಗಳ್ವೆರಸಿ- ।
ಯನುರಾಗದಿಂದೆಡೆಯ ಮುಂದೆ ಕುಳ್ಳಿರಲವಳ್ಕರೆದು ಪದ್ಮಶ್ರೀಯನು ॥
ವನಿತೆ ಕೇಳಾನು ಬಿನ್ನಣದಿನಟ್ಟಡುಗೆಗಳ- ।
ನನುವಾಗಿ ನೀನೆ ಎಡೆಮಾಡೆಂದು ಹೇಳಿಯಾ ।
ವಿನುತಗುಣಮಣಿನಿದಾನೆಯ ಕಯ್ಯೊಳುಣಬಡಿಸುತಿರ್ದು ತನ್ಮಧ್ಯದಲ್ಲಿ ॥ ೪೨ ॥
ಗರಳಮಂ ಕೂಡಿಮಾಡಿದ ಹಿಟ್ಟ ಬೇರೆ ತೆಗೆ- ।
ದಿರಿಸಿಯವನೆಮ್ಮ ಸೆಟ್ಟಿಯರ್ಗಲ್ಲದೇ ನಿನ್ನ ।
ಪುರುಷ ಮೊದಲಾದವರ್ಗ್ಗಿಕ್ಕಬೇಡಾಯೆಂದು ಕೊಡಲವಳ್ಕೊಂಡು ಬಂದು ॥

ಗರುವೆಯುದಾರ್ಕ್ಷಿಣ್ಯಮಂ ಮಾಡಿ ಪಂಕ್ತಿಯೊಳ್ ।
ಪರಪಂಚಮಂ ಮಾಡೆ ದೋಷಮೆಂದೆಲ್ಲರ್ಗೆ ।
ಸರಿಯಾಗಿ ಬಡಿಸಲವರುಂಡು ಕಯ್ದೊಳೆವ ಸಮಯದೊಳು ವೈಮರೆದುರುಳ್ದರು ॥೪೩॥
ಅಂತದಂ ಕಂಡು ಪದ್ಮಶ್ರೀ ಕರಂ ನೋವ್ವ- ।
ತಿಂತೆಂದಳಕಟಕಟ ನಾನವಳ ನುಡಿಗೇಳಿ ।
ಸಂತಸದಿನುಣಬಡಿಸಲೊಡನೆ ನನ್ನೋಪನುಂ ಮೊದಲಾದ ಬಂಧುಜನವು ॥
ಅಂತಕನಿವಾಸಕೆಯ್ದಿದರಿದೆಲ್ಲಂ ನನ್ನ ।
ಪಿಂತಣಘವೈಸೆ ಇನ್ನೆನಗೆ ಜಿನದೀಕ್ಷೆಯ್ಯೇ ।
ಮುಂತಣಾಜ್ಜುಗವೆಂದು ನಿಶ್ಚಿಂತದಿಂ ಜಿನಸ್ಮರಣೆಯುಂ ಮಾಡುತಿರಲು ॥ ೪೪ ॥
ನೋಡಿರೆ ವಿಮಲದಾಸನ ಮಗಳ್ಗರಳಮಂ ।
ಕೂಡಿಮಾಡಿದ ಹಿಟ್ಟನಾ ತನ್ನ ಪತಿಯುಮಂ ।
ಕೂಡಣಿರ್ದವರುಮಂ ತಿನಿಸಿ ತಾನಿನ್ನೊಬ್ಬನೊಡನೋಡಿ ಹೋಹೆನೆಂದು ॥
ಮಾಡಿದರುಗುಲಿಯನೆನುತಾ ಹರದರುಂ ಬಿಟ್ಟ ।
ಬೀಡಿನೊಳ್ ಮೊದಲು ಕಾಪಟ್ಯಮಂ ಮಾಡಿದವ- ।
ಳಾಡಲದು ಜನಜನಿತಮಾದುದತಿ ದೋಷಿಗಳ ಸಂಗಮೇನಂ ಮಾಡದು ॥ ೪೫ ॥
ಆ ವಾರ್ತೆಯಂ ಕೇಳಿ ಬುದ್ಧದಾಸಂ ಬಂದು ।
ಸಾವಡೆದು ಬಿದ್ದಿರ್ದ ನಿಜಸುತನುಮಂ ಕಂಡು ।
ಭೂವಳಯದೊಳಗುರುಳುಬಿಳ್ದು ಹಾಹಾಕ್ರಂದನಂಗೆಯ್ದು ನನ್ನ ಸುತಗೆ ॥
ಈ ವಿಷಮನಿಕ್ಕಿದಳ್ನೀನೆಯೆಂದೆನುತ ಕೋ- ।
ಪಾವೇಶದಿಂದ ಮುಂದಲೆವಿಡಿದು ತಂದು ಮ- ।
ತ್ತಾ ವಸುಧೆಯಲ್ಲಿ ಬಿಳ್ದಾ ಮಗನ ಕಾಲದೆಸೆಯಲ್ಲಿ ಕುಳ್ಳಿರಿಸಿ ಬಳಿಕ ॥ ೪೬ ॥
ಜನನಿಜನಕರು ಬಂಧುಬಳಗವೆಲ್ಲವ ಬಿಟ್ಟು ।
ವಿನುತಮಪ್ಪೀ ಬುದ್ಧಸಮಯಮಂ ಪರಿಪಡಿಸಿ ।
ಮನಗೊಂಡು ನಿನ್ನ ಬೆಂಬಳಿಯಲ್ಲಿ ಬಂದು ದೇಸಿಗನಾದನೀಗಲೆನ್ನಾ ॥
ಮನದಾಣ್ಮನೆಂದು ಮರುಕಂಬಡೆಯದೇ ನನ್ನ ।
ತನುಜನಂ ಕೊಂದೆಯಲ್ಲಾ ಎಂದು ಕೂರಸಿಯ- ।
ನನುಪಮಚರಿತ್ರವಂತೆಯ ಕೊರಲ್ಗಿಟ್ಟು ಜೀವಂಗೊಳ್ವೆನೆಂದೆನುತಿರೆ ॥ ೪೭ ॥
ಭೂಜನವಿನೂತೆ ತನ್ನಂತರಂಗದೊಳು ನನ- ।
ಗೀಜನ್ಮಕೀ ಬುದ್ಧಸಂಘನೇ ವಲ್ಲಭಂ ।
ಶ್ರೀಜೈನಮಾರ್ಗಮೇ ಮಾರ್ಗಮುಳಿದುವು ತಿರಸ್ಕಾರಮೆಂದಾ ಮನದೊಳು ॥
ತ್ರೈಜಗತ್ಪೂಜ್ಯಮಪ್ಪಾ ಪಂಚಗುರುಪದಸ- ।
ರೋಜಮಂ ನಿಜಮನೋವಾಕ್ಕಾಯಶುದ್ಧಿಯೊಳ- ।
ಗೋಜೆ ವಿಂಗೆ ಭಾವಿಸುವ ಸಮಯದೊಳಗಾ ನಗರದೇವತೆಗಳೆಲ್ಲ ನೆರೆದು ॥ ೪೮ ॥

ದುರುಳನಾಕೆಯು ಕೊರಲ್ಗಿಟ್ಟ ಕೂರಸಿಯುನಿರ- -
ದರಲಮಾಲೆಯು ಮಾಡಿಯಾ ಬುದ್ಧಸಂಘನಂ ।
ವರವೈಶ್ಯಸಮಿತಿಯುಂಗದೊಳಸುವ ಪೂರೈಸಿ ಮಣಿಮಂಟಪವನು ಮಾಡಿ ॥
ತರುಣಿಯುಂ ಕುಳ್ಳಿರಿಸಿ ಪದಿನಾಲ್ಕು ನದಿಯ ಬಂ- ।
ಧುರ ಜಲದಿನಭಿಷೇಕಮುಂ ಮಾಡಿ ನವವಸ್ತ್ರ ।
ಸುರುಚಿರಾಭರಣಾನುಲೇಪನಪ್ರಸವದಿಂ ಪೂಜಿಸಿದರಕ್ಕೆಯಿಂದ ॥ ೪೯ ॥
ಆ ವೇಳೆಯಲ್ಲಿಯಾಶ್ಚರ್ಯಪಂಚಕವಾಗೆ ।
ಭೂವರಂ ದಾಡಿವಾಹನನೆಯ್ದಿ ಬಳಿಕ ನಾ- ।
ನಾವಿಧದಿ ಕೊಂಡಾಡಿ ಜಿನದರ್ಶನದ ಮಹಾತ್ಮ್ಯಗೆ ಮಹಾಮೋದವೆತ್ತು ॥
ಭೂವಲಯದೊಳಗಿದಲ್ಲದೆ ಧರ್ಮಮಿಲ್ಲೆಂದು ।
ಭಾವಶುದ್ಧಿಯೊಳು ತುತಿಯಿಸಿ ಬಳಿಕ ನಿರ್ವೇಗ- ।
ಮಾವರಿಸೆ ಹೃದಯದೊಳು ಸಂಸೃತಿಯ ದಂದುಗಮಸಿರದೆ ಪರಿಪಡಿಪೆನೆಂದು ॥ ೫೦ ॥
ಬಳಿಕ ನಿಜತನುಜ ನಯವಿಕ್ರಮಗೆ ರಾಜ್ಯಮಂ ।
ತಳುವದೇ ಕೊಟ್ಟು ಭೂಮಂಡಲೇಶರ್ಕೆಲರ್ ।
ಒಳಿವಳಿಯೊಳೆಯ್ದಿ ಭರದಿಂ ಯಶೋಧರಮುನಿಯ ಪದಪದ್ಮಮೂಲದಲ್ಲಿ ॥
ತಳೆಯೆ ಜಿನದೀಕ್ಷೆಯುಂ ಶ್ರಾವಕವ್ರತಮನನು- ।
ಗೊಳಿಸಲಾ ಬುದ್ಧದಾಸಾದಿಗಳ್ಕೆಲರಿಳಾ- ।
ತಳದೊಳಿದುವೇ ಧರ್ಮವೆಂದು ನಿಶ್ಚಯಮಪ್ಪ ಪರಿಣಾಮಮಂ ತಳೆದರು ॥ ೫೧ ॥
ಆ ವಸುಮತೀವಲ್ಲಭನ ಪಟ್ಟದರಸಿ ಪ- ।
ದ್ಮಾವತಿ ಪಲಂಬರಬಲೆಯರು ತನ್ನೊಡವರಲ್ ।
ಭೂವಿನುತಮೂರ್ತಿ ಪದ್ಮಶ್ರೀಸಮನ್ವಿತಂ ಬಂದು ಭರಭಕ್ತಿಯಿಂದ ॥
ಓವದೆ ಸರಸ್ವತಿಯರೆಂಬ ಕಂತಿಯರಿಂದ ।
ಭಾವಶುದ್ಧಿಯೊಳು ದೀಕ್ಷೆಯನಾನಲಂದು ನನ- ।
ಗಾವರಿಸಿತಧಿಕ ಸಮ್ಯಕ್ತ್ವವೆಂಬಾ ಪದ್ಮಲತೆಯ ನುಡಿಯುಂ ಕೇಳುತ ॥ ೫೨ ॥
ಅನುರಾಗವೊದವೆ ಅರ್ಹದ್ದಾಸನಾ ಉಳಿದ ।
ವನಿತೆಯರದಕ್ಕೆ ಇಚ್ಛಾಕಾರಮಂ ಮಾಡೆ ।
ಜನವಿನುತೆ ರತ್ನತ್ರಯಾಭರಣೆ ಕಿರಿಯ ಸತಿ ಕುಂದಲತೆಯಿಂತಿದಕ್ಕೆ ॥
ಮನಗೊಡದೆ ನುಡಿದಳಿಂತೆಂದಿವೆಲ್ಲಂ ಮಿಥ್ಯೆ- ।
ಯನುಮಾನವಲ್ಲದೇ ನಿಜವಲ್ಲಮೆನೆ ಕೇಳಿ ।
ಜನತಾಧಿನಾಯಕನುಮಾ ಮಂತ್ರಿಯುಂ ತಮ್ಮೊಳಿಂತೆಂದೆಣಿಸುತಿರ್ದರು ॥ ೫೩ ॥
ಸಾಕ್ಷಾತ್ಕರಿಸಿದ ಸಮ್ಯಕ್ತ್ವದ ಮಹಾತ್ಮ್ಯೆಯುಂ ।
ಲಕ್ಷೀಕರಿಸದೆ ತಾನೊಡಬಡುವುದಿಲ್ಲವೆಂ- ।
ಪೀ ಕ್ಷುದ್ರಮಾನಸೆಯನೀಪೂರಕೇರಿಯರಿವಂದದಿಂದುದಯಮಾದಾ ॥

ಅಕ್ಷಣವೆ ಹಿಡಿತರಿಸಿ ನುಡಿದ ಬಾಯಿಗೆ ತಕ್ಕ ।
ಶಿಕ್ಷೆಯಂ ಮಾಡಿಸುವೆನೆಂದು ನಿಜಹೃದಯದೊಳ- ।
ಗಾಕ್ಷೇಪಮಂ ಮಾಡುತಿರಲತ್ತಲಾ ಚೋರನಿಂತೆಂದೆಣಿಸುತಿರ್ದನು ॥ ೫೪ ॥
ಉದನಿಧಿಯನುಬ್ಬಿಸುವನುತ್ಪಲಮನಡರಿಸುವ ।
ಸದಮಲತೆಯಂ ದಿಶಾವಳಿಗೆ ಮಾಡುವ ದಿವಿಜ- ।
ರುದರವಂ ಪೋಷಿಸುವ ಹರನ ತಲೆಯೊಳ್ಮಿಸುಪನಂಗಜಗೆ ಬಲನ ಕೊಡುವಾ ॥
ಪದೆದು ಸಸ್ಯಾದಿಗಳ ಸಲಹುವ ಗುಣಂಬಡೆದ ।
ಸದಮಲ ಸುಧಾಂಶುವಂ ಕಂಡು ಕೌಲೇಯಕಗ- ।
ಳಿದಿರೆದ್ದು ಬಗುಳ್ವಂತೆ ಲೋಕೋತ್ತಮರ ಕಂಡು ದುರ್ಜನದೂರುತಿಹರು ॥ ೫೫ ॥
ಪಿತ್ತಜ್ವರಂಬಡೆದವರ್ಗ್ಗೆ ಪಾಲೋಗರದ ।
ತುತ್ತು ಕಹಿಯಾದಂತೆ ದುರ್ಜನರ ಕಿವಿಗೆ ಸುಜ- ।
ನೋತ್ತಂಸನುಸಿರ್ವ ನುಡಿಯೆಕ್ಕಸಿಕ್ಕಂ ತಪ್ಪದೆಂದು ಚಿಂತಿಸುತುಮಿರಲು ॥
ಇತ್ತಲರ್ಹದ್ದಾಸನಾ ಸತಿಯ ನುಡಿಗೆ ಮನ- ।
ಮಿತ್ತು ಕಣ್ಗೊಪ್ಪಿದಂ ಸುಗುಣಮಣಿ ವೈಶ್ಯವಂ- ।
ಶೋತ್ತಮಂ ವಿನುತಸಮ್ಯಗ್ದೃಷ್ಟಿ ಜಿನಸಮಯವಾರ್ಧಿವರ್ಧನಚಂದ್ರನು ॥ ೫೬ ॥
ಇದು ವಿಬುಧಜನವಿನುತಮಿದು ವಿಬುಧಜನವಿನತ- ।
ಮಿದು ವಿದಿತಜಿನಸಮಯಶರಧಿಸಂಪೂರ್ಣೇಂದು ।
ಸದಮಲಚರಿತ್ರ ಚೆಂಗಾಳ್ವಭೂವರನ ಸಚಿವಾನ್ವಯಾಂಬರಹಂಸನು ॥
ಮದನಸಮರೂಪನುತ್ತಮಗುಣಕರಂಡಕಂ ।
ಚದುರಮಂಗರಸನುಸಿರ್ದೀ ಕೌಮುದೀಕಥೆಯೊ- ।
ಳೊದವಿದುದು ಸುಭಗೆ ಪದ್ಮಶ್ರೀಯ ಕಥನವೊಂಭತ್ತನೆಯ ಮಿಸುಪ ಸಂಧಿ ॥ ೫೭ ॥

ಅಂತು ಸಂಧಿ ೯ಕ್ಕಂ ಪದ ೫೫೧ಕ್ಕಂ ಮಂಗಲಮಹಾ ॥

---



# ಹತ್ತನೆಯ ಸಂಧಿ.



## ಉಮಯನ ಕಥೆ.

ಶ್ರೀಮದರ್ಹದ್ದಾಸವೈಶ್ಯವಿಭು ಕೇಳಲಾ ।
ತಾಮರಸಮುಖಿ ಕನಕಲತೆ ಮೃದುಕರಂಗಳಂ ।
ಪ್ರೇಮದಿಂ ಮುಗಿದು ತನಗಾದ ಸಮ್ಯಕ್ತ್ವಮಂ ಜಿನ್ನಪಂಗೆಯ್ದು ಳಿಂತು ॥ ಪಲ್ಲ ॥

ತುಂಬಿ ಸೊಗಯಿಸುವವಂತೀವಿಷಯದುಜ್ಜಯಿನಿ- ।
ಯೆಂಬ ನಗರಿಯೊಳು ನರಪಾಲಕನೃಪಂ ನಿಜನಿ- ।
ತಂಬಿನಿ ಮದನಶಕ್ತಿ ಮದನದೇವಂ ಮಂತ್ರಿವೆರಸಿ ವಸುಧಾತಳವನು ॥
ಇಂಬಾಗಿ ಪಾಲಿಸುತ್ತಿರಲು ಸಾಗರದತ್ತನೆಂ- ।
ದೆಂಬ ವೈಶ್ಯಂಗೆ ಸಾಗರದತ್ತೆಗುಮಯನೆಂ- ।
ದೆಂಬವಂ ಜಿನದತ್ತೆಯೆಂಬವಳ್ ಶಶಿಲಕ್ಷ್ಮಿಯಬುಧಿಗೊಗೆವಂತೊಗೆದರು ॥ ೧ ॥

ಗರುವೆ ಜಿನದತ್ತೆಯಂ ಕೌಶಂಬಿವೆಸರ ಪುರ- ।
ವರದ ಜಿನದತ್ತನೆಂದೆಂಬ ವೈಶ್ಯೋತ್ತಮಗೆ ।
ಉರುಮುದದಿ ಕುಡಲಿತ್ತಲುಮಯನತಿ ಧೂರ್ತಮಾನಸನಾಗಿ ಹರೆಯುವಡೆದು ॥
ದುರುಳರೊಡನಾಡಿ ದುರ್ಬುದ್ಧಿಯಿಂ ಪುರದೊಳಗೆ ।
ಪಿರಿದೆನಿಸುವಾ ದುರ್ವ್ಯಸನದಲ್ಲಿಯಾಚರಿಸು- ।
ತಿರೆ ಕಂಡು ಮಲಮಲನೆ ಮರುಗಿ ಮಾತಾಪಿತೃಗಳಿಂತು ಬುದ್ಧಿಯನುಸಿರ್ದರು ॥ ೨ ॥

ತಂದೆತಾಯಿಗಳರಸಿಗತಿಸಲಿಗೆವಂತರೆಂ- ।
ಬೊಂದು ದಲ್ಲಾಳಿತನದಿಂ ಲಂಡಪುಂಡರೊಳ್ ।
ಮುಂದೆ ನೋಡದೆಯೊಡಿ ಕೊಟ್ಟಕೊಂಡವರು ನೆರೆಹೊರೆಯುವರು ನಗುವ ತೆರದಿ ॥
ನಿಂದೆಗೊಳಗಾಗಿ ಇಂತಪ್ಪವರ ಮಕ್ಕಳಿಂ- ।
ತೆಂದೆಮ್ಮ ತಲೆಗೆ ಹರಲೆಯ ತರ್ಪುದುಚಿತವೇ ।
ಕಂದ ಕೇಳೆಂಬ ಮಾತಿಗೆ ಕಿವುಡುಗೇಳಲವರಿಂತೆಂದೆಣಿಸುತಿರ್ದರು ॥ ೩ ॥

ಪೂರ್ವಕೃತ ಪುಣ್ಯಪಾಪದಿನಾದ ಫಲವನೀ ।
ಉರ್ವೀತಳದೊಳಂಗಮಂ ಹೊತ್ತ ಜೀವಿಗಳ್ ।
ಸರ್ವಥಾಮೀರಲಾರ್ಪರೇ ಲೋಕಜನನಿಯೆ ಪ್ರತ್ಯಕ್ಷ ಹೆತ್ತ ಜನನಿ ॥
ಸರ್ವಲೋಕ ಪ್ರರಕ್ಷಣದಕ್ಷನೆಂದೆನಿಪ ।
ದರ್ವೀಕರಾರಿವಾಹನನೆ ಪಿತನಾಗಿಯುಂ ।
ಕರ್ವುವಿಲ್ಲಂ ಕಪರ್ದಿಯ ಕಣ್ಗಳಿಂದುರಿದುದಿಲ್ಲವೇ ದುರುಳತನದಿ ॥ ೪ ॥

ಎಂದು ಚಿಂತಿಸುತ್ತಿರಲ್ಕಾ ಉಮಯನಾ ಊರೊ- ।
ಳೊಂದಂಗಡಿಯೊಳು ಕಳ್ದೊಂದಂಗಡಿಯೊಳಿರಿಸಿ ।
ಒಂದು ಮನೆಯಲ್ಲಿ ಕನ್ನಮನಿಕ್ಕಿಯೊಂದು ಮನೆಯೊಳಗಿರಿಸಿ ಜೂದವಾಡಿ ॥
ತಂದ ವಿತ್ತವನು ಸೂಳೆಯರ್ಗಿತ್ತು ಮೇಲುತಾ- ।
ಗೆಂದರಿಯದೇ ತನ್ನ ಮೆಯ್ಮರೆದು ನಡೆಯುತಿ- ।
ರ್ಪ್ಪಂದಮಂ ಕಾಣುತವನಂ ತಳಾರಂ ಕಾಲದಂಡನೆಂಬವನು ತರಿಸಿ ॥ ೫ ॥
ಆ ವೈಶ್ಯವಲ್ಲಭ ಸಮುದ್ರದತ್ತನೊಳು ತನ- ।
ಗಾವಗಂ ಸ್ನೇಹವಾದುದರಿಂದ ದಾಕ್ಷಿಣ್ಯ- ।
ಭಾವಯುತನವಗೊಂದು ಲಾವುಕೋಪಂ ಮಾಡಲಿಸದಿಂತೆನುತುಸಿರ್ದನು ॥
ಆವೊಡನೆ ಉದಯಿಸಿದ ಜಿನದತ್ತೆಯತಿಸಾಧ್ವಿ- ।
ಯೊವುಮಯನತಿದುಷ್ಟನೊಂದು ಬೀಜಾಂಕುರದಿ- ।
ನಾ ವೃಕ್ಷವೂರ್ಧ್ವಗತಿಗಾ ಬೇರಧೋಗತಿಗೆ ನಿಜದಿಂದ ನಡೆವ ತೆರದಿ ॥ ೬ ॥
ವರಿಸವೈದರೊಳೋದ ಕುಳ್ಳಿರಿಸಿಯೋದಿಸದೆ ।
ಎರಡಾರು ಸಂವತ್ಸರದ ಮೇಲೆ ನಮಗುಳ್ಳ ।
ಹರದಿಕೆಯ ಪೆವಹಾರದುದ್ಯೋಗಕಿಕ್ಕದೇ ಒಂದೆರಳ್ಮೂರುನಾಲ್ಕು ॥
ವರುಷದೆಳವಿಯ ಬಾಲಕರ ಮೇಲೆ ಮಮತೆಯಂ ।
ಪಿರಿದಾಗಿ ಮಾಳ್ಪಂದವನೆ ಬಗೆದು ಹದಿನಾರು ।
ವರಿಸಪರಿಯಂತರಾ ನಿಜ ಜನನಿಜನಕರೋವ್ರುತ್ತಿರ್ದರೀ ಪಾಪಿಯಂ ॥ ೭ ॥
ಅಕ್ಕರಮನೋದಕುಳ್ಳಿರಿಸಲೊಲ್ಲದೊಡಂತ- ।
ದಕ್ಕೆ ಶಿಕ್ಷೆಯನಿನಿಸು ಮಾಡದೆ ನೆರೆಹೊರೆಯ ।
ಮಕ್ಕಳಂ ಬಯ್ಯುಹೊಯ್ದೊಡೆ ಬೇಡವೆಂದೆನ್ನದಾ ಮಾತೃವಾ ಪಿತೃಗಳು ॥
ಅಕ್ಕರಿಂದಂ ಸಾಕಲಾಗಿ ಪಿರಿದುಂ ಗಂಡು- ।
ಮಿಕ್ಕು ಮೆಯ್ಯರಿಯದೇ ಮೇಲುತಾಗಂ ನೋಡ- ।
ದುಕ್ಕುಸೊಕ್ಕಿಂ ಬೆಳೆದು ಜವ್ವನಂ ಬಡೆದು ಜೂದುಂಗಾರನಾದೆಯಲ್ಲ ॥ ೮ ॥
ತಂಡತಂಡದೊಳು ನಿನ್ನೋರಗೆಯೊಳೇ ಬೆಳೆದ ।
ಗಂಡುಮಕ್ಕಳನು ಮನೆಯಂ ಹಾರದೇ ಕೂಡಿ ।
ಕೊಂಡು ನಿಜಜನನಿಜನಕರು ಬೇಡವೆಂದೆಂಬ ಮಾತನಿನಿಸಂ ಕೇಳದೆ ॥
ಗಂಡುಮಿಕ್ಕಾಗದುಗುಹಿಡಿಗವಡೆ ಸಡುಗುಡಂ ।
ಸೆಂಡು ಜಿಗಿಹಲ್ಲೆ ಬೊಹರಿಗಳಾಟದಲ್ಲಿ ಮನ- ।
ಗೊಂಡಾಡಿ ಬೆಳೆದು ಜವ್ವನನಾಗಿ ಬಾಳ್ತೆಯಿಲ್ಲದೆ ಕೆಟ್ಟುಹೋದೆಯಲ್ಲಾ ॥ ೯ ॥
ಕಾಲವೊದಲಾಗಿಯುಂ ತಮಗೆ ನೀನೊರ್ವನೇ ।
ಬಾಲನೆಂದಡಕದೊಳ್ನಿಲಿಸಿಕೊಳ್ಳದೆ ಪಿರಿದು ।
ಲಾಲನದಿನಾ ತಂದೆತಾಯಿಗಳ್ ಸಲಹಿದುದರಿಂದುಬ್ಬಿಕೊಬ್ಬಿ ಬೆಳೆದು ॥

ಕೂಲಿಗರ ಕೊನಬರೊಡನನವರತ ಬಿಡದಾಡಿ- ।
ದೀಲಂಡತನವ ಬಿಡದಾದೆಯಲ್ಲಾಯೆಂದು ।
ಕಾಲದಂಡಂ ಕರುಣದಿಂದ ಬುದ್ಧಿಯನುಸಿರಿ ಪೋಗೆಂದು ಬೀಳ್ಕೊಟ್ಟನು ॥ ೧೦ ॥
ಪಿಂತೆ ನಾನೇಸೇಸುಪರಿ ನಡೆದ ದುಷ್ಕೃತನ- ।
ಮಂ ತಳಾರಂ ಕಂಡು ಬಿಟ್ಟನೆಂದೆಂಬೊಂದು ।
ಸಂತಸದಿ ಮೆಯ್ಮರೆದು ನನಗಿನ್ನದಾರಭೀತಿಯೆನುತ್ತ ಗಂಡುಮಿಕ್ಕು ॥
ಅಂತರಂ ಮಾಡದೇ ಕನ್ನಮಂ ತದ್ಧರಾ- ।
ಕಾಂತಗೃಹಕಿಕ್ಕೆ ಪಡಕಣದಪಹರಿಯ ಸುಭಟ- ।
ರಂತದಂ ಕಂಡು ಹೆಡಗಯ್ಗಟ್ಟಿಯಾ ಕಾಲದಂಡನಿದ್ದೆಡೆಗೊಯ್ದರು ॥ ೧೧ ॥
ನಳಿಗೆಯೊಳ್ ನಾಯಬಾಲವನು ಕಟ್ಟಲ್ತನ್ನ- ।
ನಳುಹಬಿಡದಂತೆ ನಾನೇಸೇಸು ತೆರದಿಂದ ।
ತಿಳಿವಂತೆ ಬುದ್ಧಿಯಂ ಪೇಳಿ ಪಲಸೂಳ್ಬಿಡಲ್ಕೇಳದೇ ಮನದೊಳಿನಿಸು ॥
ತಿಳಿಯದಾದೆಯಲಾ ಎನುತ್ತ ಪಿರಿದುಂ ನೊಂದು ।
ಬೆಳಗಾಗಲೊಡನೆಯಾಸ್ಥಾನಮಂಟಪಕೆಯ್ದಿ ।
ಯಿಳೆಯಾಧಿಪತಿಗೆ ಸಾಗರದತ್ತಸೆಟ್ಟಿಯ ತನೂಜನೆಂದೊಪ್ಪಿಸಿದನು ॥ ೧೨ ॥
ಉಣಲುಡಲು ತೊಡುವುದಕ್ಕೆನ್ನಿಂದ ಮೂರುಮಡಿ ।
ಯೆಣಿಸಿದೊಡೆ ನಿನ್ನ ತಂದೆಯ ಭೌಷೆಯಾಧನದ ।
ಗೆಣೆ ವಿಚಾರಿಸೆ ನೀನೆ ಯಜಮಾನಮಗ ನಿಮ್ಮ ಮನೆಗೆ ಇಂತಿದನೋಡದೆ ॥
ತೃಣದಿಂದ ಲಘುವಾಗಿ ತುಂಟಭಂಟರಕೂಡಿ ।
ಬಣಗಾಗಿಹೋದೆಯಲ್ಲಾ ಇದೆಲ್ಲಂ ನಿನ್ನ ।
ಹಣೆಯಲ್ಲಿ ನೀನುದಯಮಪ್ಪಾಗ ಬಿದಿ ಬರೆದುದಲ್ಲದೇ ಅನ್ಯಮಲ್ಲಾ ॥ ೧೩ ॥
ಲಂಡರೊಡನಾಟಕೂಟಂ ಪಿರಿದು ಲವಲವಿಕೆ ।
ಭಂಡರೊಳ್ಗೋಷ್ಠಿ ಜೂದುಂಗಾರರೊಳ್ಳಮತೆ ।
ಪುಂಡರೊಳಗಾಳಮೇಳಂ ಖಳರಸಂಗಮಾರಡಿಕಾರರೊಡನೆ ಜಿನದಂ ॥
ಕೊಂಡೆಯರೊಳಿರುಳು ಹಗಲೆನ್ನದೇ ಮಾಳ್ಪದು- ।
ದ್ದಂಡಿಕೆಯೆ ನಿನಗೆ ಮನಹೇಸದೇ ಮಿಗೆ ಮನಂ- ।
ಗೊಂಡು ನೆಲೆಯಾಯಿತಲ್ಲಾ ನಿನ್ನ ಪೂರ್ವಾರ್ಜಿತದ ಪಾಪದೆಸಕದಿಂದ ॥ ೧೪ ॥
ಎಂದು ಸಾಗರದತ್ತನಂ ಬರಿಸಿ ಭೂಪಾಲ ।
ವೃಂದಚೂಡಾರತ್ನ ನರಪತಿಮಹೀಶನಿಂ- ।
ತೆಂದನುಪಶಮಭಾವನಾಗಿಯೀ ದುಷ್ಟನಂ ನಿನ್ನ ನಿಜಮಂದಿರದೊಳು ॥
ಸಂದನಂ ನಮಗೊರ್ವನೇ ಎಂಬ ಮಮತೆಯಿಂ- ।
ದೊಂದು ದಿನಮಿರಿಸಿಕೊಂಡೊಡೆ ಕೇಡು ಸಂಭವಿಸಿ ।
ಮುಂದಕ್ಕೆಯಭಿಮಾನಹಾನಿಯಹುದಿಂತಿದಕೆ ಸಂಶಯಂ ಮಾಡಬೇಡಾ ॥ ೧೫ ॥

ಚಿಕ್ಕಂದು ಮೊದಲಾಗಿ ಕಾಲಕಾಲಕೆ ತಕ್ಕ ।
ತಕ್ಕ ಲಾಲನೆಯಕ್ಷರಾಭ್ಯಾಸ ತಮ್ಮ ವಂ- ।
ಶಕ್ಕೆ ಬೇಕಾದುಜ್ಜುಗದೊಳು ನೆರೆನಡೆಯಿಸಿ ಒಳಿಕ್ಕ ಬಿದ್ದಿನರ ಕಾಣ್ಬ ॥
ಲೆಕ್ಕದೊಳ್ನಡೆಯಿಸುವ ನಿಜ ಜನನಿಜನಕರಾ ।
ಮಕ್ಕಳಿಗೆ ಗುರುದೈವಮುಂತಲ್ಲದೊಡೆ ತಾಮೆ ।
ಕಕ್ಕಸದ ವೈರಿಗಳ್ ತಮ್ಮ ಬದುಕಿಗೆ ತಾಮೆ ಕೇಡಕಡೆಗೆಣಿಸಿದವರು ॥ ೧೬ ॥
ಎನಲು ಸಾಗರದತ್ತ ವೈಶ್ಯಕುಲತಿಲಕನಾ ।
ಮನುಜೇಶಗಿಂತೆಂದನೆಲೆ ಮಹಾರಾಜ ನೀ- ।
ಮೆನಗಿನಿತು ಬುದ್ಧಿಯಂ ನುಡಿವುದಿದು ನನ್ನ ಭಾಗ್ಯಮೆನುತ್ತ ಹರಿಸದಿಂದ ॥
ವಿನಯವಿನಮಿತನಾಗಿ ಬೀಳ್ಕೊಂಡು ಮನೆಗೆಯ್ದಿ ।
ತನುಜ ಕೇಳ್ ದುಃಪುತ್ರ ಕುಲನಾಶ ಎನುತ ಸಖ- ।
ಜನದರಿಕೆಯಾಗಿ ನಿನ್ನಂದದೊಳ್ನೀ ಬದುಕೆನುತ್ತಂದು ಪೊರಮಡಿಸಿದಂ ॥ ೧೭ ॥
ನಗರಿಯಂ ಪೊರಮಟ್ಟು ನಾಡಗಡಿಯಂ ಕಳೆಯು- ।
ತಗಲದೊಡವರೆ ಸಾರ್ಥವಾಸಿಯೆಂದೆಂಬವಂ ।
ಸೊಗಯಿಸುತಿರ್ಪ ಕೌಶಂಬಿಪುರಕ್ಕೆ ಸಾಣ್ಣದೆ ನಡೆದುಬಂದು ತನ್ನಾ ॥
ಭಗಿನಿಬಂಧುರಮೂರ್ತಿ ಜಿನದತ್ತೆಯಾಲಯಕೆ ।
ಪುಗಲವಳ್ಕಂಡೆಲೇ ಕಡುಪಾಪಿ ಪೋಗೆಂದು ।
ತಗುಳಿದಳ್ಗೆರಸಿವಿವಣ್ ನಿಷ್ಠುರಂಬಡೆದ ಬೀಜಮಂ ನೂಂಕುವಂತೆ ॥ ೧೮ ॥
ಆ ತಂಗಿ ತನ್ನ ದುಶ್ಚಾರಿತ್ರಮಂ ಕಂಡು ।
ಪ್ರೀತಿಯಂ ಮಾಡದೇ ಪೊರಮಡಿಸಿದುದಕೆ ಚಿಂ- ।
ತಾತುರನುಮಾಗಿ ಮತ್ತಾ ಉಮಯನಂತರಂಗದೊಳಿಂತೆಣಿಸುತಿರ್ದನು ॥
ಆ ತಂದೆತಾಯ್ಗಳಾ ಭೂಷೆಯಾಭೋಗಗಳ- ।
ನೇ ತಿರಸ್ಕರಿಸಿ ಸಪ್ತವ್ಯಸನಮಂ ಪಿಡಿದ ।
ಪಾತಕಂಗೀಯವಮಾನ್ಯಂ ಬರ್ಪುದಾವ ಗಹನಂ ತಿಳಿದು ಭಾವಿಸಿದೊಡೆ ॥ ೧೯ ॥
ಎಂದು ತನ್ನಂ ತಾನೆ ಪಿರಿದು ನಿಂದಿಸಿಕೊಂಡು ।
ಬಂದು ತತ್ಪುರವರದ ಚೈತ್ಯಮಂದಿರಕೆ ಮನ- ।
ಸಂದು ಶ್ರುತಸಾಗರಮುನೀಂದ್ರರ್ಗೆ ನಮಿಸಿ ಜೈನವ್ರತಮನೀವುದೆನಲು ॥
ಮುಂದೇತರ ಪ್ರಮೋದದಿನುತ್ತಮ ವ್ರತಮ- ।
ನಂದು ಕೊಟ್ಟೆಲೆ ಮಗನೆ ಹೆಸರನರಿಯದ ವೃಕ್ಷ- ।
ದೊಂದು ಫಲಮಂ ಮೆಲ್ಲಬೇಡೆಂದು ಕೊಟ್ಟು ಪಿರಿದುಂ ಪೊಗಳ್ದರಾ ಮಹಿಮನಾ ॥ ೨೦ ॥
ಕೀಸೆ ಕಿಲುಬಂ ಕಾಂತಿವಡೆದ ಕನ್ನಡಿಯಂತೆ ।
ಮಾಸಲಂ ತೊಳೆಯೆ ಮಡಿಯಾದ ದುವ್ವಟದಂತೆ ।
ಬಾಸಣಿಸಿದಸಿತಾಂಬುದಂ ತೊಲಗೆ ತಳಿತಳಿಪ ಸಂಪೂರ್ಣ ಚಂದ್ರನಂತೆ ॥

ಕಾಸೆಯುವಲೋಹಮಂ ಕಳೆದ ಕಾಂಚನದಂತೆ ।
ವೋಸರಿಸದೊಪ್ಪವಿಕ್ಕಿದ ರತ್ನದಂತೆ ಸೆಲ ।
ಹೇಸುವಂದದ ನಡೆಯನುಳಿದು ಸಚ್ಚರಿತಮಂ ತಳೆದುಮಯಸೊಪ್ಪಿರ್ದನು ॥ ೨೧ ॥
ಮತ್ತಮಾನಸನುಮಯಸಾ ದುಶ್ಚರಿತ್ರಮಂ ।
ಪತ್ತುವಿಟ್ಟಾ ಜೈನ ಗುರುಸಮೀಪದೊಳು ಸ- ।
ದ್ವೃತ್ತಸಾದುದ ಕೇಳಿ ಮನೆಗೆ ಕರೆಯಿಸಿ ಮಜ್ಜನಾದಿ ಉಪಚಾರಗಳನು ॥
ಚಿತ್ತಶುದ್ಧಿಯೊಳು ಮಾಡಿಸಿ ಹರಿಸದಿಂ ಹಲವು ।
ವಿತ್ತಮಂ ಹರದುಗೆಯ್ಯೆಂದೆನುತ್ತೊಸೆದು ಜಿನ- ।
ದತ್ತೆ ಕೊಟ್ಟಳ್ಗುಣಂಗಂಡರಂತದಕೆ ರತ್ನವನು ಪೊಹಣಿಸುವಂತೆ ॥ ೨೨ ॥
ಪೊಳಲೆಲ್ಲ ತನ್ನ ಪೊಗಳುತ್ತಿರಲ್ ವ್ರತಮನುರೆ ।
ತಳೆದುದಕ್ಕಲ್ಲಿ ಕೆಲದಿವಸಮಿರ್ದ್ದು ವಿತ್ತಮಂ ।
ಫಳಿಸುವೆನೆನುತ್ತ ನವರತ್ನಮಂ ಬೆಲೆಗೊಂಡು ತತ್ಪುರದ ಪರದರೊಡನೆ ॥
ಬಳಿಕ ಪೊರಮಟ್ಟು ಉಜ್ಜಯಿನಿಗೆಯ್ದುವೆನೆಂದು ।
ತಳುಮಾಡದೇ ಬರುತ ದಾರಿಯಂ ತಪ್ಪಿ ನಳ- ।
ನಳಿಸಿ ಬೆಳೆದೊಂದು ಭೀಮಾರಣ್ಯಮಂ ಪುಗುವ ಸಮಯದೊಳ್ಪಗಲಿಳಿದುದು ॥ ೨೩ ॥
ಗೂಡಿಂಗೆ ಸಾರಿ ಗುಜುಗುಜುಗುಟ್ಟಿದವು ಹಕ್ಕಿ- ।
ಯಾಡಿದುದು ಮೋಹಿಗಹಿತತಿ ಕಾಡಕೊಳದೊಳಗೆ ।
ಜೋಡಗಲ್ದುವು ಜಕ್ಕವಕ್ಕಿ ಜಲಜಲಿಸಿ ಡಾಳಂಬಡೆದುದಡವಿಗಿಚ್ಚು ॥
ಕೋಡತೊಡಗಿತು ಚಂದ್ರಕಾಂತಶಿಲೆ ಮುಚ್ಚಿದುವು ।
ಕಾಡಗಸೆ ಹಕ್ಕೆಗೆಯ್ದಿದವು ಹಲಮಿಗಗಳೊಸೆ- ।
ದೂಡಿದುವು ಮರಿಗೆ ಮೊಲೆಯಂ ಹುಲ್ಲೆಯಾನೇಸರಸ್ತಮಿಪ ಕಾಲದಲ್ಲಿ ॥ ೨೪ ॥
ಗುಹೆವುಗುವ ಸಿಂಗ ಗೂಡಿಂಗೆ ಸಾರುವ ಕರಡಿ ।
ವಿಹಗಂಗಳಂ ಹೊಯ್ದು ತಿಂದವರ ಕುಡುಕುಗಳ್ ।
ಸಹಿತ ಸಲೆ ಹಸಿದು ಬಾಯಂ ಬಿಡುವ ಹಿಳ್ಳೆಗಳ ಬಳಿಗೆ ಹಾರುವ ಸಾಳುವ ॥
ಬಹುಮೃಗಗಳಂ ಕೊಂದು ಕೆಡಹಿ ಕೊಬ್ಬಿರಿದು ಕಡು ।
ಲಹರಿಯಿಂದಡಲನೆಯ್ದುವ ಹುಲಿಗಳಾ ಪಂಕ- ।
ರುಹಮಿತ್ರನಪರವಾರಾಶಿಯಂ ಪುಗೆ ತದ್ವನಾಂತದೊಳ್ ಸೊಗಯಿಸಿದುವು ॥ ೨೫ ॥
ದಿಕ್ಕುದಿಕ್ಕಿಗೆ ಹೋಗಿ ಹಲವು ಮಿಗಗಳನೊಕ್ಕ- ।
ಲಿಕ್ಕುವಂದದಿ ಕೊಂದು ಮಗುಳ್ದವರಡಂಗುಗಳ ।
ತುಕ್ಕಡಿಸಿ ಬಗೆಯುಇದು ಭಾಗೆಯಂ ಮಾಳ್ಪ ದೀವದ ಖಗಮೃಗಾವಳಿಯನು ॥
ಹಕ್ಕೆಗೆಯ್ದಿಸುವ ಘಂಟೆಯು ಬೇಂಟೆಯೊಂದುಜ್ಜು- ।
ಗಕ್ಕೆ ಸಂದಣಿಗೊಂಬ ಜೇನೆಯ್ಗಳಂ ತರ್ಪು- ।
ದಕ್ಕೆ ಪೊಗೆಗೊಂಡು ಪೊರಮಡುವ ಬೇಡರ ಜಂದಮೊಪ್ಪಿತಾ ಪೆಕ್ಕಣದೊಳು ॥ ೨೬ ॥

ಸಿಂಗಗಳ ಶಿಶುವ ಹಿಡಿತಂದವಕೆ ಮತ್ತಮಾ- ।
ತಂಗೋತ್ತಮಾಂಗದಡಗುಗಳನೂಡಿಸುವ ಶರ- ।
ಭಂಗಗಳ ಹಸುಳೆಗಳ್ಗೆ ತತ್ಸಿಂಹದೊಡಲ ಖಂಡನ ತೆಗೆದು ಕುಡುಕುಗೊಡುವ ॥
ಹಿಂಗದೇ ಭೇರುಂಡಗಳ ಸಾಕುಮರಿಗೆ ಶರ- ।
ಭಂಗಳೆರ್ದೆಯಂ ಕೊರೆದು ಕೊಡುವ ತದ್ವನಚರರ ।
ಜಂಗುಳಿ ಕರಂ ವಿರಾಜಿಸುತಿರ್ದ್ದುದಾಭೀಳಮಪ್ಪ ಶಬರಾಲಯದೊಳು ॥ ೨೭ ॥
ಕಡುಪಿಂದ ಕಾಡೆಮ್ಮೆಗಳನು ಮರಿಗಳ್ಸಹಿತ ।
ಹಿಡಿತಂದು ಕಟ್ಟಿ ಕಾಳೋರಗನ ಪೆಡೆವಣಿಯ ।
ಸೊಡರ್ವೆಳಗುವಿಡಿದು ಕರೆಯಿಸುವ ಹೆಬ್ಬುಲಿಯ ತಿವಿದಾ ಬಾಯಮಿಗವ ಸೆಳೆದು ॥
ಕಡಿಕಂಡಮಂ ಮಾಡಿ ಸುಡು ಬಾಡಸುಡಲೆಸು- ।
ತ್ತಡಿಗಡಿಗೆ ಹೊಸ ಕಿಚ್ಚ ಹೊಸೆವ ಜಿಯದರದೊಂದು ।
ಕಡುರಯ್ಯಮಾದ ಬಲು ಸಂದಣಿಯನೀಕ್ಷಿಸುತ ನಡೆತಂದನಾ ಉಮಯನು ॥ ೨೮ ॥
ಗಿರಿಯನಡರ್ದಾ ಮುಗಿಲ ಮುತ್ತುಮಂ ಬೇಂಟೆಯೊಳ್ ।
ಪರಿದು ಫಣಿಪಂದಿ ಮದಸಿಂಧುರದ ಮುತ್ತುಮಂ ।
ಸರಸಿಯಂ ಹೊಕ್ಕು ಸಂಕದ ಮೀನಮುತ್ತುಮಂ ಬಿದಿರನೊಡೆದಾ ಮುತ್ತುಮಂ ॥
ಭರದಿಂದ ಬಿಟ್ಟೆಯಂ ಒಡಿದು ಹರದರ ಕೈಯ್ಯ ।
ಶರನಿಧಿಯ ಮುತ್ತುಮಂ ತಂದು ತಂತಮ್ಮ ನಿಜ ।
ತರುಣಿಮಣಿಯರ ಕೊರಲೊಳಿಕ್ಕುತ್ತಿರ್ದರಾ ಕಾಡಬೇಡರತಿಹರ್ಷದಿಂದ ॥ ೨೯ ॥
ಕರಿಯಕಬ್ಬಿನ ಕಂಡಿಕೆಗಳೊ ಕರಶಾಖೆಗಳೊ ।
ವರತಮಾಲದಬೀಳಲೋ ಬಾಹುಯುಗಲವೋ ।
ಕರಿಕರವೋ ಕಡುನುಣ್ಪುವಡೆದ ತೊಡೆಯೋ ಕಳ್ತಲೆಯ ಬಿತ್ತೊ ಕಣ್ಣಾಲಿಯೋ ॥
ಹರಿನೀಲಮಾಣಿಕಮುಕುರವೋ ನಿಜಮುಖವೊ ।
ಸರಸ ಕಸ್ತೂರಿಯ ಕರಂಡಕವೊ ಕುಚಯುಗವೊ ।
ಕರಮೆಸೆವ ಕಾಳಾಗರುವಿನ ಕರುವೋ ಕಾಡಬೇಡಿತಿಯರೋ ಭಾವಿಸೆ ॥ ೩೦ ॥
ಕಾಡಿಗೆಯನನುಗೆಯ್ದು ಬೊಂಬೆ ಕಾರಿರುಳಿಂದ ।
ಮಾಡಿದಾ ಪರಿಜೆಸೆವ ಮಿಗ ಸೊಕ್ಕಿನಿಂದ ಹದ- ।
ಗೂಡಿ ತಿರ್ದ್ದಿದ ಚಿತ್ರಕಬ್ಬೊನ್ನಿನಿಂದ ಕಂಡರಿಸಿದಾ ಪಾಂಚಾಳಿಕೆ ॥
ಕಾಡಾನೆಗಳ ಮದದಿ ಕರುವಿಟ್ಟಮೂರ್ತಿ ಕಡು ।
ಗಾಡಿಯಂ ಕಡೆದ ನೀಲದ ನೀರೆ ಕಾರ್ಮುಗಿಲ ।
ನೋಡಿ ಚೀಲಸಗೆಯ ಪುತ್ತಳಿಯ ತೆರದಿಂ ಪುಳಿಂದಿಯರ್ಸೊರ್ಗಯಿಸಿದರು ॥ ೩೧ ॥
ನಾರಿಯಂ ಕೀಸಿ ನರಮಂ ಸೀಳಿ ಹೆದೆಗಟ್ಟು ।
ವೋರೆಯಂತಿರ್ದ್ದ ಒಳ್ಳಿತುವಾಡಿ ಬಿಲ್ಲನೊರೆ ।
ಕೂರಂಬಮಸೆ ಕೊಂಕನನುಮಾಡಿ ಗಣೆಗೆ ಗರಿಗಳನು ಹಸನಾಗಿ ಕಟ್ಟು ॥

ಸೇರಣೆಯ ಮಾಡು ಹಿಳಿಕಂ ಪಿಶಿತಗಳನಿಕ್ಕು ।
ಬಾರುಬಾರಂ ಹದಂಗೂಡಿ ಕೈವೊಡೆಗೆಂಬ ।
ಭೂರಿಭಿಲ್ಲರ ಕಲಕಲಂ ಮನಂಗೊಳಿಸಿತಾ ವಿಪಿನಚರರಾಲಯದೊಳು ॥ ೩೨ ॥
ಕರಿಕಳಭಗಳನು ಕಂಠೀರವದ ಶಿಶುಗಳನು ।
ವರಚಕ್ರಗಳನು ಶುಕಶಾಬಂಗಳನು ತರುಣ ।
ಹರಿಣಂಗಳನು ಮಂದಗತಿ ಮಧ್ಯಕುಚವಾಗ್ವಿಲೋಕನದಿ ತಮ್ಮೊಲವಿನಾ ॥
ತರುಣೀಜನಗಳಂಗಸಂಬಂಧವಾದುದರಿ- ।
ನುರುಕರುಣದಿಂದವಂ ಬೇಂಟೆಯೊಳ್ಕೊಲ್ಲದೇ ।
ಹರಿಷದಿಂ ಹಿಡಿದು ತಂದಿತ್ತರಾ ಸತಿಯರ್ಗೆ ಕಡುಮೋಹಿ ಶಬರರಂದು ॥ ೩೩ ॥
ಎಕ್ಕಲನದಾಡೆಯೆಲರುಣಿಯ ಮಸ್ತಕದ ಬಲು ।
ಸೊಕ್ಕಾನೆದಲೆಯ ಮಣಿಯುಂ ತಂದು ಕುಪ್ಪಿಗೆಯೊ- ।
ಳಿಕ್ಕಿ ವೆಜ್ಜಂಗೆಯ್ದು ನರದ ನೇಣಿಂದ ಪೋಹಣಿಗೆಯುಂ ಹಸಮಾಡಿದಾ ॥
ಎಕ್ಕಾವಳಿಗಳನನುರಾಗದಿಂ ತಂದು ಕಡು ।
ಕಕ್ಕಸಂಬಡೆದ ಕಾಂತೆಯರ ನೆಲೆಮೊಲೆಗಳೊಳ- ।
ಗಿಕ್ಕಿದರ್ಬೇಂಟೆಯಿಂ ತಂದು ಕಾಳ್ಬೇಡರಿನಸಸ್ತಮಯಕಾಲದಲ್ಲಿ ॥ ೩೪ ॥
ಕತ್ತುರಿಯ ಕರಡಿಗೆಗೆ ಕಾಡಿಗೆಯ ಹುಡಿಯ ತಂ- ।
ದಿತ್ತರೋ ಇಂದ್ರನೀಲದ ಭರಣಿಯುಲ್ಲಿಯ- ।
ತ್ಯುತ್ತಮದ ಸಾದನಿಕ್ಕಿದರೊ ಕೃಷ್ಣಾಗರುವಿನಿಂ ಕಡೆದ ಕುಪ್ಪಿಗೆಯೊಳು ॥
ಒತ್ತಂಬರಿಸಿದರೊ ಕಾಳಕೂಟಮನೆನಲ್ ।
ಮೊತ್ತಮೊದಲಿನರುಚಿಗೆ ತೆರಪುಗುಡದೆ ಕರ್ಪೂ- ।
ವೆತ್ತ ಕಾನನಕೆ ಕಳ್ತಲೆ ಬಂದು ಕವಿಯೆ ಕಣ್ಗತಿ ಭೀಕರಂಬಡೆದುದು ॥ ೩೫ ॥
ಎಲ್ಲಿ ನೋಡಿದೊಡಲ್ಲಿ ಹುಲಿಯ ಕಣ್ಗಳ ಡಾಳ- ।
ವೆಲ್ಲಿ ನೋಡಿದೊಡಲ್ಲಿ ಮಿಂಚುಬುಳುವಿನ ರಸುಮೆ ।
ಎಲ್ಲಿ ನೋಡಿದೊಡಲ್ಲಿ ಫಣಿಪತಿಯ ತಲೆಯೊಳೊಪ್ಪುವ ಕೆಂಪುಗಲ್ಲ ಹೊಳಹು ॥
ಉಲ್ಲಸಂಬಡೆದುವಾ ಅಡವಿಯೊಳಗಿಡಿದ ತಮ- ।
ದಲ್ಲಿ ಕಾಳೋದಧಿಯ ನಟ್ಟನಡುಮಡುವಿನೆಡೆ- ।
ಯುಲ್ಲಿ ವಡಬಾನಳನ ಬೆಳೆಯ ಬೀಜಂಗಳಂ ಬಿತ್ತಿದಂದಮನೆ ಹಡೆದು ॥ ೩೬ ॥
ಕಾಳೋರಗನ ಹುತ್ತನೊಳಹೊಕ್ಕ ಮಾಳ್ಕೆಯೊ- ।
ಳ್ಕಾಳಗತ್ತಲೆ ತುತ್ತುರುಂಬಾಗಿ ತುಂಬಿದಾ ।
ಖೇಳಮುಪ್ಪಾರಣ್ಯಮಧ್ಯದೊಳ್ದಬ್ಬುದಲೆಗೊಂಡು ದಾರಿಯ ತಪ್ಪಿದಾ ॥
ಮೇಳದ ವಣಿಗ್ಜಾಲಸಹಿತ ಬಂದಾ ಸತ್ಯ- ।
ಶಾಲಿಯುಮಯನದೊಂದು ತಾಣದೊಳಗಿನನುದಯ ।
ಕಾಲಮಪ್ಪಲ್ಲಿಪರಿಯಂತರಂ ಕಳವಳಂಗೊಂಡ ನಿದ್ರೆಯೊಳಗಿರಲು ॥ ೩೭ ॥

ಹಳಹಳಚನಾದುದಾಶಾವಲಯ ತೀಡಿದುದು ।
ತೆಳುಗಾಳಿ ತಂಪು ತಲೆದೋರಿದತ್ತಾ ಖಗಾ- ।
ವಳಿಯು ಗೂಡುಗಳಲ್ಲಿ ಗಲಗು ಪಿರಿದಾಯ್ತು ಹಾಲ್ವಕ್ಕಿ ಹರಿದವು ಪಕ್ಕೆಗೆ ॥
ಎಳಗರುವಿಗೆಳ್ದು ಮೊಲೆಯುಂ ಕೊಟ್ಟು ಮೇಬೊಲಕೆ ।
ತಳರಿದುವು ಬಹುವಿಧಂಬಡೆದ ಮೃಗನಿಕುರುಂಬ ।
ತಳತಳನೆ ನೇಸರುದಯಿಸುವ ಕಾಲಕೆ ಮುನ್ನಮಾ ಮಹಾಕಾನನದೊಳು ॥ ೩೮ ॥
ಒಡಲೊಳುದಯಿಸಿದ ರೋಗಮನಾವ ತೆರದಿ ಪೊರ- ।
ಮಡಿಸದಿರ್ದೊಡೆ ಕೇಡು ಸಂಭವಿಪುದೆಂಬ ನಾ- ।
ಣ್ನುಡಿಯುಮಂ ನೆನೆದು ತನ್ನೊಳ್ ಜನಿಸಿ ತನ್ನನೇ ಹೀರಿ ಕಡುಬಡವು ಮಾಳ್ಪಾ ॥
ವಡಬವಹ್ನಿಯ ಮೂಲಮಂ ತನ್ನ ಗಾಧನೆಂ- ।
ಬೊಡಲಿಂದ ಪೊರಮಡಿಸಲದು ತಳತಳಿಸುವಂತೆ ।
ಕಡು ಸೊಗಯಿಸಿತ್ತು ಮೂಡಣದಿಕ್ಕಿನಲ್ಲಿ ಮುನ್ನೇಸರುದಯುವನೆ ಹಡೆದು ॥ ೩೯ ॥
ಆ ಪುದಯದೊಳಗೆಳ್ದು ಮುಂದಕ್ಕೆ ನಡೆದೊಂದು ।
ತೀವಿದ ಕೊಳಂಬೊಕ್ಕು ಕಯ್ಕಾಲ್ಗಳಂ ಕರ್ಚಿ ।
ಸಾವಧಾನದೊಳು ಸಂಧ್ಯಾವಂದನಂಗೆಯ್ದು ನಿಜಪುರಕೆ ಪೋಪ ದಾರಿ ॥
ಆವಕಡೆಯೆಂದು ಕಾಣದೆ ತಳಹಳಂಗೊಳು- ।
ತ್ತಾ ವನಾಂತದೊಳು ಮದ್ದಳೆಯ ಹೊಕ್ಕಿಲಿಯಂತೆ ।
ಆ ಪುಮಯನಾ ವೈಶ್ಯನಿಕುರುಂಬಮೆಲ್ಲವುಂ ತಬ್ಬಿಬ್ಬುಗೊಂಡುದಾಗ ॥ ೪೦ ॥
ಬೆಳ್ಗಿಗಂ ಬೆಳೆದಿನಲ್ಪೋದದಾರಿಯೊಳೊರ್ವ್ಗ ।
ಕೋಳ್ಗಿಗಂ ಬೆಳ್ಗಿಗವ ತಿನಹೋದ ಬಟ್ಟೆಯಿನ- ।
ದೊರ್ವ್ಗ ಕಾಡಾನೆಗಳ್ತದಿಕಿನಡವಿಯು ತೊವಲಿ ತಿನಹೋದ ಸರುಹುಗಳೊಳು ॥
ಒರ್ವ್ಗ ಬೇಂಟೆಗೆ ವನಚರರ್ಪೋದ ತೋಲಿನೊಳ- ।
ಗೊರ್ವ್ಗರ್ವ್ಗ ನಡೆದು ನಿಜಪುರದ ಪಾಂಥದ ಹೊಲಬ- ।
ನೊರ್ವ್ಗಯುಂ ಕಾಣದೇ ಕಣ್ಗೆಟ್ಟು ತಿಳಿವಳಿದು ತೊಳಲಿಬಳಲುತ್ತಿರ್ದ್ದರು ॥ ೪೧ ॥
ಇಂತು ಹಳುವಿನೊಳು ಮಧ್ಯಾಹ್ನಮಪ್ಪಲ್ಲಿ ಪರಿ- ।
ಯಂತರಂ ಬಿಡದೆ ತಿರ್‍ರನೆ ತಿರಿಗಿ ತಿರಿಗಿಯ- ।
ತ್ಯಂತ ಕ್ಷುಧಾಪೀಡರಾಗಿ ರಸರೂಪುಗಂಧಂಬಡೆದ ನವಫಲಗಳಾ ॥
ತಿಂತಿಣಿ ಕರಂ ಜೋತೊರಗುವ ಕಿಂಪಾಕತರು ।
ಸಂತಾನಮಂ ಕಂಡವಂ ಮೆಲಲ್ಬೇಕೆಂದು ।
ಸಂತೋಷದಿಂದುಮಯನೊಡವಂದ ಪರದರೆಲ್ಲ ತಿರಿವ ಸಮಯದಲ್ಲಿ ॥ ೪೨ ॥
ನರೆನವಿರಹೊತ್ತು ನಡುಗುವ ಮಂಡೆಜಿಳ್ದ ಮೊಲೆ ।
ತೆರೆ ಮುಸುಂಕಿದ ಮುಖಂ ಮುರಿದ ಬೆನ್ಜೊಲ್ವಾಯ ।
ಪಿರಿದು ಕಂಪಿಸುವ ಪಲ್ಪಟಲುಗಟ್ಟಿದ ದಿಟ್ಟಿ ಕಡುಬೆಳೆದ ಪುರ್ವ್ವಜೀಡೆ ॥

ಬಿರಿದ ಕಾಲ್ಜೊಲ್ಲವಗಲ್ಲಂ ಮಿಸುಪ ವೃದ್ಧವನ- ।
ಚರಿಯೊರ್ವಳಾ ಪಣ್ಗಳಂ ಸವಿದು ತದ್ವೈಶ್ಯ ।
ವರನುಮಯನಾ ಪರದರುಂ ಕಾಣ್ಬ ತೆರದಿನೇರುಂಜವ್ವನಂಬಡೆದಳು ॥ ೪೩ ॥
ತೊಂಡೆವಣ್ದುಟಿಯು ತೊಳಗುವ ತೋರಪೊರವಾರ ।
ಬಂಡುಣಿಯು ಸುಳಿಗುರುಳ್ಗಳ ಬಟ್ಟಮುಡಿಯು ಶಶಿ- ।
ಮಂಡಲಾನನದ ಮದಿರಾಂಬಕದ ಕುಂದಕುಟ್ಮಳ ರದದ ಕುಡುವುರ್ವಿನಾ ॥
ಪುಂಡರೀಕೋಪಮಾವೋದದಪರಂಜಿಯು ಕ- ।
ರಂಡಕಸ್ತನದ ನಳಿತೋಳ ಚೆಂದಳಿರ್ಗಯ್ಯ ।
ಗಂಡುಗೋಗಿಲೆಯು ನುಣ್ದಾರದ ಜವ್ವನೆ ಕರಂ ಕಣ್ಗೆ ವಿಭ್ರಾಜಿಸಿದಳು ॥ ೪೪ ॥
ತಳಿರ್ವಜ್ಜೆ ತರುಣಿಮತವಮಾಲದಂದದ ಬಾಸೆ ।
ಯೆಳವಾಳೆತೊಡೆ ಲತಾಮಧ್ಯಚಂಪಕವರ್ಣ ।
ಬೆಳಗಾಯನೇಳಿಸುವ ಮೊಲೆ ಬಿಂಬಫಲನಿಭಾಧರ ದಾಡಿವೋಪಮ ರದಂ ॥
ತೊಳಗುವ ಸುಪರ್ಣ ಗಂಡಸ್ಥಳಂ ನವನಿಂಬ- ।
ದಳಸಮಾನ ಭ್ರೂಯುಗಂ ಕರಂ ಕಣ್ಗೊಳಿಸೆ ।
ಲಲನೆ ನಂದನವನಸ್ತ್ರೀಯಂತೆ ನೋಡುವರ ಬಗೆಯು ಬಂಧಿಸುತಿರ್ದಳು ॥ ೪೫ ॥
ಕರುವಿಟ್ಟ ಕಬ್ಬೊನ್ನ ಕರುವನುರಿಯೊಳ್ಕಾಸಿ ।
ವರಸಿದ್ಧರಸದ ನೀರೂಟಮಿಕ್ಕಲ್ಕರಂ ।
ಸುರುಚಿರಂಬಡೆದ ಮಿಸುನಿಯ ಬೊಂಬೆಯೆಂಬಂತೆ ಶತವೃದ್ಧೆಯಾ ವನಚರಿ ॥
ಭರದಿನಾ ಮರದ ತನಿವಣ್ಣ ಸೇವಿಸಲು ಬಂ- ।
ಧುರಮಪ್ಪ ಬಜ್ಜವ್ವನಂದಳೆದ ಲಾವಣ್ಯ ।
ವರರೂಪುವಡೆದುದತಿಚಿತ್ರವೆಂದಾ ವುಮಯನವಳೊಳಿಂತೆಂದುಸಿರ್ದನು ॥ ೪೬ ॥
ತರುಣಿ ಕೇಳ್ ನಿನ್ನವೃದ್ಧತೆ ಹಿಂಗಿ ಹೊಚ್ಚಹೊಸ ।
ಹರೆಯಮಾದುದಿದೇನುಕಾರಣಮೆನಲ್ಕೇಳಿ- ।
ಯೊರೆದಳಿಂತೆಂದು ಬಳಿಕೀ ಮರದ ಪಣ್ಣಮೃತವದರಿನಾನೀ ಚೆಲ್ವನು ॥
ಧರಿಯಿಸಿದೆನಿದನು ನೀನಿನ್ನ ಹಸಿವಳಿವಂತೆ ।
ಹರಿಸದಿಂ ಮೆಲಲಿಷ್ಟಸಿದ್ಧಿ ನಿನಗಪ್ಪುದೆನೆ ।
ಸುರುಚಿರಗುಣಾಭರಣನೀಯಮೃತಫಲವಡೆದ ಭೂರುಹದ ಹೆಸರಾವುದು ॥ ೪೭ ॥
ಎನಲಿದರ ಹೆಸರನಾನರಿಯೆನೀ ಫಲದ ರಸ- ।
ದಿನಿದರುತ್ತಮಗುಣವನರಿವೆ ನಾನೆಸೆಯೆಂ- ।
ದನಿಮಿಷಾಂಬಕಿಯೊಳಿಂತೆಂದನಾ ಸುಚರಿತ್ರನೆನಗಂದು ಮೊತ್ತಮೊದಲು ॥
ಜಿನಮುನೀಶ್ವರರೊಸೆದು ಹೆಸರನರಿಯದ ಮರದ ।
ತನಿವಣ್ಣನಾರೋಗಿಸಲ್ಬೇಡವೆಂದು ಸ- ।
ದ್ವಿನಯದಿಂ ವ್ರತವಿತ್ತರದರಿಂದಿವಂ ಮೆಲ್ವುದೆನಗಾದುದಿಲ್ಲವೆನಲು ॥ ೪೮ ॥

ಮರುಳೆ ಕೇಳ್ ನಿನ್ನೆಮೊದಲಾಗಿ ಕೂಳಿಲ್ಲದೇ ।
ಹಿರಿದಾಗಿ ಹಸಿವಕಾರಣದಿ ಬೆಂಬತ್ತಿದೊಡ- ।
ಲಿರದೆ ತಳ ಮೇಲಕಿಕ್ಕುವದಿಟ್ಟ ಹೂಳಿದಂಗುಳು ಸಾರವರತ ಬಾಯಿ ॥
ತೊರೆದ ಕಿರುಬೆಮರು ಕುಪ್ಪಳಿಪ ಕಾಲ್ಪಡದಡಿಪ ।
ಹರಣ ಬಂಬಲುಬಾಡುವಂಗ ತಡಬಡಿಪ ನುಡಿ- ।
ಯಿರವಾಗಿಯುಂ ಸುಧಾರಸಪೂರಪಕ್ವಫಲಮಂ ಮೆಲ್ಲದಿಹುದೊಳ್ಳಿತು ॥ ೪೯ ॥
ಸಿರಿಬರಲ್ಕೊಳಕಾಲನೊಡ್ಡಿಸಿದ ಕಡುಹೆಡ್ಡ- ।
ರಿರವಾಯ್ತು ನಿನ್ನ ತೆರನೀ ಇಷ್ಟಸಿದ್ಧಿಯಂ ।
ಭರವಸದಿ ಮಾಡಿಕೊಡುವೀ ಫಲಕ್ಕೆಲೆ ಸೊಗಡುಮಾಳ್ಪದೆನಲಿಂತೆಂದನು ॥
ಸುರುಚಿರ ಸ್ವರ್ಗಾಪವರ್ಗಮಂ ಕೊಡುವ ನಿಜ- ।
ಗುರು ಕೊಟ್ಟ ಸುವ್ರತಮನೀ ಪ್ರಾಣವಳಿದೊಡಸು- ।
ಸರಣೆಯಂ ಮಾಡಿದೊಡೆ ನೀರೊಳಗೆ ಹೊನ್ನಂಬನೆಚ್ಚನಿರವೆನಗಪ್ಪುದು ॥ ೫೦ ॥
ಎಂಬ ಸಮಯದೊಳು ತನ್ನೊಡವಂದ ವೈಶ್ಯನಿಕು- ।
ರುಂಬಮೆಲ್ಲಂ ತತ್ಫಲಂಗಳಂ ತಿಂದೊಡಲು ।
ತುಂಬುವನಿತರೊಳಿಳಾತಳಕೆ ತಟಹೊಟನೆ ಬಿಳ್ದುರುಳ್ವುದಂ ಕಂಡುಮಯನು ॥
ಅಂಬುಜಾನನೆ ಪೇಳಿದೇನುಕಾರಣಮೆನ- ।
ಲ್ಕೆಂಬಲ್ಗಳಂ ತೆರೆದು ನುಡಿದಳೀ ತೆರದಿ ಕ- ।
ಣ್ಗೆಂಬಾದ ಪಣ್ಗಳಿವು ವಿಷದ ಫಲಮೆನಲು ಮತ್ತಿಂತೆಂದು ನುಡಿದನಾಗ ॥ ೫೧ ॥
ಇವು ವಿಷದ ಫಲಮಾಗೆ ನಿನ್ನ ಜರೆತನ ಹಿಂಗಿ ।
ನವಯೌವನಂ ಬಡೆವುದೇನು ಕಾರಣಮೆನಲ್ ।
ಭುವನವಿಖ್ಯಾತ ಕೇಳಾನೀ ವನವನು ರಕ್ಷಣೆಮಾಳ್ಪ ವನದೇವತೆ ॥
ಸುವಿಚಾರದಿಂ ನಿನ್ನ ಮನವನೀಕ್ಷಿಪೆನೆನು- ।
ತ್ತವತರಿಸಿದೆಂ ತಳುವದೀ ವಿಧಿಯನೆಂದು ಸುರ ।
ಯುವತಿಯತ್ಯಂತ ಹರ್ಷೋತ್ಕರ್ಷೆಯಾಗಿ ಪಲತೆರದಿನವನಂ ಸ್ತುತಿಯಿಸಿ ॥ ೫೨ ॥
ಬಳಿಕಿಂತು ನುಡಿದಳೆಲೆಯುಮಯ ನಿನ್ನಯದೊಂದು ।
ಸುಲಲಿತವ್ರತಕೆ ಮೆಚ್ಚಿದೆ ಬೇಡಿಕೊಳ್ಳೆನಲ್ ।
ತಳುಮಾಡದೀ ಬಿಳ್ದ ಬಂಧುಗಳನೆಚ್ಚರಿಸಿ ನಮ್ಮ ನಿಜಪುರವರಕ್ಕೆ ॥
ತಳರಿಸೆನಲಂತೆ ಮಾಡುವೆನೆಂದು ತದ್ವಿಷದ ।
ಫಲವ ತಿಂದಿಳೆಯೊಳಗೆ ಬಿಳ್ದವರನೆಲ್ಲರಂ ।
ಘಳಿಲನೇಳಿಸಿ ಪುಷ್ಪವೃಷ್ಟಿಯಂ ಕರೆದಮರರಿರದೆ ಪೊಗಳುತ್ತಿರ್ದ್ದರು ॥ ೫೩ ॥
ಜನವಿನುತ ನಿನ್ನಂತು ಲೋಕದೊಳಗಧಿಕ ಸ- ।
ಜ್ಜನರಾರೆನುತ್ತಿರಲ್ಕಾ ಪುರದ ದಾರಿಯೊಳ್ ।
ಬನದೊಡತಿಯುಲರೊಂದೆದನಿಗಳಂ ಕರೆಯುತ್ತ ಮಣಿಗೊಡೆವಿಡಿದು ನಡೆಸಲು ॥

ಅನುರಾಗದಿಂ ನಗರದೇವತೆಗಳಿದಿರ್ವಂದು ।
ಮಿನುಗುವ ಸುರತ್ನಮಂಟಪದಲ್ಲಿ ಕುಳ್ಳಿರಿಸಿ ।
ಜನಜಾತ್ರೆಯಾಗಿ ತತ್ಪುರಮೆಲ್ಲ ನೋಳ್ಪಂದದಿಂ ಪೂಜೆಗೆಯ್ದುರಾಗ ॥ ೫೪ ॥
ಅದನರಿದು ನರಪಾಲ ನರನಾಥನಿದಿರ್ವಂದು ।
ಮುದದಿಂದ ಕೊಂಡಾಡಿ ಪೂಜಿಸಿ ಬಳಿಕ್ಕ ನಿಜ ।
ಸದನಮಂ ಹೊಗಿಸಿ ಮನವಾರೆ ಜಿನಸಮಯಮಂ ಚೆನ್ನಾಗಿ ನಂಬಿಹಿಡಿದಾ ॥
ಚದುರರ್ಗೆ ಮುಂದಕ್ಕೆ ಕೇಡಿಲ್ಲದಧಿಕ ಸಂ- ।
ಪದವೀವ ಮುಕ್ತಿಯಲ್ಲದೆ ಭವದ ಸಂಕಟದ ।
ಹೊದಕುಳಿಯುಮಿಲ್ಲೆಂಬುದಕ್ಕಿದೇ ಸಾಕ್ಷಿಯಾಯ್ತೀ ಸುಜನನುಮಯನಿಂದಾ ॥ ೫೫ ॥
ಎಂದು ಕೊಂಡಾಡಿ ನಿರ್ವೇಗಮಾನಸನಾಗಿ ।
ನಂದನಂಗಧಿರಾಜಪದವಿತ್ತು ಭರದಿ ತ- ।
ನ್ನೊಂದಾಗಿ ಬರೆ ಮದನದೇವ ಮಂತ್ರೀಶ ಸಾಗರದತ್ತನಾ ವೃಮಯಸು ॥
ಗೊಂದಣಂಗೊಂಡು ಕೆಲರರಸುಮಕ್ಕಳ್ಬರಲ್ ।
ಮಂದೇತರಪ್ರಮೋದದೊಳು ಸಾಸಿರಕೀರ್ತಿ- ।
ಯೆಂದೆಂಬ ಮುನಿಗಳಿಂ ದೀಕ್ಷೆಯಂ ಧರಿಸಿದನಿಳಾತಳಂ ಪೊಗಳುವಂತೆ ॥ ೫೬ ॥
ತದನಂತರದೊಳು ತದ್ಭೂಪಾಲಕನ ಮಡದಿ ।
ಮದನಶಕ್ತಿಗೆ ಸಮಂಬಡೆದಾ ಮದನಶಕ್ತಿ ।
ಮುದದಿ ಸಾಗರದತ್ತ ವೈಶ್ಯನಂಗನೆ ಮತ್ತೆ ಕೆಲಬರವನೀಪತಿಗಳಾ ॥
ಸುದತಿಯರ್ಸಹಿತ ಸುಪ್ರಭೆಯೆಂಬ ಕಂತಿಯರ ।
ಪದಮೂಲದಲ್ಲಿ ವೈರಾಗ್ಯಪರೆಯಾಗಿ ನಿಜ ।
ಹೃದಯಶುದ್ಧಿಯೊಳುತ್ತರೋತ್ತರ ಸುಖಮನೀವ ದೀಕ್ಷೆಯಂ ಧರಿಯಿಸಿದಳು ॥ ೫೭ ॥
ಬಳಿಕ ತತ್ಪುರದಲ್ಲಿ ಶ್ರಾವಕವ್ರತಂಗಳಂ ।
ತಳೆದರರ್ಧವರಿದೇಲೋಕದೊಳ್ ಧರ್ಮವೆಂ- ।
ದಲಘುತರಮಪ್ಪ ಪರಿಣಾಮಮಂ ತಾಳಿದರಿದಂ ಕಂಡು ಸನ್ನ ಮನಕೆ ॥
ಸುಲಲಿತ ಶ್ರದ್ಧೆಯಿಾ ದರ್ಶನದೊಳಾಯಿತೆಂ- ।
ದಳಿನಿಭಾಳಕಿ ಕನಕಲತೆ ಪೇಳಲಾ ಮಾತಿ- ।
ಗೆಳಸಿ ಅರ್ಹದ್ದಾಸನಾ ಸತಿಯರೆಲ್ಲರಿಚ್ಛಾಮಿಯೆಂದೆನುತಿರ್ದರು ॥ ೫೮ ॥
ಆ ನುಡಿಯ ಕೇಳುತಿಂತೆಂದಳಾ ಕುಂದಲತೆ ।
ನಾನಿದಕ್ಕೊಡಬಡುವೆನೇ ನಿಮ್ಮ ಕಟ್ಟುಕ- ।
ಕ್ಕಾನಂದಿಪೆನೆಯೆಂದು ನುಡಿದ ನುಡಿಯಂ ಕೇಳಿಯಾರಾಜನಾಸಚಿವನು ॥
ಈ ನುಡಿಗಿವಳ್ನಂಬಬೇಡವೇ ಇವಳನನು- ।
ಮಾನಿಸದೆ ಪನಿಹೊತ್ತಿನೊಳ್ತರಿಸಿ ಇವಳು ನುಡಿ- ।
ದಾ ನಾಲಗೆಯನುತ್ತರಿಸಬೇಕೆನುತ್ತಿರಲ್ಕಾ ಚೋರನಿಂತೆಂದನು ॥ ೫೯ ॥

ಸ್ಫುರದಂಶುಮಾಲಿಯುದಯುಂಗೆಯ್ಯೆ ಸಂತಸಂ ।
ಸರಸಿರುಹಕ್ಕಾಗುವಂತಾವ್ರಳೂಕಕ್ಕೆ ಕಡು ।
ಹರಿಸಮಾದವುದೆ ಸಜ್ಜನರ ನಡೆ ದುರ್ಜನಗ್ಗಾಗದೆಂದೆಣಿಸುತಿರಲು ॥
ಸುರುಚಿರಗುಣಾಲಂಕೃತಂ ವೈಶ್ಯಕುಲತಿಲಕ- ।
ನರವಿಂದಮುಖಿ ಕನಕಲತೆಯ ನುಡಿಯುಂ ಕೇಳಿ ।
ಉರುಮುದಂದಳೆದನರ್ಹದ್ದಾಸಜಿನಸಮಯವಾರ್ಧಿವರ್ಧನಚಂದ್ರನು ॥ ೬೦ ॥

ಇದು ವಿಬುಧಜನವಿನುತಮಿದು ವಿಬುಧಜನವಿನತ- ।
ಮಿದು ವಿದಿತಜಿನಸಮಯಶರಧಿಸಂಪೂರ್ಣೇಂದು ।
ಸದಮಲಚರಿತ್ರ ಚೆಂಗಾಳ್ವಭೂವರನ ಸಚಿವಾನ್ವಯಾಂಬರಹಂಸನು ॥
ಮದನಸಮರೂಪನುತ್ತಮಗುಣಕರಂಡಕಂ ।
ಚದುರಮಂಗರಸನುಸಿರ್ದೀ ಕೌಮುದೀಕಥೆಯೊ- ।
ಳೊದವಿದುತ್ತಮಹೃದಯನುಮಯನ ಚರಿತ್ರ ಪತ್ತನೆಯ ಸೊಗಯಿಸುವ ಸಂಧಿ ॥ ೬೧ ॥

ಅಂತು ಸಂಧಿ ೧೦ಕ್ಕಂ ಪದ ೬೧೬ಕ್ಕಂ ಮಂಗಲಮಹಾ ॥



# ಹನ್ನೊಂದನೆಯ ಸಂಧಿ.

## ವಿದ್ಯುಲ್ಲತೆಯ ಕಥೆ.

ಶ್ರೀಮದರ್ಹದ್ಧಾಸವೈಶ್ಯವಿಭು ಕೇಳಲಾ ।
ತಾಮರಸವದನೆ ವಿದ್ಯುಲ್ಲತೆ ಕರಂಗಳಂ ।
ಪ್ರೇಮದಿಂ ಮುಗಿದು ತನಗಾದ ಸಮ್ಯಕ್ತ್ವಮಂ ಬಿನ್ನಪಂಗೆಯ್ದಳಿಂತು ॥ ಪಲ್ಲ ॥

ಪೆಸರ್ವಡೆದ ಸೌರದ ಜನಾಂತದೊಳ್ಪಿರಿದು ರಂ- ।
ಜಿಸುತಿರ್ಪ ಸುಜ್ಜ ಕೌಶಂಬಿನಗರಿಯಲಿ ಯಸ- ।
ದೃಶಪರಾಕ್ರಮಿ ಸುದಂಡನೆಂಬವಂ ವಿಜಯೆಯೆಂದೆಂಬ ರಮಣಿಗೂಡಿ ॥
ವಸುಧೆಯಂ ಸದ್ಬುದ್ಧಿಯೆಂಬ ಸಚಿವಂಗೂಡಿ ।
ಎಸಕದಿಂದಾಳುತಿರಲಲ್ಲಿ ವೈಶ್ಯೋತ್ತಮಂ ।
ರಸಿಕ ಸುರದೇವನೆಂಬಂ ಗುಣಶ್ರೀಯೆಂಬ ಸತಿಗೂಡಿ ಸುಖದಿನಿರ್ದ್ದ ॥ ೧ ॥

ಭಂಗುರಜನಾಂತಕ್ಕೆ ಪೋಗಿ ರವಿಯಶ್ವಮಂ ।
ಭಂಗಿಸುವುದೊಂದು ಜಾತ್ಯಶ್ವಮಂ ತಂದು ನೃಪ- ।
ತುಂಗಂಗೆ ಕಾಣ್ಕೆಯಂ ಕೊಟ್ಟು ಬಹುವಿತ್ತಮಂ ಹಡೆದು ಸಿರಿವಂತನಾಗಿ ॥
ಹಿಂಗದರ್ಹತ್ಪೂಜೆದಾನಶೀಲೋಪವಾ- ।
ಸಂಗಳಂ ದಿನಬಂಜೆವಡೆಯದೇ ಪಿರಿದು ಮನ- ।
ಸಂಗೊಂಡು ಮಾಡುತಿರ್ದ್ದಂ ಮಹೀತಳಮೆಲ್ಲಮುಲಿದು ಕೊಂಡಾಡುವಂತೆ ॥ ೨ ॥

ಅಂದವಡೆದೀ ತೆರದಿ ಸುಖದಿನಿರುತಿರ್ದ್ದ ಬಳಿ- ।
ಕೊಂದು ದಿನದುದಯದೊಳ್ ಜಿನಪೂಜೆ ಮುನಿಚರಣ- ।
ವಂದನ ಸ್ವಾಧ್ಯಾಯಸಂಯಮೋತ್ತಮ ತಪಗಳೆಂಬ ಕರ್ಮವನೆ ಮಾಡಿ ॥
ಮುಂದಣ ಸದನ್ನದಾನಂ ಮಾಳ್ಪೆನೆಂದು ಮನ- ।
ಸಂದು ಭಿಕ್ಷುಕರ ಬರವಂ ಪಾರಿ ಬೀದಿಗೆ- ।
ಯ್ತಂದಿರಲ್ಕನ್ನ ಮುನ್ನಿನ ಪುಣ್ಯಮೇ ಪುರುಷರೂಪುಗೊಂಡೆಯ್ದುವಂತೆ ॥ ೩ ॥

ಚಂದ್ರಕೀರ್ತ್ತಿಗಳೆಂಬ ಮುನಿಕುಲಾಂಬರಪೂರ್ಣ- ।
ಸೈನೂರ್ವ್ವರ್ತ್ತಪೋನಿಧಿಗಳೊಡನೆಯ್ದೆ ।
ಚಂದ್ರಗತಿಯಿಂ ಮೆತ್ತಮೆತ್ತನಡಿಯುಂ ನೆಲಕಿಕ್ಕಿ ಭಗಣಂಗಳೊಡನೆ ॥
ಚಂದ್ರನೆಯ್ತುರ್ಪಂತೆ ತಪದ ವೃದ್ಧಿಗೆಸಲಂ ।
ಚಾಂದ್ರಾಯಣದ ನೋಂಪಿಯುಂ ಮಾಡಿ ಬರ್ಪುದಂ ।
ಚಂದ್ರನಂ ಕಂಡ ಕಡಲಂತೆ ಮನದೊಳು ಹೆಚ್ಚಿ ಸದ್ಭಕ್ತಿಪೂರ್ವಕದೊಳು ॥ ೪ ॥

ಆ ತಪಸ್ವಿಗಳುಸಹಿತವರನೊಡಗೊಂಡೊಯ್ದು ।
ವೀತರಾಗಾಸನಮನಿಕ್ಕಿ ವಿಧಿಪೂರ್ವಕಂ ।
ನೀತಿನಿಪುಣಂ ಮುದದಿಸತ್ಯುತ್ತಮಾಮೃತಾನ್ನವನು ಸದ್ಭಾವವೆರಸಿ ॥
ಪ್ರೀತಿಯಿಂದಿತ್ತು ಭಿಕ್ಷೆಯನು ಮಾಡಿಸಲೊಡನೆ ।
ಸಾತಿಶಯಮೆನಿಸುವಾಶ್ಚರ್ಯಪಂಚಕಮಾಗೆ ।
ಭೂತಳಂ ಪೊಗಳುತ್ತಮಿರ್ದ್ದುದಾತನ ಸೈಪನಿನ್ನೇನ ಬಣ್ಣಿಸುವೆನು ॥ ೫ ॥
ಅಂತದಂ ಕಂಡು ತತ್ಪುರವರದೊಳಿರ್ಪ್ಪನ- ।
ತ್ಯಂತ ನಿರ್ಧನಿಕ ವಾರುಧಿದತ್ತನಾ ವೈಶ್ಯ- ।
ಕಾಂತೆ ಲಕ್ಷ್ಮೀಮತಿಗೆ ಜನಿಸಿದ ಸಮುದ್ರದತ್ತಾಖ್ಯನುತ್ತಮಶೀಲನು ॥
ಇಂತಪ್ಪ ಸಿರಿಯನಾಂ ಪಡೆದೊಸೆದು ಸತ್ಪಾತ್ರ- ।
ಸಂತತಿಗೆ ದಾನಮಂ ಕೊಡುವೆನೆಂದೆಂಬ ಹುರು- ।
ಡಂತರಂಗದೊಳು ಸಂಜನಿಯಿಸಲ್ ತನ್ನೊಳಗೆ ತಾನಿಂತೆಂದೆಣಿಸುತಿರ್ದ್ದನು ॥ ೬ ॥
ಅವಳಿಲ್ಲದಷ್ಟುಪುತ್ರರನರಸುವಜ್ಞನುಂ ।
ಬವರದೊಳ್ ಕೈದಿಲ್ಲದಿರಿವೆನೆಂಬಗ್ಗನುಂ ।
ಲವಲೇಶ ಮೌಲ್ಯವಿಲ್ಲದೆಯರ್ಥಮಂ ಪಡೆವೆನೆಂದೆಂಬ ಕಡು ಹೆಬಗನುಂ ॥
ವಿವರಿಸಲ್ಬಾಯೊಳೊಂದಕ್ಕರಂಬಡೆಯದೇ ।
ಕವಿತೆಯಂ ಮಾಡಬೇಕೆಂದೊರಲುವಾತನುಂ ।
ಸುವಿಚಾರಮಂ ಮಾಡದೇ ಅಜಂ ಸೃಜಿಸಿದವರೆಂದು ಕೋವಿದರರಿವುದು ॥ ೭ ॥
ಎಂದಾ ಸಮುದ್ರದತ್ತಂ ತನ್ನ ಬಡತನಕೆ ।
ನೊಂದು ತನ್ನೊಳಗೆ ತಾನೆ ಕಚ್ಚುಕಡಿಗೊಂಡು ।
ಹಿಂದಕ್ಕೆ ನಾನು ದೊಡ್ಡವರ ಮಗನಿದನೆಸಗೆ ಕುಂದಪ್ಪುದೆಮ್ಮ ಕುಲಕೆ ॥
ಎಂದೆಂಬುದೊಂದು ಬಯಲವಿಡಾಯಮಂ ಬಿಟ್ಟು ।
ಮುಂದಕ್ಕೆ ಕೂಲಿಕಂಬಳ ಸೇವಕಾವೃತ್ತಿ- ।
ಯಿಂದಾದೊಡಂ ಪರದುಗೆಯ್ವುದಕೆ ಮೌಲ್ಯಮಂ ಪಡೆಯದೊಡೆ ಕಾರ್ಯಮಹುದೇ ॥೮॥
ಅಡುಗೆಯಂ ಮಾಡದಾರೋಗಿಸುವೆನೆಂದೆಂಬ ।
ಕಡು ಹೆಬಗರಂತೆ ಪರದಂಗೆಯ್ಯಲೊಲ್ಲದೇ ।
ಒಡವೆಯಂ ಘಳಿಯಿಸುವೆನೆಂದೆಂಬರಿರವೆಂದು ಬಗೆದು ಪೊರಮಟ್ಟು ಪೊಳಲಂ ॥
ಬಿಡದರ್ದ್ದವರ್ಸ್ಸಹಾಯಿಗಳೊಡನೆ ನಡೆತರಲ್ ।
ಕಡಲತಡಿಗೆಯ್ದಿ ಹಡಗಿನ ಸೆಟ್ಟಿಗಳ ಕೈಯ್ಯ ।
ಹಿಡಿದು ಜೀವಿತಮನಾಳಾಗಿ ಬಡಗಣ ಕಡೆಯ ಭಗದತ್ತ ವಿಷಯಕೆಯ್ದಿ ॥ ೯ ॥
ಅಲ್ಲಿಯ ಪಳಾಶವೆಂಬೊಂದು ಬಲುಗ್ರಾಮಕ್ಕೆ ।
ನಿಲ್ಲದೆಯ್ತಂದು ಮೂರನೆಯ ವರುಷಕ್ಕೆ ನಾ- ।
ವಿಲ್ಲಿಗೆ ಬರಲ್ಬೇಕೆನುತ್ತ ಸಂಕೇತಮಂ ಮಾಡಿ ತನ್ನೊಡನೆ ಬಂದಾ ॥

ಎಲ್ಲರುಂ ದೆಸೆದೆಸೆಗೆ ಪೋಗೆ ತಾನಾ ದಿವಸ- ।
ದಲ್ಲಿ ತಡಗೆಯ್ದಿರಲಶೋಕನೆಂಬೊರ್ವ್ವ ಕಡು ।
ಬಲ್ಲಿದ ಕುಟುಂಬಿ ನಿಜಸತಿ ವೀತಶೋಕೆಯೆಂಬಳ್ವೆರಸಿ ಸುಖದಿನಿರ್ದ್ದ ॥ ೧೦ ॥
ಆ ವೇಳೆಯಲ್ಲಿ ತನಗುಳ್ಳಶ್ವಸಮಿತಿಯುಂ ।
ಕಾವವರನರಸಿ ಬರುತಿರಲವನ ಕಂಡು ಬಳಿ- ।
ಕಾ ವೈಶ್ಯನಂದನ ಸಮುದ್ರದತ್ತಂ ನುಡಿದನಿಂತೆಂದು ತಾನವನೊಳು ॥
ಆ ವಾಜಿಗಳನೋವಿಕಾವೆನಾನೆಸಲದಕೆ ।
ಜೀವಿತಮನುಸುರೆಸಲ್ನಿಮ್ಮ ಮನಸಿಗೆ ಬಂದು- ।
ದಾವುದದೆ ಸನಗೆ ಸಂಪೂರ್ಣವೆಂದೆಂಬ ಸದ್ವಚನಮನವಂ ಕೇಳುತ ॥ ೧೧ ॥
ವರಿಸ ಮೂರಂ ನಮ್ಮ ಕುದುರೆಗಳನಸುವಾಗಿ ।
ಪರಿರಕ್ಷಣಂಗೆಯ್ದು ಬಳಿಕವರ ಪಿಂಡಿನೊಳ- ।
ಗೆರಡು ಜಾತ್ಯಶ್ವಮಂ ನಿನ್ನ ಮನಸಿಗೆ ಬಂದವಂ ಕೊಂಡು ಪೋಗೆನುತ್ತ ॥
ಪಿರಿದು ಸಾದರದಿಂದೊಡಂಬಡಿಸಲಾ ನುಡಿಗೆ ।
ಹರಿಸಮಂ ಹಡೆದು ತದ್ವೈಶ್ಯ ತನುಜಾತನನ- ।
ವರತಮಿರ್ದ್ದಲ್ಲಿ ಜತನದೊಳು ಕಾಯುತ್ತಿರ್ದ್ದನಾ ತುರಗಸಂತತಿಯನು ॥ ೧೨ ॥
ಮನೆಯೊಡೆಯರಂತೆ ಮನಗೊಂಡು ರಕ್ಷಿಪುದ ಕಂ- ।
ಡನುರಾಗದಿಂದ ನಿಜ ತನುಜರ್ಗೆ ಮಾಡುವಂ- ।
ತನುವಾಗಿಯೂಟವಿಾಹಂ ವಸ್ತ್ರತಾಂಬೂಲವಾದಿಯಾದ್ಯುಪಚರವನು ॥
ವಿನಯಪೂರ್ವಕದಿ ಮಾಡಿಸುವಶೋಕನ ಮಗ- ।
ಳ್ಮನಸಿಜನ ಮಾನಿನಿಯ ರೂಪುಲಾವಣ್ಯಮುಮ- ।
ನಿನಿಸುಳಿಯದೇ ಹರಿದು ಹತ್ತಿಸಿದ ಮಾಳ್ಕೆಯೊಳ್ಸದ್ವಿಲಾಸವನೆ ಹಡೆದಾ ॥ ೧೩ ॥
ಕಮಲೆಯೆಂದೆಂಬ ಕೋಮಲೆಯಾ ವಣಿಗ್ವರನ ।
ರಮಣೀಯವಡೆದ ಸೌಂದರ್ಯ್ಯಲಾವಣ್ಯಮು- ।
ತ್ತಮಮಪ್ಪ ಸತ್ಕಲಾಪ್ರೌಢಿ ವಾಕ್ಚಾತುರ್ಯ್ಯದೇಳ್ಗೆಯುಂ ನೆರೆ ಭಾವಿಸಿ ॥
ಮಮತೆ ಪಿರಿದಾಗಿ ತನ್ನಂತಸ್ಥದೊಳ್ಕರಂ ।
ಭ್ರಮಿಸಿಯತ್ಯಂತ ಸದ್ವಿನಯೋಪಚರಮನು ।
ಭ್ರಮಿತನದಿ ಮೆಯ್ಮರೆದು ದಿನಬಂಜಿವಡೆಯದೇ ಮನವಾರೆ ಮಾಡುತಿಹಳು ॥ ೧೪ ॥
ಅಂತದಂ ಕಂಡು ಹರ್ಷೋತ್ಕರ್ಷನಾಗಿಯ- ।
ತ್ಯಂತ ಕೂರ್ಮೆಯನವಳೊಳಂತಸ್ಥದಿಂ ಮಾಡಿ ।
ಸಂತತಂ ತನ್ನೊಳಿಗದ ತುರಂಗಪ್ರತಾನಮನೊಸೆದು ಕಾಯುತಿರಲು ॥
ಪಿಂತಣವಧಿಯ ಮೂರುವರುಷಮಿರದೆಯ್ದಲೇ- ।
ಕಾಂತದೊಳ್ಕಮಲೆಯೊಡನಿಂತೆಂದು ನುಡಿದನಾ- ।
ನಂತರಿಸದೆಮ್ಮ ನಾಡಿಗೆ ಪೋಪ ದಿನಮಾಯಿತೆನಲಿಂತು ನುಡಿದಳಾಗ ॥ ೧೫ ॥

ಎನ್ನೀ ಭವಕ್ಕೆ ನೀನೇ ಕಾಂತನದರಿಂದ ।
ನಿನ್ನೊಡನೆ ಬರ್ಪೆನೆಂದೆಂಬ ನುಡಿಯಂ ಕೇಳಿ ।
ಕನ್ನೆ ಕೇಳ್ದೇಸಿಗಂ ನಾನೆಮ್ಮ ನಾಡಿಲ್ಲಿಗತಿದೂರವದುಕಾರಣಾ ॥
ನಿನ್ನ ಬರವಘಟಿತವೆನಲ್ಕೇಳುತವಳೆಂದ- ।
ಳೆನ್ನ ಜನಕಂ ಮೊದಲ್ನಿನ್ನ ಮನಸಿಗೆ ಬಂದ ।
ತನ್ನ ಕುದುರೆಯೊಳೆರಡನಾಯ್ದು ಕೊಳ್ಳೆಂದು ಭಾಷೆಯನುಸಿರ್ದನದು ನಿಮಿತ್ತಾ ॥ ೧೬ ॥
ಆ ಕುದುರೆವಿಂಡಿನೊಳಗೊಂದು ಜಲಗಾಮಿವೊಂ- ।
ದಾಕಾಶಗಾಮಿಯಿರ್ದಪುವಾಯೆರಡರೊಳ್ ।
ಬಳಾಕವರ್ಣಂ ಬಡವು ಮಯ್ಯೊಳಡಸಿಹುದದುತ್ತಮಮಪ್ಪ ಗಗನಗಾಮಿ ॥
ಆಕಾರವೂಜ್ಯನುತ್ತಮ ಶುಕಾಕ್ಷಿಕವರ್ಣ- ।
ದಾ ಕುದುರೆ ಜಲಗಾಮಿಯೆಂದದರ ಮೈಯ್ಯೊಳಿ- ।
ರ್ದ್ದಾ ಕೂನುಕುರುಹೆಲ್ಲಮಂ ತಿಳಿವ ಮಾಳ್ಕೆಯೊಳ್ಪೇಳಿ ಮತ್ತಿಂತೆಂದಳು ॥ ೧೭ ॥
ಅವರ ಮೇಲಾವಿಬ್ಬರುಂ ಪೋಗಬಹುದು ನೀ- ।
ನವನೆ ಕಯ್ಕೊಳ್ಳೆಂದು ಪೇಳೆ ಕೇಳ್ದಾ ಮಾತ- ।
ನವಧರಿಸಿ ಬಂಧು ಬಳಿಕಾ ಕುದುರೆಗಳ ವಿವರಮೆಲ್ಲಮಂ ತಿಳಿದುನೋಡಿ ॥
ಅವರಗತಿಭೇದಗಳನರಿದವಂ ಕಾಯ್ದುಕೊಂ- ।
ಡವನಿರಲ್ಕವನೊಡನೆ ಬಂದ ವೈಶ್ಯಪ್ರತತಿ ।
ತವತವಗೆ ಪೋದ ಬಿವಹಾರಮೆಲ್ಲಂ ಸಾಗಲಾ ಕುರಿತ ಮೂರಬ್ದಕೆ ॥ ೧೮ ॥
ಆ ಪಳಾಶಗ್ರಾಮಕೆಯ್ದಲವರಂ ಕಾಣು- ।
ತಾ ಪರದನಾ ಅಶೋಕನ ಬಳಿಗೆ ಬಂದೆನ್ನ ।
ಕಾಪಿನ ದಿನಂ ಮುಗಿಯಿತೆನಲೊಳ್ಳಿತಾಯ್ತೆನುತ್ತಾ ಹಿಂಡಿನೆಡೆಗೆ ಬಂದು ॥
ಈ ಪಲವು ಕುದುರೆಯೊಳ್ನಿನ್ನ ಮನಸಿಗೆ ಬಂದ ।
ರೂಪುಳ್ಳ ಕುದುರೆಗಳನಾಯ್ದುಕೊಳ್ಳೆಂದೆನ- ।
ಲ್ಕಾ ಪೆಣ್ಮೊದಲ್ತನಗೆ ಪೇಳ್ದ ಕುರುಹಿನ ತೇಜಿಗಳನಾಯ್ದು ಬೇರ್ಪಡಿಸಲು ॥ ೧೯ ॥
ಎಲೆ ಹುಚ್ಚ ಸೂರ್ಯನ ರಥಕ್ಕೆ ಯೋಗ್ಯಂಬಡೆದ ।
ಸಲೆ ಕಾಲುಮನರೂಪುರೇಖೆಸುಳಿಶುದ್ಧದಿಂ- ।
ದಿಳೆಯೊಳಗಿವಕ್ಕೆ ಬೆಲೆಯಿಡುವರಾರೆಂಬಗ್ಗಳಿಕೆಯಶ್ವಗಳನು ಬಿಟ್ಟು ॥
ಕೆಲವು ದಿನದಿಂ ಮೇಲೆ ಗತಜೀವವಡೆವ ದು- ।
ರ್ಬಲದ ಕುದುರೆಗಳನಾಯ್ದುಂ ಕೊಂಬರೇಯೆನ- ।
ಲ್ನೆಲೆ ನಿಮ್ಮ ಮಾತು ನಾನಳಿಸುಕೃತಿಯಾದ ಕಾರಣದಿನೆನಗಿವು ಸಾರ್ದುವು ॥ ೨೦ ॥
ಎಂದು ಬಳಿಕಿಂತೆಂದನಾವಪ್ರಕಾರದಿಂ ।
ಮುಂದರಿಯದೇ ಮೊದಲ್ನುಡಿದು ಕೈಕೊಂಡುದಂ ।
ಹಿಂದುಗಳೆಯುಪುದು ಸಜ್ಜನಿಕೆಗತಿದೂರವದರಿಂದಿವೆ ನನಗೆ ಸಾಕು ॥

ಎಂದುದಂ ಕೇಳಿ ಮಂದಸ್ಮಿತಾಸ್ಯನಶೋಕ ।
ಪಿಂದಕ್ಕೆ ತಿರುಗೆ ಪರಿಚಾರಕರೊಳೊರ್ವನಿಂ- ।
ತೆಂದನಿದನರಿದಿರೇ ಅಂಜದೀ ಧೂರ್ತನಾಡಿದ ಕಟಾಕ್ಷದ ಬಗೆಯನು ॥ ೨೧ ॥
ಈ ನಮ್ಮ ದೇಶಕಿವನಿರ್ಪ ನಾಡತಿದೂರ- ।
ಮೀ ನಮ್ಮ ರಾಜ್ಯಕೊಂದಿನಿಸು ಬಂದವನಲ್ಲ- ।
ಮೀ ನಮ್ಮ ಬೀಡಿಗೀ ಹೆಸರು ಕುರುಹಂ ಕೇಳಿ ಕಂಡಾತನೀತನಲ್ಲ ॥
ಈ ನಮ್ಮ ಮನೆಗೆ ಬಂದಂದಿಂದ ಮೊದಲಾಗಿ ।
ಈ ನಾಡಭಾಷೆಯೆಂದುಮನರಿವನಲ್ಲದೇ ।
ತಾನರಿವನೇ ಮುನ್ನ ನಾವು ಮೊದಲಾಗಿಯಿನಿಸರಿಯದೀ ಹಯರತ್ನದ ॥ ೨೨ ॥
ಇದರೊಳಗು ಹೊರಗನೀ ಪೊಸಬನೇನಂ ಬಲ್ಲ- ।
ನಿದು ನಿಮ್ಮ ಮಗಳು ಕಮಲೆಯು ತೇರುತಿಕ್ಕೆಯಿಂ- ।
ತಿದನೀವು ಬಲ್ಲಿರೋ ಅರಿಯಿರೋ ವೆಂದೆಂಬ ನುಡಿಗಿಂತು ನುಡಿದನವನು ॥
ಮೊದಲಿದರ ಕಾಲುಕೀಲಂ ಬಲ್ಲನಾದೊಡಿಂ- ।
ತಿದನೆಣಿಸದೇ ಭಾಷೆಮಾಳ್ಪನೇ ಕಟಕಟಾ ।
ಸುದತಿಯರ ನಂಬುವಂ ಲೋಕದೊಳ್ಕಡು ಹೆಡ್ಡನಲ್ಲವೇ ಭಾವಿಸಿದೊಡೆ ॥ ೨೩ ॥
ಮುಂಬರಿದ ನೋಟವೊಂದೆಡೆ ಮುಸುಂಕಿದ ಬೇಟ- ।
ಮೆಂಬುದೊಂದೆಡೆ ರತಿಕ್ರೀಡೆಯೊಂದೆಡೆ ಪಿರಿದು ।
ಪಂಬಲಿಪುದೊಂದೆಡೆ ನೆವಂ ಮೋದವೊಂದೆಡೆಯುಗಳ್ಕೆ ಭಾವಿಸೆಯೊಂದೆಡೆ ॥
ನಂಬಿಸುವುದೊಂದೆಡೆ ವಿಡಂಬವೊಂದೆಡೆಯಾ ನಿ- ।
ತಂಬಿನೀ ಜನಕೆ ನಿಜವಾಗಿರ್ಪರಂತವರ ।
ನಂಬುವುದರಿಂದ ಮಡಿಲೊಳ್ಕಟ್ಟಿದಾ ಹಾವ ನಂಬುವುದು ಕರಮೊಳ್ಳಿತು ॥ ೨೪ ॥
ಹೆತ್ತ ಮಾತಾಪಿತೃಗಳೆಂದು ಭಾವಿಸುವರೇ ।
ತುತ್ತಿಕ್ಕಿ ಸಲಹಿದವರೆಂದು ಮನಮಿಕ್ಕುವರೇ ।
ಉತ್ತಮದ ಪುರುಷಾರ್ಥಮಂ ಮಾಡಿದಿವರೆಂದು ಬಗೆಗೀವುದಂ ಬಲ್ಲರೇ ॥
ಚಿತ್ತವಲ್ಲಭನೆಂದು ಚಿಂತಿಸಲ್ಬಲ್ಲರೇ ।
ಅತ್ತಲೊಂದೆಡೆಗೆ ಮನಮಿಕ್ಕಿದ ಸತೀಜನಂ ।
ಮತ್ತವರನಿನಿಸು ನಂಬುವನವಂ ಲೋಕಕ್ಕೆ ಕಡುಹೆಡ್ಡ ತಾನಲ್ಲವೇ ॥ ೨೫ ॥
ನಾನಿಂತುಟನಿಸಲೆನ್ನನ್ವಯಕೆ ಲೋಕದೊಳು ।
ಹೀನಮನಮೆಂಬುದಂ ಬಲ್ಲರೇ ಅಪಕೀರ್ತಿ ।
ಈ ನೆಲದೊಳಂ ಪಸರಿಸುವುದೆಂಬುದರಿವರೇ ನನ್ನ ಮುಂದಣ ಬದುಕಿಗೆ ॥
ಹಾನಿಯಹುದೆಂಬುದಂ ತಿಳಿವರೇ ಪಿರಿದಪ್ಪ ।
ಮಾನಾಪಹರಣಮೆಂದೆಂಬುದಂ ಕಾಣ್ಬರೇ ।
ಏನಾದೊಡೇನೊ ಕಣ್ಮನಮೊಬ್ಬರಲ್ಲಿ ಮೇಲಿಕ್ಕಿದಾ ಕಾಮಿನಿಯರು ॥ ೨೬ ॥

ಎಂದಶೋಕಂ ನಿಜಸುತೆಯ ನಿರ್ಗುಣಕ್ಕೆ ಮನ- ।
ನೊಂದು ಕೊಕ್ಕರಿಸಿ ಏನಾದೊಡಾಗಲಿ ನಾನು ।
ಮುಂದನೋಡದೆ ಕೊಡುವೆನೆಂದು ನುಡಿದಾ ಮಾತನೋಸರಂ ಮಾಡಲೆನಗೆ ॥
ಸಂದೇಹಮಿಲ್ಲದೇ ಅಪಕೀರ್ತಿ ಸಂಜನಿಸಿ ।
ಮುಂದಣುತ್ತಮಮಪ್ಪ ಗತಿ ಪೈಸರಿಸುವುದದ- ।
ರಿಂದ ನುಡಿದೆರಡನಾಡುವುದು ತಲೆಯುಳಿದೊಡಂ ಕನಸುಮನಸಿನೊಳಾಗದು ॥ ೨೭ ॥

ನುಡಿದೆರಡನಾಡಿದೊಡೆ ನೂಂಕಿದೊಡೆ ಸಜ್ಜನರ ।
ನಡಿಗೆ ಬಾಗಿದರ ನೋವದೊಡೆ ಗುರುಜನಸಮಿತಿ- ।
ಗೆಡರಮಾಡಿದೊಡೆ ಯೆರೆವರನೀಗಲಾಗ ಬಾಯೆಂದಾಸೆ ಕೊಟ್ಟೊಡೆ ॥
ಕಡುಹರಿಸದಿಂ ಕಷ್ಟದುಷ್ಟರೊಡನಾಡಿದೊಡೆ ।
ಕೊಡುವೆನೆಂಬೊಡವೆಯುಂ ಮನೆಯಲ್ಲಿ ಮಡಗಿದೊಡೆ ।
ಬಿಡುವುದೈಸಿರಿ ಬಿಡದು ದುರ್ಯಶಂ ಮುಂದಕ್ಕೆ ನರಕಗತಿ ತಪ್ಪದಹುದು ॥ ೨೮ ॥

ಕವಲಾದ ಜಿಂಹ್ವೆಯೊಡವರಿವುದೇ ಸದ್ಗುಣಂ ।
ವಿವರಿಸಲ್ ಶಿಲ್ಪಿಗಾರನ ಸೂಜಿಯುಂತೆಂದು ।
ಸುವಿವೇಕಿಯಾಗಿ ಮನೆಗೆಯ್ತಂದು ಸತಿವೀತಶೋಕೆಯೊಂದನುಮತದೊಳು ॥
ಸುವಿಧಾನದಿಂದ ಸುಮುಹೂರ್ತದೊಳ್ ತನುಜೆಯುಂ ।
ತವಕದಿನವಂಗೆ ಕೊಟ್ಟಾ ತುರಗಮುಂ ಕೊಟ್ಟ- ।
ನವನಿಯೆಲ್ಲಂ ಪೊಗಳ್ವ ತೆರದಿಂದಶೋಕನೆಂಬನ್ವರ್ಥನಾಮದಿಂದ ॥ ೨೯ ॥

ಕಡುಹರಿಸದಿಂದ ಹತ್ತಿಪ್ಪತ್ತು ದಿನಮಲ್ಲಿ ।
ತಡಗೆಯ್ದು ತಮ್ಮ ನಾಡಿಗೆ ಹೋಗಬೇಕೆಂದು ।
ನುಡಿದಶೋಕನ ಕೈಯ್ಯ ಬಿಳ್ಕೊಂಡು ಮೊದಲು ತನ್ನೊಡವೆಂದ ಸಖರುಗೂಡಿ ॥
ಮುಡದಿ ಕಮಲಶ್ರೀಸಮನ್ವಿತಂ ಪೊರಮಟ್ಟು ।
ಕಡಲತಡಿಗೆಯ್ದಿ ಹಡಗಂ ಹತ್ತಿ ಕೆಲದೂರ ।
ನಡೆಯಲಾ ನಡುಸಮುದ್ರದೊಳು ನೌವ್ವಾಹಕನಶೋಕನಂದನುಮತದೊಳು ॥ ೩೦ ॥

ಈ ಹಯುದ್ವಯಮಂ ಕೂಲಿಯುಂ ಕೊಟ್ಟಲ್ಲ- ।
ದೀ ಹಡಗ ನಡಯಿಸುವುದಿಲ್ಲೆಂದು ನುಡಿದ ನೌ- ।
ವಾಹಕನ ನುಡಿಗಾ ಸಮುದ್ರದತ್ತಂ ಕೋಪದಿಂದನಿಳಿದಾ ನಾವೆಯುಂ ॥
ಮೋಹದಂಗನೆಗೂಡಿ ಜಲಗಾಮಿ ಹಯಮನಾ- ।
ರೋಹಣಂಗೆಯ್ದು ಬಳಿಕಾ ಗಗನಗಾಮಿಯುಂ ।
ಸಾಹಸಂಬಡೆಯದೇ ಪಿಡಿದು ನೀರ್ವ್ವಟ್ಟೆಯೊಳ್ ನಿಲ್ಲದೇ ನಡೆದುಬಂದು ॥ ೩೧ ॥

ಆ ಶರಧಿಯುಂ ಸರಾಗದೊಳು ಪೊರಮಟ್ಟು ನಿಜ ।
ದೇಶಮಂ ಹೊಕ್ಕು ನಡೆತಂದು ಜಲಗಾಮಿಯಾ- ।
ಕಾಶಗಾಮಿಗಳೆಡಬಲಂಪಿಡಿದು ಬರಲೆಲ್ಲರಾಶ್ಚರ್ಯ್ಯವಡುವ ತೆರದಿ ॥

ಕೌಶಂಬಿಯುಂ ಹೊಕ್ಕು ಕಡುವಿಭವದಿಂ ನಿಜನಿ- ।
ವೇಶಪ್ರವೇಶಾಂತರಂ ಮಾತೃಪಿತೃಪದ- ।
ಕ್ಕಾ ಶಶಾಂಕೋಪಮಾನನೆ ಸಹಿತ ವಂದಸಂಗೆಯ್ದು ಹರಕೆಯನಾಂತನು ॥ ೩೨ ॥
ವಾಹಳಿಯ ನೆಲಕೆ ವಸುಧಾಧೀಶನುಂ ನೃಪ- ।
ವ್ಯೂಹಸಹಿತಂ ಬಂದು ಮೋಹರಂಗೊಂಡು ನಿಲ- ।
ಲಾ ಹಯಮನಾ ವೈಶ್ಯಕುಲತಿಲಕನತಿ ಹರ್ಷದಿಂದ ಕಾಸ್ಕೆಯನೀಯಲು ॥
ಲೋಹಮಂ ಚೆನ್ನಾಗಿಯಳವಡಿಸಿ ಹಲ್ಲಣಿಸಿ ।
ವಾಹಕನ ಬರಿಸಿ ನೆಲನಿನಿಸು ಮುಟ್ಟದ ತೆರದಿ ।
ವಾಹಳಿಯ ಮಾಡಿಸಿದನಾ ಪುರಜನಂ ನೆರೆದುಬಂದು ನೋಡುತ್ತಮಿರಲು ॥ ೩೩ ॥
ಸರಿಸದೊಳ್ನೂಂಕಲೊಂದೆ ಹವಣಿನೊಳ್ಬಿಟ್ಟ ।
ಪರಿಜಿವೆಂಬಂತಾಯ್ತು ನೂಂಕಿ ಮಗಚಲ್ಕಲ್ಲ- ।
ನಿರದೆಚ್ಚವೊಂಟಿ ಮಗುಚಿದ ತೆರಂಬಡೆದುದಾಗಸದಲ್ಲಿ ತಿರ್ರೆನುತುವೆ ॥
ಭರದಿಂದ ಹಿಡಿದು ಕೊಳ್ಳಿಯ ಬೀಸಿದಂತಾ- ।
ಯ್ತುರವಣಿಸಿ ಗಜವೇಢೆಯಂ ಮಾಡಲಾ ಚೆಂಡ- ।
ನುರುಭರದಿ ಹೊಯ್ದು ತೆರನಾ ದೆಸೆಗೆಯವದೆಸೆಗೆ ನೂಂಕಲಾ ಗಗನಗಾಮಿ ॥ ೩೪ ॥
ಧರೆಯನೊಗ್ಗೈಯುದ್ದ ಹೆಗಲುದ್ದ ತಲೆಯುದ್ದ ।
ಮರದುದ್ದ ಮುಗಿಲುದ್ದಮಂ ಬಿಟ್ಟು ಬಿನ್ನಣಂ ।
ಬೆರಸಿ ವಾಹಳಿ ಮಾಡುವಾ ತುರಂಗದ ರೂಪುರೇಖೆ ಕಾಲ್ಮನವ ಕಂಡು ॥
ಪಿರಿದು ವಿಸ್ಮಯಮಾನಸಂ ನೃಪಾಲಂ ತನ್ನ ।
ವರಸುತೆಯನಂಗಸೇನೆಯನು ಬಳಿಕಾ ತನ್ನ ।
ಧರೆಯೊಳರ್ಧವನಿತ್ತನಾ ವೈಶ್ಯಕುಲತಿಲಕಗರಸೊಲಿದೊಡೇನಾಗದು ॥ ೩೫ ॥
ಸದ್ಧರ್ಮವಾಂಛೆಯಿಂ ತನ್ನ ಬಡತನದೊಂದು ।
ದುರ್ಧರಂ ಹಿಂಗಿ ತಾನುಂಗಿಸಿದ ಕಾರ್ಯಮತಿ ।
ಸಿದ್ಧಿಯಾಗಲ್ಕಾ ಸಮುದ್ರದತ್ತಂ ಕುಬೇರೋಪಮೈಶ್ವರ್ಯವಡೆದು ॥
ಶುದ್ಧದರ್ಶನಬೋಧಚಾರಿತ್ರದಲ್ಲಿ ನೆರೆ ।
ಬದ್ಧಮಾನಸನಾಗಿ ಭೂಲೋಕದೊಳ್ ಸು- ।
ಪ್ರಸಿದ್ಧನಾದಂ ಧರಾತಳದಲ್ಲಿ ಧರ್ಮದಿಂದಿನ್ನೊಂದು ಬಲ್ಲಿತುಂಟೇ ॥ ೩೬ ॥
ಚಕ್ರೇಶವಿಭವಂ ಚಮತ್ಕೃತಿಯೊಳೊದಗುವುದು ।
ಶಕ್ರಸಂಪದವೊಂದು ಸಮಯಕಪ್ಪುದು ಫಣಾ ।
ಚಕ್ರೇಶ್ವರನ ಭೋಗಮಿನಿಸು ಹೊತ್ತಿಂಗಪ್ಪುದಹಮಿಂದ್ರನೈಶ್ವರ್ಯವು ॥
ವಕ್ರಮಿಲ್ಲದೆ ನಿಮಿಷಕಪ್ಪುದಪವರ್ಗಮುಮ- ।
ನುಕ್ರಮಂ ಮಾಡದೇ ದೊರೆಕೊಂಬುದದರಿಂದ ।
ಸಕ್ರಮದಿ ಧರ್ಮಮಂ ಮಾಡಿದವರ್ಗಳಿದ ಸಂಪದಮೆಂಬುದಾವಗಹನ ॥ ೩೭ ॥

ಇಂತಿಳಾತಳಮೆಲ್ಲ ಪೊಗಳುತಿರಲತ್ತ ಭೂ- ।
ಕಾಂತಚೂಡಾಮಣಿ ಸುದಂಡಮಂಡಳಿಕನ- ।
ತ್ಯಂತ ಗುಣಮಣಿ ವೃಷಭದಾಸನೆಂದೆಂಬ ರಾಜಶ್ರೇಷ್ಠಿಯಂ ಕರೆಯಿಸಿ ॥
ಅಂತರಂ ಮಾಡದೇ ಆಕಾಶಗಾಮಿಯಂ ।
ಸಂತತಂ ಪರಿರಕ್ಷಣಂಗೆಯ್ವುದೆಂದು ಕಡು ।
ಸಂತಸದಿನಿತ್ತನಾ ಸಜ್ಜನನೊಳತಿ ಮಮತೆ ತನಗಾದ ಕಾರಣದೊಳು ॥ ೩೮ ॥
ಆ ತುರಗರತ್ನಮಂ ತಂದು ಮನೆಯೊಳಗೆ ಕಡು ।
ಭೀತಿಯಿಂ ನೆಲಮಾಳಿಗೆಯೊಳಿರಿಸಿಕೊಂಡು ಮನ- ।
ವೋತು ಪರಿರಕ್ಷಣಂಗೆಯ್ಯುತ್ತುಮಿರ್ದ್ದ ಒಂದಾನೊಂದುದಿನ ಮುಖದೊಳು ॥
ಖ್ಯಾತಿಯಂ ಪಡೆದ ವಿಜಯಾರ್ಧಪರ್ವತಕೆ ಮನ- ।
ವೋತದರ ಮೇಲೇರಿಯೆಲರ್ವಟ್ಟೆಯಿಂ ಬಂದು ।
ಸಾತಿಶಯವಡೆದಕೃತ್ರಿಮ ಸಿದ್ಧಕೂಟಮಂ ಕಂಡನತಿಹರ್ಷದಿಂದ ॥ ೩೯ ॥
ಇಳಿದಶ್ವಮಂ ತುಳಿಲ್ಗೆಯ್ದು ಮುದದಿಂ ಚೈತ್ಯ- ।
ನಿಲಯಮಂ ಬಲವಂದು ಬಗೆಯರಿದು ಭಕ್ತಿಯಿಂ- ।
ದೊಳಹೊಕ್ಕು ವಂದನಂಗೆಯ್ಯುತಿರ್ಪ್ಪ ವೃಷಭದಾಸರಾಜಶ್ರೇಷ್ಠಿಯಾ ॥
ಬಳಿಯೊಳಾ ಬಸದಿಯಂ ಬಲವಂದು ಮುಂದುಗಡೆ- ।
ಯೊಳೆ ನಿಂದುನಿಲ್ಲದೆ ನಮಸ್ಕಾರಮಂ ಮನಂ- ।
ಗೊಳೆ ಮಾಡುತಿರ್ದ್ದದಾ ಗಗನಗಾಮಿನಿಯದೊಂದು ಸ್ತವನಾನೇನೆಂಬೆನು ॥ ೪೦ ॥
ಬಳಿಕ ಜಿನಭವನಮಂ ಪೊರಮಟ್ಟು ವೈಶ್ಯಕುಲ- ।
ತಿಲಕನಾ ತುರಗರತ್ನಮನಾ ಸುರೇಂದ್ರನೊಂ- ।
ದಳವನನುಕರಿಸಿಯಾರೋಹಣಂಗೆಯ್ದು ಮಾರುತಮಾರ್ಗದಿಂದ ಬಂದು ॥
ನಿಳಯಮಂ ಹೊಕ್ಕು ನಿಶ್ಚಿಂತಮಾನಸನಾಗಿ ।
ಯಲಸದೀ ತೆರದಿನುತ್ತಮಮಪ್ಪ ಪರ್ವತಿಥಿ- ।
ಯೊಳಗಾ ಮಹೀಧರಕ್ಕೆಯ್ದಿ ಜಿನವಂದನಂಗೆಯ್ದು ಮಗುಳುತ್ತಿರ್ಪ್ಪನು ॥ ೪೧ ॥
ಇಪ್ಪತ್ತನಾಲ್ವರುತ್ತಮತೀರ್ಥನಾಥರೊಸೆ- ।
ದೊಪ್ಪದಿಂ ಕರ್ಮಕ್ಷಯಂ ಮಾಡಿದಾ ನೆಲಕೆ ।
ನಿಪ್ಪೊಸತ್ತೆನಿಪ ಭಕ್ತಿಯೊಳಾ ಹಯಮನೇರಿ ಪೋಗಿಯಭಿವಂದನೆಯನು ॥
ತಪ್ಪದೇ ಮಾಳ್ಪನೀ ಮನುಜಾವನೀತಳದೊ- ।
ಳಿಪ್ಪ ಚೈತ್ಯಾಲಯಕೆ ಪೋಗಿ ವಂದನೆಗೆಯ್ದು ।
ಬಪ್ಪನಾ ವೃಷಭದಾಸಂ ಮಾಡಿಕೊಂಬ ಪುಣ್ಯಮನೇನ ಬಣ್ಣಿಸುವೆನು ॥ ೪೨ ॥
ಇಂತು ಪುಣ್ಯೋಪಾರ್ಜನೆಯನು ಪಲಪಗಲು ನಿ- ।
ಶ್ಚಿಂತದಿಂ ಮಾಡಿಕೊಳುತಿರಲಾ ಸುದಂಡಭೂ- ।
ಕಾಂತನಹಿತಾವನೀಪಾಲ ಜಿತಸತ್ವನೆಂಬವ ತನ್ನ ಪುರವರದೊಳು ॥

ಸಂತೋಷದಿಂದೋಲಗದೊಳು ಕುಳ್ಳಿರಲೊರ್ವ್ವ- ।
ನಿಂತೆಂದನಾ ಸುಬ್ಬ ಕೌಶಂಬಿಯುಲ್ಲಿಯು- ।
ತ್ಯಂತ ಜಾತ್ಯಶ್ವವಂಬರಗಾಮಿಯುದೆಯೆಂದು ನುಡಿದ ನುಡಿಯುಂ ಕೇಳುತ ॥ ೪೩ ॥
ಒಚ್ಚತಂ ತನಗುಳ್ಳ ರಾಜ್ಯದೊಳಗರ್ಧವಂ ।
ಪಚ್ಚುಗೊಡುವೆಂ ತತ್ತುರಂಗಮಂ ತಂದರ್ಗೆ ।
ಮುಚ್ಚುಮರೆಯೇಕೆಂಬ ನುಡಿಗೆ ಕುಂಡಲನೆಂಬ ಭಟನೆಳ್ದು ಕಾರ್ಯ್ಯಮುಗಿದು ॥
ಅಚ್ಚುತಂಬಡೆವುದಕ್ಕೇನು ಕಾರಣಮಿದೇ- ।
ನಚ್ಚರಿಯೆ ನಾನು ತಹುದಕ್ಕೆ ಈ ಪಂಥ ಪಡಿ- ।
ಪುಚ್ಚಮೇ ಕೊಡು ವೀಳೆಯುಮನೆಂದು ಬಲ್ಲಿತಂ ನುಡಿದು ಜೋಳ್ಕೊಂಡು ಬಂದು ॥ ೪೪ ॥
ದೇಶದೇಶದೊಳು ತೊಳಲುತ್ತೊಂದು ನಗರ ಪ್ರ- ।
ದೇಶದೊಳಗೊರ್ವ್ವ ಸಾಗರಚಂದ್ರರೆಂಬ ಯೋ- ।
ಗೀಶನಂ ಕಂಡು ಕಾಪಟ್ಯಹೃದಯುಂ ನಮಸ್ಕರಿಸಿ ಸದ್ಬ್ರಹ್ಮಚಾರಿ ॥
ವೇಷಮಂ ಧರಿಸಿ ಸಮ್ಯಗ್ದೃಷ್ಟಿಯೆಂಬಂತಿ- ।
ರಾಶಾಸ್ತ್ರದೋಜೆಗಳನರಿದು ಸಚ್ಚರಿತದೊಳ್ ।
ಕೌಶಲ್ಯನಾದನಾ ಕುಂಡಲಭಟಂ ತನ್ನ ಕಾರ್ಯ್ಯಂ ನಿಮಿತ್ತಮಾಗಿ ॥
ಬಳಿಕ ಕೌಶಂಬಿಪುರಕೆಯ್ದಿ ಸಚ್ಚರಿತಗುಣ- ।
ನಿಳಯನಾ ವೃಷಭದಾಸಂ ಮಾಡಿಸಿದ ಚೈತ್ಯ- ।
ನಿಲಯುಮಂ ಪೊಕ್ಕು ಕಪಟದಿನೀತನೇ ಪರಮ ಸತ್ಯನಿಧಿಯೆಂಬ ತೆರದಿ ॥
ಒಳಗುದೋರದೆ ಚಕ್ಷುರೋಗ ಬಲ್ಲಿತ್ತಿದಂ ।
ಕಳೆಯುಲಳವಲ್ಲವೆಂದೊಂದರುವೆಯುಂ ದಿಟ್ಟ- ।
ಗಳ ಮೇಲೆ ಕಟ್ಟಿಯುಪವಾಸಮಂ ಕೊಂಡನೆಲ್ಲವರುಮ್ಮಳಿಸುವಂದದಿ ॥ ೪೭ ॥
ಈ ವಿಧದಿ ಕೃತ್ರಿಮಬ್ರಹ್ಮಚರಿಯಿರಲತ್ತ- ।
ಲಾ ವೃಷಭದಾಸ ರಾಜಶ್ರೇಷ್ಠಿಯಾಲಕೆ ।
ದೇವಿಲಂ ಬರಲಿಂತು ಬೆಸಗೊಂಡನತಿಥಿಗಳ್ನಮ್ಮ ಚೈತ್ಯಾಲಯುಕ್ಕೆ ॥
ಈ ವೇಳೆಯಲ್ಲಿ ಬಂದವರುಂಟೆ ಎನಲೆಂದ- ।
ನಾ ವೈಶ್ಯವಿಭುವಿನೊಳಗೊರ್ವ್ವನಕ್ಷಿವ್ಯಾಧಿ- ।
ಯಾವರಿಸಿದಾತನುತ್ತಮನೊರ್ವ್ವ ಬ್ರಹ್ಮಚರಿ ಬಂದನೆಂಬುದನು ಕೇಳಿ ॥ ೪೭ ॥
ಜಿನಭವನಕೆಯ್ದಿ ಜಿನಪತಿಗೆ ವಂದನೆಮಾಡಿ ।
ಅನುನಯುದಿನಾ ಬ್ರಹ್ಮಚಾರಿಗಿಚ್ಛಾಕಾರ- ।
ವನೆ ಮಾಡಿ ಬಳಿಕೆಂದನೆಲೆ ತಪಸ್ವಿ ನಿಮಗೆ ನಯುನರೋಗಂ ಬಲ್ಲಿತು ॥
ಅನಿತರಿಂ ನಮ್ಮ ಮನೆಗೆಯ್ದಿದೊಡೆ ಮಾಣಿಸುವೆ- ।
ನೆನೆ ಬ್ರಹ್ಮಚಾರಿಗಳ್ ಗೃಹದೊಳಗೆ ಬಂದಿರ್ಪು- ।
ದನುಚಿತಮೆನಲ್ಕೆಂದನತಿಥಿಗಳ್ಗಿದು ಗೃಹಮುಮಿದರಣ್ಯಮೆಂಬುದುಂಟೇ ॥ ೪೮ ॥

ನಿರುತದಿಂ ಸುಖದುಃಖವೆರಡು ರೋಗಮರೋಗ- ।
ವೆರಡು ಹಗೆಕೆಳೆಯೆರಡು ಸಾವುಹುಟ್ಟೆರಡು ಸಲೆ ।
ಸಿರಿಬಡತನಂಗಳೆರಡಾ ಪ್ರಮೋದವಿಷಾದವೆರಡು ಮಾನಾಪಮಾನ ॥
ಎರಡು ಭೋಗಮಭೋಗವೆರಡು ಪಸಿವ್ರನಿಃಪಸಿ- ।
ವೆರಡು ರುಚಿಯರುಚಿಯೆಂಬೆರಡು ಭಾವಿಸಿ ನೋಡೆ ।
ವರವೀತರಾಗರ್ಗೆ ಸಮವಾಗಿ ತೋರದಿಹುದೇ ಮಹೀಮಂಡಲದೊಳು ॥ ೪೯ ॥
ಎಂದು ಪಿರಿದಾಗ್ರಹಂಗೆಯ್ದು ನಿಜಮಂದಿರಕೆ ।
ತಂದಿರಿಸಿಕೊಳಲದಂ ಕೇಳಿ ಕೆಲ ಧೂರ್ತರಿಂ ।
ತೆಂದರೀ ಚಪಳನತಿಕಪಟದಿಂದೀ ಜೈನವೇಷಮಂ ಧರಿಸಿಕೊಂಡು ॥
ಬಂದನಾಗಲೆವೇಳ್ಕುಮದರಿನಿವನಂ ನಂಬಿ ।
ಮಂದಿರದೊಳಿರಿಸಿಕೊಂಡೊಡೆ ಕೇಡು ತಪ್ಪದೇ ।
ಬಂದಲ್ಲದೇ ಮಾಣದದುಕಾರಣದಿನಿವನನೊಳಕೊಂಬುದುಚಿತವಲ್ಲ ॥ ೫೦ ॥
ಆವನಾನೊರ್ವನಾಗಲಿ ಪೊಸಬನೆಯ್ತರಲ್ ।
ಭಾವಜ್ಞರಾದವರ್ ಪತ್ತೆಂಟು ಪಗಲವನ ।
ಭಾವಮಂ ನೋಡಿಯೊಳ್ಳಿದನಾದೊಡೊಳಕೊಳ್ಳಬೇಕು ದುರ್ಜನನಾದೊಡೆ ॥
ಓವದೇ ಹೊರಹಾಕಬೇಕಲ್ಲದೊಡೆಯುವಂ- ।
ಗಾವರಿಪುದಪಕೀರ್ತಿ ಕೇಡುಸಂಭವಿಸುವುದು ।
ಭೂವಲಯಕಲ್ಲದೇ ಹೋಹನವನೀ ನೀತಿ ನಿಜವೆಂದು ನಂಬಬೇಕು ॥ ೫೧ ॥
ಎನಲೆಂದನೆಲೆ ನಿಂದಕರಿರ ಉತ್ತಮಮಪ್ಪ ।
ಜಿನರೂಪಧರಿಸಿ ಸಮ್ಯಗ್ದೃಷ್ಟಿಯಾಗಿ ಜನ- ।
ವಿನುತ ವ್ರತವನು ಕೈಕೊಂಡು ಪಂಚೇಂದ್ರಿಯಮನತಿನಿಗ್ರಹಂ ಮಾಡಿದಾ ॥
ಮುನಿಗಳೀ ಕಾಲಕ್ಕಪೂರ್ವಮಂತವರ ದು- ।
ರ್ಜನಿಸಿದೊಡೆ ಜನ್ಮಜನ್ಮಾಂತರಕೆ ದೋಷ ಸಂ- ।
ಜನಿಸದೇ ಬಿಡದದರಿನಿವರನೀಯಂದದಿಂ ಕೆಡೆನುಡಿವುದುಚಿತವಲ್ಲ ॥ ೫೨ ॥
ಚಾರುಚಂಪಕಮನಾ ಚಂಚರೀಕಂ ತಿರ- ।
ಸ್ಕಾರಮಂ ಮಾಡುವುದು ಪಗಲ ಕಂಡೊಡೆ ಗೂಗೆ ।
ಸೇರದಿರ್ಪ್ಪುದು ಚಂದ್ರನಂ ಕಂಡ ಚಕ್ರವಾಕಂ ದುಃಖಮಂ ಮಾಳ್ಪುದು ॥
ಕ್ಷೀರಮಂ ಪೈತ್ಯಜ್ವರಂ ಪಿಡಿದವಂ ಕಾಣೆ ।
ದೂರೀಕೃತಂ ಮಾಳ್ಪುದುತ್ತಮರುಮಂ ಕಂಡ ।
ಕ್ರೂರಮಾನಸರು ನಿಂದಿಸಿ ಮಾತನಾಡುವುದು ನಿಜವಿಳಾಮಂಡಲದೊಳು ॥ ೫೩ ॥
ಇಂತೆಂದು ತನ್ನ ಹತ್ತಿರೊಳಿರ್ದ ಧೂರ್ತರಂ ।
ಕಂತುನಿಭ ವೃಷಭಸೇನಂ ತಿರಸ್ಕಾರಮಂ- ।
ಪ್ಪಂತು ನುಡಿದಾ ನುಡಿಯ ಕೇಳಿ ಕುಟಿಲ ಬ್ರಹ್ಮಚಾರಿಯೆಲೆ ವೈಶ್ಯವಿಭುವೇ ॥

ಎಂತಾನುಮೊಂದ ನುಡಿದೊಡೆ ನಿನ್ನವಳನು ನೀ- ।
ನಿಂತು ನಿರ್ದ್ಧಾಟಿಸುವರೇ ಲೋಕದಲ್ಲಿ ಗುಣ- ।
ವಂತರ್ಗ್ಗೆಯಾವನಾನೊರ್ವ್ವವಂ ತಪ್ಪಿದೊಡೆ ಮೊಗಗೆಡಿಸುವುದು ಧರ್ಮವೇ ॥ ೫೪ ॥
ಕಣ್ಣನೊಂದಾನೊಂದುವೇಳೆ ತಾಗಿದ ಕೈಯ್ಯ ।
ಮೊಣ್ಣಾಗುವಂತೆ ಮಾಡುವೆನೆಂಬುದುಚಿತಮೆ ।
ಚಿಣ್ಣದರಯುಂ ಮೊದಲ್ತನ್ನ ತನನಿಂಗೆ ಬೇಕಾದನ್ನಬೇರ್ಕೆಸದಿರೆ ॥
ಉಣ್ಣದದನೆಂದಿಂದಿಗಂ ತೊರೆವುದೊಳ್ಳಿತೇ ।
ಜಿಣ್ಣತಂಬಡೆದ ಭವ್ಯೋತ್ತಮರ್ ಕಡುಮುನಿದು ।
ಬಣ್ಣಗೆಡಿಸುವರೆ ತಮ್ಮವರೊಂದುವೇಳೆಯೊಳ್ತಪ್ಪುಮಾತಂ ನುಡಿದೊಡೆ ॥ ೫೫ ॥
ಈಪರಿಯೊಳುತ್ತಮಿಕೆಯುಂ ನುಡಿದ ತಾಪಸನ ।
ಕಾಪಟ್ಯವರಿಯುದೇ ಮತ್ತಲ್ಲಿ ಕೆಲಬರ್ಮ- ।
ಹಾಪುರುಷರಿಂತೆಂದರಿವರವನಿಗುತ್ತಮರ್ಸ್ಸತ್ಯಪ್ರವೀಚಾರರು ॥
ಕಾಪುರುಷರಾದವರನೊಳ್ಳಿತಾದವರನೊಂ- ।
ದೇಪರಿಯೊಳಂ ಕಾಣ್ಬ ಸಜ್ಜನಪ್ರತತಿಗಿ- ।
ನ್ನೀ ಪೃಥ್ವಿಯಲ್ಲಿ ಸರಿಯಾದವರ ಸಂಗಮಂ ಮಾಡಿದೊಡೆ ಪುಣ್ಯಮುಂಟು ॥ ೫೬ ॥
ಚಿತ್ತಿಬಿನ್ನಣದಿಂದ ಗೆಯ್ದು ನೀರೆರೆದವರ್ಗೆ ।
ತತ್ತರಂದರಿದುರಿಯೊಳಿಟ್ಟು ಬೇಯಿಸಿದವರ್ಗೆ ।
ಉತ್ತಮದ ರಸಮನೊಂದೇಪರಿಯೊಳು ಕೊಡುವ ರಸದಾಳಿಯೆಂಬಂದದಿ ॥
ಚಿತ್ತಶುದ್ಧಿಯೊಳು ಜೀವಸ ಸಂಭವಿಸಿದವರ್ಗೆ ।
ವೊತ್ತಿಕಾಪಟ್ಯಮಂ ಮಾಡಿದ ಮನುಷ್ಯರ್ಗೆ ।
ಅತ್ತಿತ್ತಲೊಂದು ಪರಿಯಾಗದೇ ಸಜ್ಜನಪ್ಪುರುಷಾರ್ಥಮಂ ಮಾಳ್ಪರು ॥ ೫೭ ॥
ಎಂದು ಕೊಂಡಾಡುತಿರಲಾ ಧರ್ಮವಾತ್ಸಲ್ಯ- ।
ದಿಂದ ನಿಜಮಂದಿರದೊಳಿರಿಸಿ ಪಿರಿದಾಗಿ ಮನ- ।
ಸಂದು ತದ್ಬ್ರಹ್ಮಚಾರಿಯ ಮನಕೆ ಒಪ್ಪಂತೆ ತನ್ನ ಒಸಿರಿಂದಬಂದಾ ॥
ನಂದನರ ಮೇಲತಿಪ್ರೀತಿಯುಂ ಮಾಳ್ಪ ತೆರ- ।
ದಿಂದ ವೈಯ್ಯಾವೃತ್ಯಮಂ ಮಾಡಿದಂ ಮನುಜ- ।
ಮಂದಾರನಾಶ್ರಿತಜನಾಧಾರನಾ ವೃಷಭದಾಸನುತ್ತಮಶೀಲನು ॥ ೫೮ ॥
ತನ್ನನುದರದೊಳು ಗರ್ಭೀಕರಿಸಿಕೊಂಡಿರ್ದ್ದ ।
ಮುನ್ನೀರನಾ ವಡಬಶಿಖಿ ಹೀರುವಂದದಿಂ ।
ತನ್ನನಂಗೀಕರಿಸಿಕೊಂಡಿರ್ದ್ದ ಭೂರುಹಮನಾ ಅಗ್ನಿಸುಡುವಂದದಿ ॥
ಚೆನ್ನಾಗಿ ತನ್ನ ಮನೆಯೊಳಗೆ ತಂದಿರಿಸಿಕೊಂ- ।
ಡುನ್ನತಿಕೆವಡೆದ ಪರಿರಕ್ಷಣೆಯು ಮಾಡಿದಾ ।
ಸನ್ನುತಗುಣಾಭರಣಭೂಷಿತಂಗಾ ದುಷ್ಟಮಾನಸಂ ಕೇಡನೆಣಿಸಿ ॥ ೫೯ ॥

ಮತ್ತೊಂದು ದಿನದ ಮಧ್ಯಮರಾತ್ರಿಯಲ್ಲಿಯು- ।
ತ್ಯುತ್ತಮ ವೃಷಭದಾಸನೊರಗಿರ್ಪ ವೇಳೆಯುಂ ।
ದತ್ತಾವಧಾನದಿಂ ಕಾದುಕೊಂಡಿರ್ದ್ದ ಜತನದೊಳು ಮಂದಿರದೊಳಿರ್ದ್ದ ॥
ತತ್ತುರಂಗವನು ತೆಗೆದಂಗಣಕೆ ಹಲ್ಲಣಿಸಿ ।
ಹತ್ತಿ ಹೊಯ್ದಾ ಚಮ್ಮವಟ್ಟಿಗೆಯು ಹುಯ್ಲಿಗೆ ಕ- ।
ರುತ್ತು ನಭಕುಪ್ಪರಿಸೆ ಜಗುಳ್ದಧೋಗತಿಗೆ ಬೀಳ್ವಂದದಿಂ ಬಿಳ್ದನವನು ॥ ೬೦ ॥
ಮೃಗಿಗಂ ಮಳೂಕಂ ಜನಿಸಿ ತತ್ತಿಯೊಳಗಿರ- ।
ದೊಗೆದು ಪಕ್ಷಬಲದಿನಾ ನಭೋಮಾರ್ಗಕ್ಕೆ ।
ನೆಗೆವಂದಿನಶ್ವಮೋ ದೇವದಾನವನಿಕರವೆಲ್ಲವುಂ ಮಥಿಸುವಾಗ ॥
ಸೊಗಸುಗಡಲೊಳ್ಪುಟ್ಟಿಯಾ ಅಮರಲೋಕಕ್ಕೆ ।
ಮಿಗೆ ಹಾರುವುಚ್ಚೈಶ್ರವಮೊ ತಾನಿದೆಂಬಂತೆ ।
ಗಗನಗಾಮಿನಿ ತುರಂಗಂ ಪಾರಿತತಿಭರದಿನಾ ಪ್ರಭಂಜನಮಾರ್ಗ್ಗಕೆ ॥ ೬೧ ॥
ಪಸುವಟ್ಟೆಯೆಸೆವ ಪೊಸಲೇವೆಯಾ ಮೆಯ್ವಣ್ಣ ।
ಕಿಸುಗಲ್ಲಕೀಲಣೆಯು ಮೊಗಮುಟ್ಟೆ ನವಚಂಚು ।
ಮಿಸುಕಿ ಸೂತ್ರಿಕೆಯೊಳಿಕ್ಕಿದ ವಾಘೆಯುಂಗಳೆಯಾ ಕೊರಲ್ಪಿಡಿದ ರೇಖೆ ॥
ಮಿಸುಗುವಂಕವೆ ಕಾಲ್ಗಳಾಕಾಲೆ ಕೋಡುಗರಿ- ।
ಯೆಸಕಮಂ ಪಡೆಯೆ ತದ್ವಾಜಿಯಾಕಾಶದೊ- ।
ಳ್ಕುಸುಮಬಾಣನ ರಥದ ಗಿಳಿಯಂತೆ ವಿಜಯಾರ್ಧಗಿರಿಯ ಬಸದಿಗೆ ಪಾರಿತು ॥ ೬೨ ॥
ಆ ಗಳಿಗೆಯಲ್ಲಿಯರವಿಂದಬಾಂಧವನುದಯ- ।
ಮಾಗಲಲ್ಲಿಗೆ ಚಾರಣವ್ರತೀಂದ್ರರ್ಮ್ಮನೋ- ।
ರಾಗದಿಂ ಬಂದು ಬಸದಿಯ ಹೊಕ್ಕು ದೇವತಾವಂದನಂಗೆಯ್ಯುತಿರಲು ॥
ಆ ಗಗನಪಥವಿಡಿದು ವಿದ್ಯಾಧರೇಂದ್ರ ಚಿಂ- ।
ತಾಗತಿವೆಸರನೊರ್ವ್ವನೆಯ್ತಂದು ತದ್ವೀತ- ।
ರಾಗಂಗೆ ನಮಿಸಿಯಾ ಗುರುವಿನಡಿದಳಕೆರಗಿ ಕುಳ್ಳಿರಲ್ಕತಿ ಭರದೊಳು ॥ ೬೩ ॥
ವಿಶ್ರುತಮೆನಿಪ್ಪ ವಿಬುಧಾಚಲೇಂದ್ರಮನಾವ- ।
ನುಶ್ರುತಂ ಮೂಲೋಕಮೆಲ್ಲಮರಿವಂದದಿಂ- ।
ದಶ್ರಮದಿ ತಿರಿತರ್ಪ್ಪೆವೆಂಬುದಂ ತತ್ಖೇಚರಾವನಿಪಾಲಕಂಗೆ ॥
ಆ ಶ್ರುತಾಂಬುಧಿಚಂದ್ರಮುನಿಗಳೆ ತೋರುವ ಸ- ।
ಹಸ್ರಕಿರಣನ ತೇರತೇಜಿಯೆಂಬಂತೆ ಮು-
ಕ್ತಿಶ್ರೀ ಮನೋವಲ್ಲಭನ ಗೃಹವ ಬಲವಂದುದಾ ವಾಜಿ ನೆಲಮುಟ್ಟದೆ ॥ ೬೪ ॥
ಅದನು ಕಂಡಾ ಖಚರವಲ್ಲಭಂ ಕರಮನುರು- ।
ಮುದದಿ ಮುಗಿದೆಲೆ ಮುನಿಕುಲೋತ್ತಂಸನೇ ಕೇಳು ।
ಹೃದಯಶುದ್ಧಿಯೊಳು ನವರತ್ನಮಯ ಸಂಜೋಗವೆರಸಿ ಲೋಕಾಧೀಶನಾ ॥

ಸದನಮಂ ಸನ್ಮಾರ್ಗ್ಗದಿಂ ಪ್ರದಕ್ಷಿಣೆಗೆಯ್ವು ।
ಕುದುರೆ ತಾನೆಲ್ಲಿಯದೆನಲ್ಕೇಳಿ ಕರುಣದಿಂ ।
ಸದಮಲಜ್ಞಾನಸಂಪನ್ನರದುಬಂದ ಕಥನಮನಿಂತು ಪೇಳ್ದರಾಗ ॥ ೬೫ ॥
ಇದು ಸುಬ್ಜ ಕೌಶಂಬಿಯರಸಿನ ತುರಂಗಮಿಂ- ।
ತಿದು ಗಗನಗಾಮಿಯಿದನಾ ವೃಷಭದಾಸನತಿ ।
ಮುದದಿನಾರೋಹಣಂಗೆಯ್ದಿಲ್ಲಿಗೆಯ್ದಿ ದಿನಚರಿ ತೀರ್ಥವಂದನೆಯನು ॥
ಹೃದಯಶುದ್ಧಿಯೊಳೊಸೆದು ಮಾಡಿ ಮಗುಳುತ್ತಿರ್ಪ್ಪ- ।
ನಿದನೊರ್ವ್ವ ತಸ್ಕರಂ ತದ್ಗುಣಾಂಬೋಧಿಯಂ ।
ಚೆದುರಿಸಿ ಬಳಿಕ್ಕ ಕಳ್ದೇರಿ ನಿಷ್ಠುರದಿಂದ ಕರಘಾತಮಂ ಮಾಡಲು ॥ ೬೬ ॥
ಅದನು ಸೈರಿಸಲಾರದಾ ಖಳನನಾ ನೆಲ- ।
ಕ್ಕೊದರಿ ಮುಗ್ಗಿರಿವಂತೆ ಕೆಡಹಿ ತಾನನುದಿನಂ ।
ಸದಮಲಗುಣಾಲಂಕೃತನ ಕೊಂಡುಬಂದುದೊಂದಭ್ಯಾಸಕೀ ಶಿಖರಿಗೆ ॥
ಪದೆದುಬಂದತ್ತು ಬಳಿಕಿದರೊಂದು ಕಥನದಿಂ ।
ವಿದಿತ ಗುಣಮಣಿಗೆ ತದ್ಭೂಪನಿಂದುಪಸರ್ಗ್ಗ- ।
ವೊದವಿರ್ಪ್ಪದೀಗವದರಿಂದ ನೀನಿದಂ ತತ್ಪುರಕೆ ಕೊಂಡು ಪೋಗು ॥ ೬೭ ॥
ತಡಮಾಡದೆಂಬ ನುಡಿಯಂ ಕೇಳಿಯಾ ಹಯಮು- ।
ನಡರಿಯಾಕಾಶಮಾರ್ಗ್ಗದೊಳಾವಿಯಚ್ಚರಂ ।
ನಡೆದುಬರುತ್ತಿರಲತ್ತಲಾ ವಂಚಕಂ ತನ್ನ ಛಿದ್ರಿಸಿ ನಭೋಗಾಮಿಯಿಂ ॥
ತಡೆಯದೇ ಕಳ್ದೊಯ್ದುದಂ ಕಂಡು ಬೆದರಿ ಎದೆ ।
ಧಡರೆಂದು ಬಡಿಯಲಿನ್ನೇವೆನಕಟಕಟ ಎ- ।
ನ್ನೊಡೆಯನಾರುಂ ನಂಬದನ ನಂಬಿಯತಿಜತನಮತಿಜತನಮಾರದೆಂದು ॥ ೬೮ ॥
ಕೊಟ್ಟ ಕುದುರೆಯನು ಮನಮುಟ್ಟಿ ನೋಡದೆ ನನ್ನೊ ।
ರಟ್ಟತನದಿಂದಮಿಾ ವಂಚಕನೊಳಗೆ ತಂ- ।
ದಿಟ್ಟು ಕುದುರೆಯನು ನೀಗಾಡಿ ಬಳಿಕೀ ಮಹೀಪಾಲಕಂಗೀ ಮನೆಯನು ॥
ಮುಟ್ಟುಗೋಳಿಂಗೀಡುಮಾಡಿ ಮನೆಮಕ್ಕಳುಂ ।
ಕೆಟ್ಟು ಪೋಪಂತೆ ಮಾಡಿದೆನಲಾ ಎಂದು ಬಾ- ।
ಯ್ಬಿಟ್ಟು ಹಂಬಲಿಸಿ ಮುಂದಣ ಕೇಡಿನೊದವನಾರ್ಬ್ಬಲ್ಲರೀ ಭೂತಳದೊಳು ॥ ೬೯ ॥
ಹಿಂದೆ ನಾನೆಸಗಿದಘವಶದಿ ಬಂದಿತ್ತೈಸೆ ।
ಎಂದು ತಲೆಯಂ ತೂಗುವಾಗ ಕೆಲಬನ್ನುಡಿದ- ।
ರಂದು ನಾನವಸತಿಶತಂ ಸಿತಗನವನನೊಳಕೊಳಲು ಕೇಡಿರದಪ್ಪುದು ॥
ಎಂದ ಮಾತಂ ಕಿವುಡುಗೇಳ್ದೆಯಲ್ಲಾ ಎನ- ।
ಲ್ಕಂದಮತಿ ನಾನವನ ಸಭ್ಯತನಮಂ ಸತ್ಯ- ।
ಮೆಂದುದಂ ಕಾದೆನವನಿಯೊಳು ಕಾಪಟ್ಯಮಂ ಭೇದಿಸಲ್ಬಲ್ಲರಾರು ॥ ೭೦ ॥

ತನ್ನ ತಾನಂತರಿಯದಿರದೀ ಕುಠಾರವೆಂ- ।
ದೆನ್ನದೇಯುದಕೆ ಕಾವಂ ತನ್ನ ಕೊಂಬಿಂದ ।
ಮುನ್ನರಿಯದೇ ಕೊಡುವ ಮರದಂತೆ ನನಗ ಕೇಡಂ ಮಾಳ್ಪನೆಂದರಿಯದೆ ॥
ನನ್ನ ಮನೆಯೊಳಗಿರಿಸಿಕೊಂಡು ಪುರುಷಾರ್ಥಮಂ ।
ಚೆನ್ನಾಗಿ ಮಾಡಿ ಕೇಡಿಂಗೆ ಭಾಜನನಾದೆ ।
ಮುನ್ನಮಾಡಿದ ಕಿಲ್ಬಿಷದ ಫಲದಿನಿನ್ನೆನಗೆ ಶರಣು ಸಮ್ಯಗ್ದರ್ಶನ ॥ ೩೧ ॥
ಎನುತೀಗ ಬಂದೀ ಮಹೋಪಸರ್ಗಂ ಪಿಂಗು- ।
ವನಿತು ಸಮಯಂ ಮನೋವಾಕ್ಕಾಯ ಶುದ್ಧಿಯೊಳು ।
ಜಿನರಾಜನೇ ಸಾಕ್ಷಿಯಾಗಿಯಾಹಾರಮೆನ್ನೀ ಶರೀರಂ ನಿವೃತ್ತಿ ॥
ಎನುತ ಸನ್ಯಸನಮಂ ಕೈಕೊಂಡು ಕೈಯಿಕ್ಕಿ ।
ಜನವಿನುತ ಗುಣಮಣಿಗಣಾಭರಣರಂಜಿತಂ ।
ಜಿನಪದಾಂಭೋಜಾತಮತ್ತಮಧುಕರ ವೃಷಭದಾಸನೊಪ್ಪಿರ್ದನಾಗ ॥ ೩೨ ॥
ಆ ಸಮಯದಲ್ಲಿ ಹಯರತ್ನಮಂ ತದ್ವೃಷಭ- ।
ದಾಸನೊಳು ವಿಡ್ಡಿಯಂ ಮಾಡಿ ಕೆಡಿಸಿದುದನರಿ- ।
ದಾ ಸುದಂಡಾವನೀಶಂ ಕೆಕ್ಕಳಂಗೆರಳಿಯಾಜ್ಞೆಯುಮನಾ ದ್ರೋಹಿಗೆ ॥
ಓಸರಂ ಮಾಡದೇ ಮಾಡಬೇಕೆಂಬಾಗ- ।
ಳಾ ಸವಿೂಪಸ್ಥರಿಂತೆಂದರವನೆಸಗಿರ್ದು- ।
ದಾಸೀನಮಂ ಕಂಡು ಸೈರಿಸುವರಾರಿದಕ್ಕೊಡಬಡುವರಾರಿಳೆಯೊಳು ॥ ೩೩ ॥
ಈ ರೀತಿಯಿಂ ನುಡಿದ ನುಡಿಯುಕ್ಕುವಾಜ್ಯದೊಳ್ ।
ನೀರನಿರದೇ ಹುಯ್ಯಲತಿಗಳಯಪ್ಪಂತೆ ।
ಭೂರಮಣನೊಡಲೊಳುದಯಿಸಿದಾ ಮುನಿಸುಗಿಚ್ಚು ದಂದಹ್ಯಮಾನಮಾಗೆ ॥
ಧಾರುಣೀತಳಮನೆಲ್ಲವನು ಸುಡುತಿರಲು ನಗ- ।
ರೀರಕ್ಷಕನ ಕರಿಸಿ ಈಗಳಿನಮಾತ್ರದೊಳ- ।
ಗಾರಯ್ಯದಾ ದ್ರೋಹಿಗಾಜ್ಞೆಯಂ ಕಡುಭರದಿ ಮಾಡೆಂದು ಕಳುಹಲಾಗ ॥ ೩೪ ॥
ಅರಸಿನ ದುರಾಗ್ರಹಂ ಕಂಡು ಪುರರಕ್ಷಕಂ ।
ಭರದಿಂದ ಬಂದು ಬಸದಿಯೊಳು ಕುಳ್ಳಿರ್ದ ಬಂ- ।
ಧುರಮೂರ್ತಿಯಾ ವೃಷಭದಾಸನನುಪಮಶೀಲಗಾಜ್ಞೆಯಂ ಮಾಳ್ಪೆನೆಂದು ॥
ಕರವಾಳಮಂ ಜಡಿಯುತೊಳಹೊಗುವ ಸಮಯದೊಳ್ ।
ಪುರದ ಜನಮೆಲ್ಲ ನಡೆನೋಡುತಿರಲ್ ಯಕ್ಷ- ।
ರಿರದೆಯ್ದಿ ಮರವಾನಸರ ತೆರದಿ ಕೀಲಣಂಗೆಯ್ಯಲಾ ಸಮಯದಲ್ಲಿ ॥ ೩೫ ॥
ಮತ್ತಮಾ ಪೊಳಲ ಜಿನಮಂದಿರದ ವಂದನೆ ನಿ- ।
ಮಿತ್ತಂ ಮನೋರಾಗದಿಂ ರಾಜರಾಜನಾ ।
ಉತ್ತರ ದಿಶಾಭಾಗದಿಂದ ನಿಜವಾಹಸಮನೇರಿ ನಡೆತರ್ಪ್ಪ ತೆರದಿ ॥

ಉತ್ತಮ ಗುಣಾಭರಣನಾ ಖೇಚರಾವನಿ- ।
ಪೋತ್ತಂಸನಂಗದೊಳ್ ಭೂಷಣದ ಮಣಿರುಚಿ ತ- ।
ಳತ್ತಳಿಸೆ ತತ್ತುರಂಗಮನೊಲವಿನಿಂದೇರಿ ಹರುಷದಿಂ ಬಂದನಾಗ ॥ ೭೬ ॥
ಅಪ್ರಬುದ್ಧಿ ಕೆಯಿನಾದವನಿಪನ ಲಗ್ಗಮಂ ।
ನಿಃಪ್ರಪಂಚೆಗೆಸಲಂ ತಾನೆ ತಿದ್ದುವೆನೆಂದು ।
ತತ್ಪಭೆಯ ತೀವ್ರಮಂ ಬಿಸುಟು ತನ್ನಾ ತೇರತೇಜಿಯಂ ತೆಗೆದುಕೊಂಡು ॥
ಸುಪ್ರಭಾತಾರ್ಕನೆಯ್ದುವ ಮಾಳ್ಕೆಯಿಂದ ನಗ- ।
ರೀಪ್ರಜೆಗಳೆಲ್ಲರಾಶ್ಚರ್ಯವಡುವಂತೆ ಖಚ- ।
ರಪ್ರಭು ಸರಾಗದಿಂದಾ ಕುದುರೆಯೇರಿ ನಭದತ್ತಣಿಂದಿರದೆ ಬಂದು ॥ ೭೭ ॥
ಇಳಿದು ಕುದುರೆಯನು ಬಲವಂದು ಬಳಿಕಾ ಚೈತ್ಯ- ।
ನಿಳಯಮಂ ಪೊಕ್ಕು ಜಿನಪತಿಗೆ ವಂದನೆಗೆಯ್ದು ।
ಸುಲಲಿತವ್ರತಿ ವೃಷಭದಾಸನಂ ಪಲವುಸೂಕ್ತೀರ್ತನಂ ಮಾಡುತಿರ್ಪ್ಪ ॥
ಗಳಿಗೆಯೊಳಗಾಕಾಶಮಂಡಲದೊಳಮರ ಸಂ-।
ಕುಲಮೆಲ್ಲ ನೆರೆದು ಪಂಚಾಶ್ಚರ್ಯಮಂ ಮನಂ- ।
ಗೊಳೆ ಮಾಡಲಿಂತದಂ ಕೇಳ್ದು ಸುದಂಡಭೂಪಾಲನತಿ ಭೀರುವಾಗಿ ॥ ೭೮ ॥
ಪ್ರವಿದಿತನಿದಂಗಾಪ್ರಮಾದದೋಷದಿ ಬಂದ ।
ನೆವವನೇ ನೆರವಳಿಗೆ ಮಾಡಿ ಮುಂಗೋಪದಿಂ ।
ವಿವಿಧೋಪಸರ್ಗ್ಗಮಂ ಮಾಡಿಸಿದ ದುಷ್ಕರ್ಮನಾನಲಾ ಎಂದು ಬಗೆದು ॥
ತವಕದಿಂದೆಳ್ದು ಕಂಠೀರವಾಸನದಿ ನಿಜ ।
ಭವನಮಂ ಪೊರಮಟ್ಟು ಮಂಡಲಾಧೀಶ್ವರರ ।
ನಿವಹವೆಡಬಲನ ಹಿಡಿದೋಲೈಸಿಬರಲು ಕಡುವಿರಿದು ನಡನಡ ನಡುಗುತ ॥ ೭೯ ॥
ಬಂದು ಭರವಸದಿನಾ ಭವಬದ್ಧಭಂಜನನ ।
ಮಂದಿರಕ್ಕೆಯ್ದಿ ಜಿನಪತಿಗೆ ವಂದಿಸಿ ಮನುಜ ।
ಮಂದಾರನಾ ವೃಷಭದಾಸಂಗೆ ಉಪಸರ್ಗ್ಗ ಪರಿಹರವಾಯ್ತು ಕೆಯ್ಯನೆತ್ತು ॥
ಎಂದು ಕೆಯ್ಯೆತ್ತಿಸಿ ಬಳಿಕ್ಕುತ್ತಮ ಕ್ಷಮೆಯು- ।
ಮೆಂದು ನುಡಿದಾ ವಿಯಚ್ಚರಗೆ ಸತ್ಕಾರಮಂ ।
ಮಂದೇತರಪ್ರಿಯದಿ ಮಾಡಿ ಬೀಳ್ಕೊಟ್ಟು ಜಿನಧರ್ಮಮಂ ಕೊಂಡು ಕೊನೆದು ॥ ೮೦ ॥
ಕಟಕಟಾ ಕರುಣಹೀನಂ ನಾನು ಪಿರಿದು ನಿಃ-।
ಕುಟಿಲನಿವನೆಂದು ಭಾವಿಸದೆ ಮಾಡಿಸಿದ ಸಂ- ।
ಕಟಮೆಲ್ಲಮಿವನ ವಿಮಲಶ್ರಾವಕವ್ರತದ ಫಲದಿಂದ ಪರಿಪಟ್ಟುದು ॥
ಅಟಮಟದಿನಾಳ್ವರಸುತನನುಮಂ ಪರಿಹರಿಸಿ ।
ದಿಟವಾಗಿ ದೀಕ್ಷೆಯಂ ಕೈಕೊಂಡು ।
ತಪಸಿನೊಳ್ಪಟುವಾದವಂಗೆ ಮುಕ್ತಿಶ್ರೀಯ ಸಂಗಡಂ ಸಂಜಾತನಾಗದಿರದು ॥ ೮೧ ॥

ಎನುತ ನಿರ್ವೇಗಮಾನಸನಾಗಿ ತನ್ನ ನಿಜ ।
ತನುಜಂಗೆ ರಾಜ್ಯಮಂ ಕೊಟ್ಟು ತನ್ನೊಡನೆ ಕೆಲ ।
ಮನುಜೇಶ್ವರರ್ಸುಮತಿಮಂತ್ರೀಶ ಸುರದೇವ ವೈಶವಿಭು ವೃಷಭದಾಸಂ ॥
ಮನವೊಸೆದು ಬರಲು ಗುಣನಂದಿಯೆಂದೆಂಬೊರ್ವ ।
ಮುನಿಗಳ ಸಮೀಪದೊಳ್ ದೀಕ್ಷೆಯಂ ಧರಿಸಿದಂ ।
ತನುಮನೋವಾಕ್ಶುದ್ಧಿಯಿಂದ ಧರಣೀತಳಂ ಕೀರ್ತ್ತನಂಗೆಯ್ವ ತೆರದಿ ॥ ೮೨ ॥
ಶ್ರೀಮತಿವೆಸರ ಕಂತೆಯರ ಸಮಕ್ಷದೊಳ್ ತ- ।
ದ್ಭೂಮೀಶ್ವರನ ಸುದತಿ ವಿಜಯೆ ಮತ್ತಲ್ಲಿ ಕೆಲ ।
ಭಾಮಿನಿಯರೊಡಗೂಡಿ ದೀಕ್ಷೆಯಂ ಪಡೆದಳಾ ನಗರಿಯಲ್ಲಿ ಕೆಲರು ॥
ಶ್ರೀಮನ್ಮಹಾಶ್ರಾವಕವ್ರತವ ಧರಿಸಿದ- ।
ರ್ಪ್ರೇಮದಿಂ ಕೆಲಬರಿದುವೇ ಧರ್ಮವೆಂದು ಪರಿ- ।
ಣಾಮಿಸಿದರಂದು ನನಗಾ ಸಮಯದೊಳ್ ಶ್ರದ್ಧೆ ಸಂಜಾತಮಾದುದೆಂದು ॥ ೮೩ ॥
ಆದ್ಯಂತಮಾಗಿಯಭಿನವ ಶಾರದಾದೇವಿ ।
ವಿದ್ಯುಲ್ಲತಾಭಾಮೆ ಪೇಳ್ದ ಕಥೆಯಂ ಕೇಳಿ ।
ಚೋದ್ಯವಡೆದಾ ಸತಿಯರಾ ವೈಶ್ಯವಲ್ಲಭನುಮಿಚ್ಚಾಮಿಯೆಂಬ ನುಡಿಗೆ ॥
ವಿದ್ಯುಲ್ಲತಾಪಾಂಗೆ ಕುಂದಲತೆಯೆಂದಳೀ ।
ಸದ್ಯ ಫಲವಡೆಯದೀ ಕಾರ್ಯ್ಯಕ್ಕೆ ನಾನೆಂತು ।
ಚೋದ್ಯಮಂ ಮಾಳ್ಪೆನೆನಲಾ ಮರದೊಳಿರ್ದ್ದ ನೃಪಸಚಿವರ್ಕ್ಕಳಿಂತೆಂದರು ॥ ೮೪ ॥
ಇನ್ನೇಕೆ ತಡವು ಬೆಳಗಾಗುತಿದೆ ಮೂಡುಗಡೆ ।
ಮುನ್ನೇಸರೊಗೆಯಲೊಡನರಮನೆಯಬಾಗಿಲ್ಗೆ ।
ಗನ್ನಗಾತಿಯನಿವಳ ಮುಂದಲೆಯ ಸುತ್ತಿಹಿಡಿತರಿಸಿ ನೋಳ್ಪಂತೆಲ್ಲರು ॥
ಅನ್ನೆಯವನುಡಿದ ಬಾಯೊಳು ಬಿಸಿಯ ಬೂದಿಯಂ ।
ಚೆನ್ನಾಗಿಡಿಯಿಸಿ ಬಳಿಕ್ಕ ಬೊಕ್ಕಣದಲ್ಲಿ ।
ಮನ್ನಣೆ ಕೆಡುವ ತೆರದಿ ಕೊಲಿಸಬೇಕೆನಲು ತಚ್ಚೋರಸಿಂತೆಣಿಸುತಿರ್ದ್ದಂ ॥ ೮೫ ॥
ಕಾರಕಾರದ ಕಂದರದ ನುಣ್ಬರಕ್ಕಾ ಮ- ।
ಯೂರನೊಲವಿಂ ನರ್ತ್ತಿಪಂತೆ ಕಾಳ್ಕೋಳಿ ಕೇ- ।
ಳಾರಯ್ದು ನಲಿವುದೇ ಉತ್ತಮರ ನುಡಿಗೆ ಸಜ್ಜನರಂತೆ ದುರ್ಜನಾಳಿ ॥
ಸೇರುವುದೆಯೆಂದೆನುತ್ತಿರಲು ವಿದ್ಯುಲ್ಲತೆಯ ।
ಸಾರತರಮಪ್ಪ ನುಡಿಗೇಳಿ ಸಂತಸವಡೆದ- ।
ನಾ ರಾಜವೈಶ್ಯನರ್ಹದ್ದಾಸ ಜಿನಸಮಯವಾರ್ಧಿವರ್ಧನಚಂದ್ರನು ॥ ೮೬ ॥
ಇದು ವಿಬುಧಜನವಿನುತಮಿದು ವಿಬುಧಜನವಿನತ- ।
ಮಿದು ವಿದಿತಜಿನಸಮಯಶರಧಿಸಂಪೂರ್ಣೇಂದು ।
ಸದಮಲಚರಿತ್ರ ಚಂಗಾಳ್ವಭೂವರನ ಸಚಿವಾನ್ವಯಾಂಬರಹಂಸನು ॥

ಮದನಸಮರೂಪಸುತ್ತಮಗುಣಕರಂಡಕಂ ।
ಚದುರಮಂಗರಸ ರಚಿಸಿದ ಕೌಮುದೀ ಕಥೆಯೊ- ।
ಳೊದವಿದುದು ವಿದ್ಯುಲ್ಲತಾಸತಿಯ ಸಮ್ಯಕ್ತ್ವಕಥನ ಪನ್ನೊಂದುಸಂಧಿ ॥ ೮೭ ॥

ಅಂತು ಸಂಧಿ ೧೧ ಕ್ಕಂ ಪದ ೭೩೮ ಕ್ಕಂ ಮಂಗಲಮಹಾ ॥

---

# ಹನ್ನೆರಡನೆಯ ಸಂಧಿ.

## ಉದಿತೋದಯನ ಸಮ್ಯಕ್ತ್ವದೀಳಿಗೆ.

ಶ್ರೀಮದರ್ಹದ್ದಾಸನಾ ನಿತಂಬಿನಿಯರುಂ ।
ಪ್ರೇಮದಿಂ ಪೇಳ್ದ ಕಥೆಯುಂ ಕೇಳಿ ವೈರಾಗ್ಯ- ।
ವಾ ಮನದೊಳೊಗೆದು ಭೂಪಾಲನುದಿತೋದಯಂ ದೀಕ್ಷೆಯುಂ ತಳೆದಸಿಂತು ॥ ಪಲ್ಲ ॥
ಕಾದಲೆಯ ವಿರಹದಿಂ ಕಡು ಬೆಂದುನೊಂದು ಬಂ- ।
ದಾದರದಿನಾ ಮರದ ಕಾವಳದೊಳಿರ್ದ್ದ ತಮ-।
ಗಾದ ಸಮ್ಯಕ್ತ್ವದ ಮಹಾತ್ಮ್ಯೆಯಂ ತದ್ವೈಶ್ಯನಾ ಸ್ತ್ರೀಯರುಂ ಪೇಳಲು ॥
ಚೋದಿಗಂಬಟ್ಟು ಕೇಳ್ದಾ ಮಹೀಪಾಲನುದಿ- ।
ತೋದಯನ ಮೋಹಾಂಧಕಾರಮೇ ಹರೆವಂತಿ- ।
ರಾದುದಾ ಹರೆವ ಹಿಪ್ಪರಿಕೆಯುಂದಿನ ದಿನದ ಬೆಳಗಪ್ಪ ಜಾವದಲ್ಲಿ ॥ ೧ ॥
ಮಾನವರ್ಕ್ಕೇಳಿ ಮನಗೊಂಡು ಶ್ರುತದೃಷ್ಟಾನು- ।
ಮಾನದೊಳ್ ಪಿರಿದುಂ ವಿಚಾರಮಂ ಮಾಡಲಾ ।
ಮಾನಿತಂಬಡೆದ ಜಿನಧರ್ಮ್ಮಮೇ ಧರ್ಮ್ಮಮಲ್ಲದೆ ಉಳಿದ ಧರ್ಮ್ಮಂಗಳು ॥
ತಾನಿವೆಲ್ಲಂ ಮಿಥ್ಯೆಯೆಂದು ಭೂಲೋಕಕ್ಕೆ ।
ಸಾನಂದದಿಂ ಸಾರುವಂತೆ ಕೂಕೂ ಎಂದು- ।
ದಾ ನಳಿನಸಖನುದಯದೊಳ್ತಾಮ್ರಚೂಡಸಂತಾನಮಾ ಪುರವರದೊಳು ॥ ೨ ॥
ಭೂಕಾಂತನುದಿತೋದಯನ ಶುದ್ಧಚಿತ್ತದೊಳ- ।
ಗಾ ಕಾಲಲಬ್ಧಿಯುದಯಂಗೆಯ್ಯಲದರೊಡನೆ ।
ನಾಕಾಧಿಪತಿಯ ದಿಙ್ಮುಖದಲ್ಲಿಯರುಣೋದಯಂ ಮನೋಹರಮಾದುದು ॥
ಆ ಕೋವಿದನ ಹೃದಯಕಮಲವಿಕಸದೊಡನೆ- ।
ಯಾ ಕನತ್ಕಂಜನಪ್ರತಾನವಲರೇರಿದುವು ।
ಲೋಕೈಕಚಕ್ಷುವುದಯಂಗೆಯ್ವ ಸಮಯದೊಳಗತ್ಯಂತ ಶೋಭೆವಡೆದು ॥ ೩ ॥
ಗಿಳಿಗಳೊಳ್ನಡಿ ವೇದಗಳನೋದುವಾ ದ್ವಿಜಾ- ।
ವಳಿಯುಲುಹು ಚೈತ್ಯಗೃಹದೊಳ್ದೇವತಾಸ್ತೋತ್ರ- ।
ಗಳನುಸಿರ್ವ ಯತಿನಿಕಾಯದ ಮಂದ್ರಘೋಷವೆಲ್ಲೆಡೆಯ ದೇಗುಲಗಳೊಳಗೆ ॥

ಮೊಳಗುವ ಸಮಸ್ತ ವಾದ್ಯಧ್ವನಿಯಕಾರಮಂ- ।
ಗಳಪುವ ಸುಗೀತಕಾರರ ಬಣ್ಣಸರಗಳಾ ।
ಪೊಳಲೊಳೆಡೆವಿಡದೆ ಘೂರ್ಣಿಸಿದುವಾ ಮುನ್ನೇಸರುದಯಿಸುವ ಸಮಯದಲ್ಲಿ ॥ ೪ ॥
ಒಡಲು ಹಿಡಿಯದ ತೆರದಿಸುಂಡಕಳ್ತಲೆಯನೆಡೆ- ।
ವಿಡದೆ ಕಾರುವ ತೆರದಿ ಕಜ್ಜಳಮನುಗುಳಿದವು ।
ಉಡುಗಿದುದು ರಾತ್ರೆ ನಮಗಿನ್ನು ಬದುಕಿಲ್ಲೆಂದು ನೆನೆದು ನಡನಡುಗುವಂತೆ॥
ನಡುಗಿದುವು ದುಷ್ಟಜನಮೀ ತೆರದಿ ಮರಣಮಂ ।
ಹಡೆವರೆಂಬುದನರಿಪುವಂದದಿಂದುರಿದುರಿದು ।
ಕೆಡುತಿರ್ದುವಾ ಕಟ್ಟಕಡೆಯಿರುಳಿನಲ್ಲಿ ಸೊಡರೋಳಿ ಮನೆಮನೆದಪ್ಪದೆ ॥ ೫ ॥
ಇಂತೊಪ್ಪುವರುಣೋದಯದ ಸಮಯದಲ್ಲಿ ಭೂ- ।
ಕಾಂತನಾ ಮಂತ್ರಿಯುಂ ತಚ್ಚೋರನುಂ ಸಿರಿದು ।
ಸಂತೋಷದಿಂದಮಾ ವೈಶ್ಯವಿಭುವಾ ಸತಿಯರುಸಿರ್ದ ಕಥೆಗಳನು ಕೇಳಿ ॥
ಅಂತರಂಗದೊಳಾವರಿಸಿದ ನಿರ್ವೇಗದಿಂ ।
ತಂತಮ್ಮ ಬೀಡಿಗಾತುರದಿಂದ ಬಂದು ನಿ- ।
ಶ್ಚಿಂತದಿಂ ನಸುನಿದ್ರೆಗೆಯ್ಯುತಿರಲಸ್ತಾದ್ರಿಯೇರಿದಂ ಹರಿಣಾಂಕನು ॥ ೬ ॥
ವಿದಿತ ಸದ್ಗತಿಚರಿತನಿರತರತಿಸುಖದುಃಖ- ।
ವೊದಗುವ ಸಮಯದಲ್ಲಿ ಬಂದೇಸಮಾನದುರು- ।
ಮುದವನೆಯ್ದುವರೆಂಬುದಂ ಮಹೀಮಂಡಲಕ್ಕರಿಕೆಯಂ ಮಾಳ್ಪ ತೆರದಿ ॥
ವಿದಿತಸದ್ಗತಿಚರಿತನಿರತನಾ ಪೂರ್ಣೇಂದು ।
ಉದಧಿಯೊಳಗಸ್ತಮಯನಾದನಾ ವುದಯದೊಳ- ।
ಗೊದಗುವಾ ರಾಗಮಾ ಕಾಂತಿಯಾವೃತ್ತತೆಯನಿನಿಸಿರದೆ ಕೈಕೊಳುತ್ತ ॥ ೭ ॥
ಅಂಬರವಲಯಮೆಂಬ ಗೂಡಾರದಲ್ಲಿ ನೆರೆ ।
ತುಂಬಿದ ಮಹಾಂಧಕಾರಂ ಕೆಡಲ್ಬೇಕೆನು- ।
ತ್ತಂಬುಜಭವಂ ಧರಾತಳವೆಂಬ ಪಾತ್ರೆಯೊಳ್ನೆರೆತೀವಿಯಂಬುರಾಶಿ ॥
ಎಂಬ ತೈಲವನುದಯಗಿರಿಬಿಂಬ ವರ್ತಿಯುಮ- ।
ನಿಂಬಾಗಿ ಮಡಗಿ ಹೊತ್ತಿಸಿದ ಹೆಜ್ಜೊಡರೋ ಇ- ।
ದೆಂಬಂದದಿಂ ತಳತ್ತಳಿಸುತ್ತುದಯವಾದುದುಷ್ಣಾಂಶುಬಿಂಬಮಾಗ ॥ ೮ ॥
ಉಪ್ಪುನೀರಂ ದಿನಂಪ್ರತಿ ಪಾಕತನದಿಂದ ।
ತಪ್ಪದೇ ಹೀರಿದಾ ತಲೆಬಿಗುಡು ಗಗನದೊಳ- ।
ಗೊಪ್ಪದಿಂ ಪರಿವ ದೇವಾಪಗೆಯ ಮಧುರತರ ವಾರಿಯ ಹೀರಿಹೀರಿ ॥
ಚಪ್ಪರಿಸಿದಲ್ಲದೇ ಹೋಗದೆಂದೆನುತುಮಾ ।
ನೆಪ್ಪಿಂಗೆ ತದ್ವನಧಿಯಿಂದ ವಡಬಾಗ್ನಿಬೀ ।
ಉಪ್ಪರಿಸಿ ನೆಗೆವಂತೆ ಉಷ್ಣಕಿರಣಂ ಮೂಡಿ ನೆಗೆದುದಂಬರತಳಕ್ಕೆ ॥ ೯ ॥

ಉದಯರಾಗಂಬೆರಸಿಯುದಧಿಯು ಮಹಾಗಾಧ- ।
ದುದರಮೆಂದೆಂಬ ಶಯ್ಯಾಸದನದಿಂದೀಗ- ।
ಳುದಯಗೆಯ್ದುದಯಗಿರಿಶಿಖರಕಬ್ಜಾತಬಾಂಧವನೊಸೆದುಬಂದೇರಿದಂ ॥
ಉದಿತೋದಯಾವನೀಪತಿ ನಿನ್ನ ನಿಜಹೃದಯ- ।
ದುದಯರಾಗಂಬೆರಸಿಯುಪ್ಪವಡಿಸಾ ಎನುತ- ।
ಮುದಯರಾಗದೊಳೊಪ್ಪವಂ ಪಡೆದು ಪಾಡಪಾಡುವರ ಪಾಡೊಪ್ಪಿತಾಗ ॥ ೧೦ ॥
ಉದಯದೊಳಗೆದ್ದು ಮುಖಮಜ್ಜನಂ ಮಾಡಿ ।
ದೇವಾದಿದೇವಂಗೆಯಭಿವಂದನಂಗೆಯ್ದು ।
ಭಾವಭವನಂತೆ ಸಿಂಗರಿಸಿಯೋಲಗಕೆಯ್ದಿಯಾ ಮಂತ್ರಿಯಾ ಚೋರನಂ ॥
ಭೂವರಂ ಕರಿಸಿಯಾ ತೆರದಿಂದ ನುಡಿದನಂ ।
ದಾ ವೈಶ್ಯಸತಿಯರುಸಿರ್ದೀ ಕಥನಮಂ ಕೇಳಿ ।
ಭಾವಿಸದುದಾಸೀನಮಂ ಮಾಡಿದಾ ಲಂಡೆ ಕುಂದಲತೆಯಂ ಕರೆಯಿಸಿ ॥ ೧೧ ॥
ನುಡಿದ ಜಾಯಿಗೆ ತಕ್ಕ ಶಿಕ್ಷೆಯಂ ಸಾಪಿಸಿಸು ।
ತಡೆಯದೇ ಮಾಡಿಸಲ್ಬೇಕೆಂದು ಕೋಪಿಸುವ ।
ನುಡಿಗೇಳಿಯಾಮಂತ್ರಿಯಿಂತೆಂದು ಕೈಮುಗಿದು ಬಿನ್ನಪಂಗೆಯ್ದನಾಗ ॥
ಪೊಡವಿಯಧಿಪತಿ ಕೇಳು ನಿನಗೆಯರ್ಹದ್ದಾಸ ।
ಕಡು ಸಲುಗೆವಂತನದರಿಂದವಳನಿಂತು ಪೊಗ- ।
ಗೆಡಿಸುವುದು ಮತವಲ್ಲ ನಾವಾತನಾಲಯಕೆ ಪೋಗಿ ತತ್ಕುಂದಲತೆಯಾ ॥ ೧೨ ॥
ಬರಿಸಿ ನೀನನುಪಮಚರಿತ್ರವಂತರ ಕಥೆಗೆ ।
ಉರುಹರ್ಷಮಂ ಮಾಡಿ ನಂಬುವುದುಮಂ ಬಿಟ್ಟು ।
ದುರುಳತನದಿಂದಿವೆಲ್ಲಂ ಮಿಥ್ಯೆಯೆಂಬುದಕ್ಕೇನ ಸಲವೆಂದು ಕೇಳಿ ॥
ನೆರೆಯೆ ಮೆಚ್ಚಿಸಿಯಾಜ್ಞೆಯಂ ಮಾಡಿಸಲ್ಬೇಕು ।
ತರಹರದಿನೆಂಬ ನುಡಿಗೇಳಿಯದನನುಕರಿಸಿ ।
ಧರಣೀಶನರಮನೆಯ ಪೊರಮಟ್ಟು ತದ್ವೈಶ್ಯನಾಲಯಕೆ ನಡೆತಂದನು ॥ ೧೩ ॥
ಪರಿವೃತಂಗೊಂಡು ಪರಿಮಿತಪರಿವೃಢರ್ಬ್ಬರ- ।
ಲ್ಪರಿತೋಷದಿಂದ ತನ್ನೊಡನೆ ಎಡಬಲವಿಡಿದು ।
ಪರಿಶುದ್ಧನಾ ಪ್ರಧಾನೋತ್ತಮನುಮಾ ಚೋರನುಂ ಬರಲ್ಕಾಸದನದಾ ॥
ಪರಿರಂಜಿಸುವ ಪರಮನಾಲಯಕ್ಕಿರದೆಯ್ದಿ ।
ಪರಿಪರಿಯ ನುತಿಗಳಂ ನುತಿಯಿಸಿ ಬಳಿಕ್ಕ ತ- ।
ತ್ಪರಿಣಾಮಹೃದಯನರ್ಹದ್ದಾಸ ವೈಶ್ಯನೊಳಗಿಂತುಸಿರ್ದನಾ ಭೂಪನು ॥ ೧೪ ॥
ಇರುಳು ನೀನಾ ಸತೀಜನಕೆ ಬಳಿಕಾ ಸತಿಯ- ।
ರುರುಮುದದಿ ನಿನಗೆ ಪೇಳ್ದ ಕಥನಮಂ ಕೇಳಿ ।
ಭರಭಕ್ತಿಯಿಂದ ನೀನುಂ ನಿನ್ನುಳಿದ ಸತಿಯರೆಲ್ಲರಿಂ ಶ್ಲಾಘಿಸಿಯೆಂದು ॥

ಪರಿಣಮಿಸುವುದ ಕಂಡು ತಾನಿನಿಸು ಮನಗೊಡದೆ ।
ದುರುಳೆ ನಿನ್ನಾ ಕಿರಿಯಸುದತಿ ನಾನಿಂತಿದಂ ।
ಪರಿಭಾವಿಸುವೆನೆ ನೀವುಸಿದ್ಧುದೆಲ್ಲಂ ಮಿಥ್ಯೆಯೆಂದಳಂತದು ನಿಮಿತ್ತ ॥ ೧೫ ॥
ಕರಿಸವಳನೆಸುತ ಮತ್ತಾ ಕುಂದಲತೆಯುಮಂ ।
ಕರಿಸಿ ಚೋರನ ಪಿತಂ ರೂಪ್ಯಖುರನಂದೆಮ್ಮ ।
ವರಜನಕನೊಡನೆ ದುರುದುಂಬಿತನದಿಂದುಣುತ್ತೀ ಮಂತ್ರಿವರನ ಪಿತನಾ ॥
ಉರುತಂತ್ರದಿಂ ಸಿಲ್ಕಿ ಶೂಲದೇರಿಂ ಸತ್ತು ।
ನರಕಕ್ಕೆ ಪೋಪವಂ ಜಿನದತ್ತನೊಸೆದಿತ್ತ ।
ಪರಮಪಾವನ ಪಂಚಪದದುಚ್ಚರಣೆಯಿಂದ ಸಗ್ಗದೊಳ್ಜನಿಸಿಬಂದು ॥ ೧೬ ॥
ಅತಿವೃದ್ಧರೂಪನವಧರಿಸಿ ದಂಡಂಬಿಡಿದು ।
ಚತುರಂಗಸೇನೆಯಂಬಡಿದು ತದ್ಭೂವರನ- ।
ನತಿರೌದ್ರರೂಪಿನಿಂ ಬೆನ್ನಟ್ಟಬಂದು ಜಿನದತ್ತಸೆಟ್ಟಿಯ ಮರೆಯನು ॥
ಅತಿಭೀತಿಯಿಂದ ಪುಗಲಂತದಂ ಕಂಡು ತ- ।
ನ್ನತಿಶಯಾಕಾರಮಂ ತೋರಿ ತತ್ಕಥನದು- ।
ನ್ನತಿಕೆಯಂ ಪೇಳ್ದ ಪ್ರತ್ಯಕ್ಷಮಂ ಕಂಡು ನಾನಂಬೆನೆಂದೆನ್ನಬಹುದೇ ॥ ೧೭ ॥
ಪಾವನಚರಿತ್ರೆ ಜಿನದತ್ತೆಯ ಮಹಾತ್ಮ್ಯೆಯುಮಂ ।
ಭೂವಿಸುತೆ ಸೋಮೆಯ ಚರಿತ್ರಮಂ ಮಂತ್ರಿಗಳ ।
ದೇವನಾ ಸೋಮಶರ್ಮನ ಸತ್ಯಮಂ ಮುಂಡಿಕೆಯದೊಂದು ಸಮ್ಯಕ್ತ್ವಮಂ ॥
ಭಾವೆ ಪದ್ಮಶ್ರೀಯ ಸತ್ಕಥನಮಂ ಮತ್ತ- ।
ಮಾ ಉಮಯನೆಸೆವ ಸುವ್ರತಮನರ್ಹದ್ದಾಸ- ।
ನಾ ವಿಮಲರತ್ನತ್ರಯದ ಕಥೆಯುಮಂ ನಚ್ಚೆನಂಬೆನಾನೆನಲುಬಹುದೇ ॥ ೧೮ ॥
ಸನ್ನುತಂಬಡೆದ ಸಮ್ಯಕ್ತ್ವದ ಮಹಾತ್ಮ್ಯೆಯುಂ ।
ಚೆನ್ನಾಗಿ ಕಂಡು ಪೇಳ್ದಾ ಕಥನಮಂ ಕೇಳಿ ನನ್ನ ।
ಮನಸೊಡಬಡುವುದಿಲ್ಲೆಂಬುದಿದು ಕಲಿಯುಗದ ಮಹಿಮೆ ಕಂಡಾ ॥
ನಿನ್ನ ಗುಣವಲ್ಲಪೆಂದೆಂಬ ನುಡಿಯ ಕೇಳಿ ।
ತನ್ನ ಕರಯುಗಲಮಂ ಮುಗಿದೆಲೇ ದೇವ ಕೇ- ।
ಳೆನ್ನ ಜಿನ್ನಪನೆಂದಾ ಕುಂದಲತೆಯಿಂತು ಬಿನ್ನಪಂಗೆಯ್ದಳಾಗ ॥ ೧೯ ॥
ಇಂತೆಸೆವ ಜಿನದರ್ಶನದ ಮಹಿಮೆಯ ಕಂಡು ।
ಪಿಂತಣಾಘವಶದ ಸಂಸಾರಕ್ಕೆ ಹೆಡ್ಡಯಿಸಿ ।
ಸಂತತಂ ಸುಖಮೀವ ಮುಕ್ತಿಪದಕೆಯ್ದಿಸುವ ತಪಸಿನೊಂದುದ್ಯೋಗಕೆ ॥
ಚಿಂತೆಯಂ ಮಾಳ್ಪುದೆ ಸಮ್ಯಕ್ತ್ವಮೆಲೆ ಮಹೀ- ।
ಕಾಂತ ಕೇಳುಳಿದುವೆಲ್ಲಂ ಮಿಥ್ಯೆ ಭಾವಿಸಿದೊ-
ಡಂತದುನಿಮಿತ್ತಮಿವರುಸಿರ್ದ ಕಥನಕ್ಕೆ ನಚ್ಚುವುದಿಲ್ಲವೆಂದು ನುಡಿದೆಂ ॥ ೨೦ ॥

ಹರಿಗೋಲ ಬಿಸುಟು ಹೊಳೆಯಂ ಕಡವೆನೆಂದೆಂಬ।
ತೆರನಲ್ಲವೇ ಭವಾಂಬುಧಿಯನೀ ತಪದಿಂದ।
ನೆರೆಲಂಘನಂ ಮಾಳ್ಪೆನೆಂಬವರ ಪಿಡಿದು ಹಗ್ಗವನು ಬೆಟ್ಟವನೇರದೆ ॥
ಬರಿ ನೂಲಹಿಡಿದು ಮೇಲಕೆ ಹೋಗಬೇಕೆಂಬ।
ನೆರೆ ಹೆಡ್ಡರಂತಲ್ಲವೇ ಊರ್ಧ್ವಲೋಕಕ್ಕೆ।
ಉರುವ ಸಂಯಮವಿಲ್ಲದೇ ಪೋಪೆನೆಂಬಭೂರ್ಪಾಲಚೂಡಾಮಣಿ ॥ ೨೧ ॥
ಪಾಲುಂಬುವರ್ಪ್ಪಳಸುಗೂಳಿಗಿಚ್ಛೈಸುವರೆ।
ಕಾಲೊಳಗೆ ನಡೆವುದಕ್ಕೆಣಿಕೆಮಾಡುವರೆ ಯಾಂ-।
ದೋಳನಂಗೆಯ್ದುವರ್ಪ್ಪಳ್ಮನೆಗೆ ಮನಗೊಡುವರೇ ರತ್ನಮಯಹರ್ಮ್ಯದಾ ॥
ಮೇಲಣ್ಸೈಸಿರಿವಂತರಧಿಕಸೌಖ್ಯಮನೀವ।
ಮೂಲೋಕಕಗ್ಗಳವೆನಿಪ್ಪ ತಪಮಂ ಬಿಟ್ಟು।
ಳೋಲುಪ್ತರಾಗುವರೆ ಸಂಸಾರಬಂಧನಕೆ ಬಲ್ಲವರ್ಧರಣಿಪಾಲಾ ॥ ೨೨ ॥
ಆಟುಳಿಕತನದಿನನ್ಯಾಯದಿಂದಾ  ಪಲವು।
ಕೋಟಿಕಾಲಂ ಮೊದಲ್ನಡೆದ ಫಲದಿಂದ ಬಹು।
ಕೀಟಕಂ ಮೊದಲಾದ ಗತಿಗಳೊಳ್ಜನಿಸಿ ನಾನಾರೂಪಿನಿಂ ತೊಳಲ್ವಾ ॥
ಆಟಕೋಟಲೆಯ ಹಿಂಗಿಸಿ ಕರ್ಮ್ಮಗಳನು ನಿ-।
ರ್ದಾಟಿಸುವ ಜಿನದೀಕ್ಷೆಯಂ ಬಿಟ್ಟು ಭೂಮಿಪತಿ।
ಪಾಟಿಗೆಟ್ಟೇ ಗೃಹಸ್ಥಿತಿಗೆ ಸಿಕ್ಕಿದರ ಮಾತಿಗೆ ನಚ್ಚೆನೆಂದೆ ನಾನು ॥ ೨೩ ॥
ವಿಬುಧಕಾರ್ಮುಕದಂತೆ ವಿದ್ಯುಲ್ಲತಿಕೆಯಂತೆ।
ಶಬದೊಡಿಗೆಯಂತೆ ಸಂತೆಯ ನೆರವಿಯಂತೇಳು-।
ವ ಬುದುಬುದುರಾಶಿಯಂತೊಣಹುಲ್ಲಶಿಖಿಯಂತುಳ್ಕಿನಂತಾ ಮಾರಿಯಾ ॥
ಕಬಳಕ್ಕೆ ತಂದ ಕುರಿಯಂತೆ ತನುಸಿರಿಹರೆಯ-।
ಮಬಲಾಜನಂ ಬಂಧುಜನ ನಿಜಸುತರ್ನ್ನಾಡು।
ಶಿಬಿರವೆಂದೆಂಬಿವೆಲ್ಲಂ ಭಾವಿಸಿದೊಡೆಯಸ್ಥಿರಮಲ್ಲವೇ ನೃಪಾಲಾ ॥ ೨೪ ॥
ಸಮ್ಯಕ್ತ್ವ ಸಂಜಾತಮಾದ ಸಮಯಂಬಿಡಿದು।
ಸಮ್ಯಕ್ತ್ವ ಸಮುಪೇತಮಪ್ಪ ಸುಜ್ಞಾನದಿಂ।
ಸಮ್ಯಕ್ತ್ವಯುತ ಸಂಯಮವನೆ ಕೈಕೊಂಡು ಸಲೆ ಸೌಖ್ಯಸಂಪದವಡೆಯದೆ ॥
ಸೌಮ್ಯವಲ್ಲದ ಸೌಖ್ಯಮೀವ ಸಂಸಾರಮೇ।
ಸ್ವಾಮ್ಯಮೆಂದಾ ಸಕಲ ಭೋಗೋಪಭೋಗಕ್ಕೆ।
ಕಾಮ್ಯಾರ್ಥಿಯಾದ ವರಮಾತುಗೇಳ್ದಿಚ್ಛಾಮಿಯೆನಬಹುದೆ ಭೂಪಾಲಕಾ ॥ ೨೫ ॥
ಅನಿತರಿಂದಿವರ ಡಂಬಕದ ಭಕುತಿಗೆ ನಾನು।
ಮನಗೊಡದೆ ತತ್ಕಥನಮಂ ಕೇಳಿ ಇಚ್ಛಾಮಿ-।
ಯೆನಲೊಲ್ಲದೇ ನಂಬೆನಚ್ಚೆನೊಡಬಡೆನೆಂದು ನಿಜಮಪ್ಪ ಮಾತಾಡಿದೆ ॥

ಜನತಾಧಿನಾಥ ಕೇಳೆಂದು ಬಂದುಗೆವಾಯ- ।
ನನುರಾಗದಿಂ ತೆರೆದು ನುಡಿವ ಸಜ್ಜನೆಯ ಜನ- ।
ವಿನುತಗುಣಮಣಿವಿಭೂಷಣೆ ಕುಂದಲತೆಯ ಮಾತಿಗೆ ಮೆಚ್ಚಿ ಭೂಪಾಲನು ॥ ೧೬ ॥
ಚಿಕ್ಕಹರೆಯದೊಳು ಚಿನ್ನದ ಬೊಂಬೆಯಂತೆ ಕಡು ।
ಚೊಕ್ಕಳಿಕೆವಡೆದ ಚೆಲ್ವಾಚೆಲ್ವಿನೆಸಕಕ್ಕೆ ।
ತಕ್ಕ ಸಿರಿಯಂತಿವರ ಸೊಕ್ಕಿಂದ ಮೆಯ್ಮರೆದು ಭೋಗೋಪಭೋಗದಲ್ಲಿ ॥
ಸಿಕ್ಕುವೀ ದಿನದಲ್ಲಿಯೀ ವಿರಕ್ತಿಗೆ ಮನಮ- ।
ನಿಕ್ಕಿದ ಮಹಾವನಿತೆ ನೀನೊಬ್ಬಳಲ್ಲದೇ ।
ಲೆಕ್ಕಿಸುವೆನೆಂದು ಬೊಚ್ಚಿತ್ತಲುಂಟೇ ಜಗತ್ತಿನ ಸತೀಜನಗಳೊಳಗೆ ॥ ೧೭ ॥
ದಂದಶೂಕನ ದಾಡೆಯಲ್ಲಿಯಮೃತಂ ಜನಿಸಿ- ।
ದಂದದಿ ಕಠೋರ ಕೇಸರಿಯ ಹೃದಯದೊಳು ದಯೆ- ।
ಯೊಂದಿದಂದದಿ ವಿಷಮವಿಷವೆನಿಸುವೀ ಕಾಮಿನಿಯರ ಚಿತ್ತಕೆ ವಿರಕ್ತಿ ॥
ನಿಂದುದವನಿತಳಕ್ಕಾಶ್ಚರ್ಯಮೆಂದು ನೃಪ- ।
ವೃಂದಾರಕಂ ಪಿರಿದು ಕೊಂಡಾಡಿ ತಲೆದೂಗಿ ।
ಕುಂದಲತೆಯಂ ಕುಸುಮವಸ್ತ್ರಾಂಗರಾಗಭೂಷಣದಿಂದ ಪೂಜಿಸಿದನು ॥ ೧೮ ॥
ಬಳಿಕ ಭವ್ಯೋತ್ತಮಾಂಬರಭಾನು ಸ- ।
ಲ್ಲಲಿತಗುಣರತ್ನನರ್ಹದ್ದಾಸ ವೈಶ್ಯನಂ ।
ವಿಲಸದ್ವಿನಯದಿಂದಮಿರಿಸಿಯಲ್ಲಿಂದ ಪೊರಮಟ್ಟು ನಿಜನಿಲಯಕೆಯ್ದಿ ॥
ನೆಲೆಗೊಂಡ ನಿರ್ವೇಗವಾ ಮನದೊಳಾವರಿಸೆ ।
ಛಲದಂಕನಾ ಸಂಸೃತಿಯದೊಂದು ಬಂಧನ- ।
ಕ್ಕಲಸಿಯಾಸ್ಥಾನಮಂಟಪದಲ್ಲಿ ಹರಿಸದಿಂದೀ ತೆರದಿ ಕುಳ್ಳಿರ್ದನು ॥ ೧೯ ॥
ಮಕುಟವರ್ಧನರ ಮನ್ನೆಯರ ಸಚಿವರ ಮಂಡ- ।
ಳಿಕರ ದುರ್ಗಾಧಿನಾಥರ ಮಹಾದಂಡನಾ- ।
ಯಕರ ರಾಜಾಧಿರಾಜರ ಕುಮಾರರ ಬಂಧುಜನದ ದೇಶಾಧೀಶರಾ ॥
ಪ್ರಕಟಿತಪ್ರಭುಜನರ ಪರಮಹೀಪಾಲಕ ।
ಪ್ರಕರದ ನಿಯೋಗಿಗಳ ಸಾಮಂತಜನದ ಕರ- ।
ಣಿಕರ ದೊರೆದೊರೆಗಳ ವಿತಾನದೊಳಗೊಡ್ಡೋಲಗಂಗೊಟ್ಟು ಸೊಗಯಿಸಿದನು ॥ ೨೦ ॥
ಪಲವು ಪೃಥ್ವೀಪಾಲಕಪ್ರತತಿ ಕೆಯ್ಗೆಯ್ದ ।
ಪಲವು ಚಿತ್ರಾಂಬರದ ಪಲವು ಮಣಿಭೂಷಣದ ।
ಪಲವು ರುಚಿಯೊಡಗಲಸಿದಾಸ್ಥಾನಮಂಟಪಂ ಕಣ್ಗೆಡ್ಡಮಾದುದಿಂತು ॥
ನೆಲೆಯಾಗಿ ದೇಹದಸ್ಥಿರಮನುದಯಾಸ್ತಮಯ- ।
ದಲಸಿಕೆಯ ನರರಿಗರಿಪಲ್ಕವನಿಗಿಳಿತಂದ ।
ಸುಲಲಿತ ಸುಪರ್ವಕೋದಂಡದ ನವಗ್ರಹದ ಬಳಗವೆಂದೆಂಬಂದದಿ ॥ ೨೧ ॥

ಕಂಬಿಯುವರುಗ್ಘಡಣೆ ಕವಿಗಮಕಿವಾದಿನಿಕು- ।
ರುಂಬದ ಪೊಗಳ್ಕೆಯುಕ್ಕರಿಗರುಲಿವೋದುವಾ- ।
ಡಂಬರಂ ಭೂಸುರವ್ರಾತದಾಶೀರ್ವ್ವಾದ ಪರಿಹಾಸಕರ ಸಗೆನುಡಿ ॥
ಇಂಬಾಗಿ ನುಡಿವ ನುಡಿಗಾರರಿಂ ಚರಮಾವು- ।
ನಂಬುಗಲ್ಮಿಗೆ ಲಾಲಿಸುತ್ತ ಘೂರ್ಣಿಸುವ ದು- ।
ಗ್ಧಾಂಬುರಾಶಿಯ ನಡುವಣಪರದಿಕ್ಪತಿಯಂತಿರೊಪ್ಪಿರ್ದ್ದನಾ ಭೂಪನು ॥ ೩೨ ॥
ಈ ತೆರದಿನೋಲಗಂಗೊಟ್ಟು ತನ್ನಗ್ರತನು- ।
ಜಾತನಂಬರಿಸಿ ಎಲೆ ಮಗನೆ ನನಗಿನ್ನೀ ಮ- ।
ಹೀತಳಮನಾಳ್ವುದುಚಿತಮೆ ಇರಿವ ಮೆರೆವ ಹರೆಯದ ಮಗನ ಕಂಡು ಕಂಡು ॥
ಭೂತಳಾಧಿಪತಿತ್ವಮಂ ಕುಡದೆ ಕೇಡ ಹಜೆ- ।
ವೀ ತನುವಿನೊಂದು ಭೋಗಕ್ಕೆ ಸಲವಾಗಿ ಬಲು ।
ಭೂತಹೊಡೆದವರಂತೆ ಮೆಯ್ಮರೆದಿರಲ್ನರಕಗತಿಯಾಗದೆ ಬಿಡುವುದೆ ॥ ೩೩ ॥
ಪಿಂತೆ ನಮ್ಮೀ ಪೀಳಿಗೆಯ ಪಿತೃಪಿತಾಮಹರ ।
ಸಂತಾನಮೆಲ್ಲ ತಂತಮ್ಮ ನಿಜತನುಜರ್ಗ್ಗೆ ।
ಸಂತೋಷದಿಂ ರಾಜ್ಯಭಾರಮಂ ಹೊರಿಸಿ ದೀಕ್ಷೆಯನಾಂತು ತಪಸುಗೆಯ್ದು ॥
ಸಂತತಂ ಸುಖಮನೀವಾ ಸ್ವರ್ಗ್ಗಮುಕ್ತಿಪದ- ।
ಕೆಂತರಿಸದೇ ಪೋದರದುಕಾರಣಂ ತಮ್ಮ ।
ಸಂತತಿಯ ಮೇರೆಯಂ ಸತ್ಪುತ್ರರಾದವಮ್ಮೀರ್ರುವುದು ಮಾರ್ಗ್ಗವಲ್ಲ ॥ ೩೪ ॥
ಈ ವಯಸ್ಸಿನೊಳಿನ್ನು ಕೆಲದಿವಸಮೀ ಸಿರಿಯ- ।
ನೋವದೇ ಅನುಭವಿಸಿ ಮುಪ್ಪು ಬಂದಂದಿಗಿರ- ।
ದಾ ವಿನುತಮಪ್ಪ ದೀಕ್ಷೆಯನಾಂಪೆನೆಂದೊಡೆ ಕಾಲನೆಂದೆಂಬ ಪಾಪಿ ॥
ಈವೊಡಲಶಿಶುವೀತನೀ ಜವ್ವನಿಗನೀತ- ।
ನೀ ವೃದ್ಧನೀತನಿವನೆಂದೆಂಬ ದಯೆಯುಂಟೆ ।
ಯಾವಗಂ ಬಂದು ನುಂಗುವನೊ ಎಂಬುದನು ಭಾವಿಸಲುಬೇಕತಿ ಚತುರರು ॥ ೩೫ ॥
ಜೀವ ಮನೆಯೊಳಗೆ ಕೆಯ್ಗಾವುದುಂ ಸಿಕ್ಕಲದ- ।
ನೋವದೇ ಕೊಂಡು ಬೇಗದಿ ಪೊರಮಡುವರಂತೆ ।
ಯಾವಾಗ ಕೆಡುವುದೋ ಎಂಬೀ ಪರಿಗ್ರಹದೊಳಿರ್ದ್ದು ವ್ರತಮಂ ಧರಿಯಿಸಿ ॥
ಕೈವಲ್ಯಪದಕೆ ಪೊರಮಡುವುದರಿವಂ ಪಡೆದ ।
ಜೀವನಕ್ಕೌಚಿತ್ಯಮೆನುತ ನಿಜಸುತನ ನಾ- ।
ನಾವಿಧದೊಡಂಬಡಿಕೆಯಿಂದೊಡಂಬಡಿಸಿ ತದ್ಭೂಪಾಲಚೂಡಾಮಣಿ ॥ ೩೬ ॥
ಮತ್ತಮಾ ಮರುವಗಲಿಸುತ್ತಮ ಮುಹೂರ್ತದೊಳ್ ।
ಚಿತ್ತಶುದ್ಧಿಯೊಳು ತತ್ಸುತ ವಿಕ್ರಮೋದಯಂ- ।
ಗಿತ್ತು ರಾಜ್ಯಶ್ರೀಯನಾ ಸುಬುದ್ಧಿ ಪ್ರಧಾನಿಯುಮಾ ಸುವರ್ಣಖುರನುಂ ॥

ತತ್ತನೂಜರ್ಗ್ಗೆ ತಂತಮ್ಮ ಮನೆವಾರ್ತೆಗಳ- ।
ನಿತ್ತು ನಿರ್ವ್ವೇಗಮಾನಸರಾಗಿಯೊಡನೆ ಬರು- ।
ಉತ್ತಮ ಗುಣಾಭರಣನಾ ವೈಶ್ಯಕುಲತಿಲಕನನುರಾಗದಿಂದೆಯ್ದಲು ॥ ೩೭ ॥
ಅರಿಕೆಯರ ಮಕ್ಕಳ್ಗೆನೂರ್ವ್ವರಿರದೊಡನೆಯ್ದೆ ।
ತೊರೆದೆರಡು ತೆರದ ತೀವ್ರಪರಿಗ್ರಹಂಗಳಂ ।
ಕರಿಗೊಂಡು ಭಕ್ತಿಯಿಂ ಗುಣಧರಾಖ್ಯ ನಮೋಸ್ತುಗಳ ಪಾದಪಂಕರುಹಕೆ ॥
ಎರಗಿಯುನ್ಮತ್ತಮಧುಕರನಂತೆ ತನ್ನ ಮನ- ।
ದೆರಕದಿಂದೆಸೆವ ಜಿನದೀಕ್ಷೆಯಂ ಕೊಂಡು ನಾ- ।
ಡೆರೆಯನುದಿತೋದಯಂ ಭೂಲೋಕದೊಳ್ಕೀರ್ತ್ತಿವಡೆದನದನೇ ವೊಗಳ್ವೆನು ॥ ೩೮ ॥
ಆತನ ಮನೋರಮಣಿ ಉದಿತಾಮಹಾದೇವಿ ।
ಭೂತಳವಿನೂತನಾ ಸಚಿವೋತ್ತಮನ ವನಿತೆ- ।
ಯಾ ತಸ್ಕರನ ನಿಜಾಂಗನೆ ವೃಷಭದಾಸಸೆಟ್ಟಿಯ ಸತಿಯರಾಯೆಣ್ಬರು ॥
ಪ್ರೀತಿಯಿಂ ಮತ್ತೆ ಕೆಲ ಸತಿಯರೊಡನೆಯ್ತರು- ।
ಲ್ವಾತಿಶಯಮಪ್ಪ ಜಿನದೀಕ್ಷೆಯಂ ಧರಿಸಿದಳ್- ।
ನೀತಿಮತಿಯೆಂಬ ಕಂತಿಕೆಯರಿಂ ಧರೆಯೆಲ್ಲಮೊಸೆದು ಕೊಂಡಾಡುವಂತೆ ॥ ೩೯ ॥
ಆ ದೀಕ್ಷೆಯಂ ಕೊಂಡು ಕಡೆಗಾಲದಲ್ಲಿಯುದಿ- ।
ತೋದಯನುಮಾ ಸಚಿವನಾ ವೈಶ್ಯಕುಲತಿಲಕ- ।
ನಾ ದಯಾನಿಧಿ ಕುಂದಲತೆಯಾದಿಯಾದ ವೈಶ್ಯಸ್ತ್ರೀಯರಾ ಅರಸಿಯುಂ ॥
ಜೋದಿಗಮೆನಿಪ್ಪ ಸಲೆಸೌಖ್ಯಸಂಪದವ ಸಂ- ।
ಪಾದಿಸುವ ಪದಿನಾರನೆಯ ಸಗ್ಗದೊಳ್ದೇವ- ।
ರಾದರುಳಿದವರು ತಂತಮ್ಮ ತಪಸಿಗೆ ತಕ್ಕ ಸುರಲೋಕಮಂ ಸಾರ್ದ್ದರು ॥ ೪೦ ॥
ಈ ತೆರದಿ ವೀರೇಶ್ವರನ ಸಮವಸರಣದೊಳ್ ।
ಗೌತಮಗಣಾಗ್ರಗಣ್ಯಂ ಸಕಲವಿಶ್ವಂಭ- ।
ರಾತಳಾಧೀಶನಾ ಶ್ರೇಣಿಕನೃಪಾಲಂಗೆ ಕಾರುಣ್ಯಮೊದವೆ ಪೇಳ್ದಾ ॥
ಸಾತಿಶಯಮಪ್ಪ ಸಮ್ಯಕ್ತ್ವದ ಚರಿತ್ರಮಂ ।
ಪ್ರೀತಿಯಿಂ ಶ್ರೀವಿಜಯಭೂಮಿಪಾಲಕನ ತನು- ।
ಜಾತ ಮಂಗರಸನಾನೆನ್ನ ದುಃಕೃತದ ಕೇಡಿಂಗೆಂದು ವಿರಚಿಸಿದನು ॥ ೪೧ ॥
ದುರುದುಂಬಿತನದಿಂದ ದುರ್ವಿಚಾರದೊಳು ನಡೆ- ।
ದರಗುಲಿಜಪಂಗೆ ಕುಯ್ಯುರಿಮಾಡಿ ದೇಹಮಂ ।
ಮರುಹುಟ್ಟಹುಟ್ಟಿಯೆಂದಾನೆಗಾಲಂ ಪೊದಳ್ದವವೆಂಬ ವಿಪಿನದಲ್ಲಿ ॥
ಪರವೀಣಿಗೆ ಬರ್ಪ್ಪುದಂ ನೀಗಬೇಕೆಂದು ಮನ- ।
ದೆರಕದಿಂ ಪೇಳ್ದೆನಲ್ಲದೆ ನನ್ನದೊಂದು ಬೇ- ।
ಸರಿಕೆಗೆಸಲಂ ಪೇಳ್ವುದಿಲ್ಲಿನಿಂ ಶುದ್ಧಸಮ್ಯಕ್ತ್ವದ ಮಹಾಕಥೆಯನು ॥ ೪೨ ॥

ಚಾರಚೋರರಮೇಲೆ ವಾಕ್‌ಚಾತುರ್ಯ್ಯಕಾಗಿ ।
ಸೇರಿಸಿದ ಕಥೆಯುಲ್ಲ ಕೈವಲ್ಯಸಂಪದವ- ।
ನಾರಯ್ಯುದೀವ ಸಮ್ಯಕ್ತ್ವದ ಮಹಾಕಥನಮಿಂತಿದಂ ಪೇಳ್ದೆ ನಾನು ॥
ಧಾರಿಣೀತಳದ ಭವ್ಯಾಳಿಯಿಂತಿದನು ಮನ- ।
ವಾರೆ ತಂತಮ್ಮ ಮಕ್ಕಳ ಮಾತುಗೇಳ್ವಂತೆ ।
ಕಾರುಣ್ಯದಿಂದ ಲಾಲಿಸಿ ಕೇಳಿತಿದ್ದುವುದು ಮತ್ತಿದರ ತಪ್ಪುಗಳನು ॥ ೪೩ ॥
ಇದನೊಸೆದು ಬರವೆನೆಂದೆಂಬವರ್ಗ್ಗೆ ಶುಭಮಸ್ತು ।
ಇದರ ತಪ್ಪಂತಿದ್ದುವರ್ಗ್ಗೆ ಸುಖಪದಮಸ್ತು ।
ಇದನನುಶ್ರುತವೋದಬೇಕೆಂಬ ರಸಿಕರ್ಗ್ಗೆ ಪುತ್ರಸಂತಾನಮಸ್ತು ॥
ಇದನೊಲಿದು ಪೇಳ್ವರ್ಗ್ಗೆಯಾರೋಗ್ಯಕರಮಸ್ತು ।
ಇದನಿರದೆ ಕೇಳ್ವರ್ಗ್ಗೆಯಾಯುಷ್ಯಘನಮಸ್ತು ।
ಇದ ಕೇಳಿ ಪರಿಣಾಮಮಂ ಮಾಡುವುತ್ತಮರ್ಗ್ಗೆ ಮಹದೈಶ್ವರ್ಯ್ಯಮಸ್ತು ॥ ೪೪ ॥
ಎಂದು ನಾನೆನ್ನ ಬಲ್ಲಂದದಿಂ ಸದ್ಭವ್ಯ- ।
ವೃಂದಮೆಲ್ಲಂ ದಿನಂಪ್ರತಿ ಮನದೆಗೊಂಡು ಕೇ- ।
ಳ್ವಂದದಿಂದತಿಕಠಿಣಪಾಕಮಲ್ಲದೆ ಸುಭಗವೆಂದೆಸಿಪ ಷಟ್ಪದಿಯೊಳು ॥
ಸಂದ ಸಕ್ಕದಗನ್ನಡವನೆರಡನೊಡವೆರಸಿ ।
ಮಂದೇತರಾಮೋದದಿಂದ ಮೃದುಪಾಕಮ- ।
ಪ್ಪಂದದಿಂ ವಿರಚಿಸಿದೆನಾನಿದಂ ಸಜ್ಜನರ್ ಸಂತೋಷದಿಂ ಕೇಳ್ವುದು ॥ ೪೫ ॥
ಇದು ವಿಬುಧಜನವಿನುತಮಿದು ವಿಬುಧಜನವಿನತ- ।
ಮಿದು ವಿದಿತಜಿನಸಮಯಶರಧಿಸಂಪೂರ್ಣೇಂದು ।
ಸದಮಲಚರಿತ್ರ ಯದುವಂಶಭೂವರರ ಸಚಿವಾನ್ವಯಾಂಬರಹಂಸನು ॥
ಮದನಸಮರೂಪನುತ್ತಮಗುಣಕರಂಡಕಂ ।
ಚದುರಮಂಗರಸನುಸಿರ್ದೀ ಕೌಮುದೀ ಕಥೆಯೊ- ।
ಳೊದವಿರಂಜಿಸಿದುದುದಿತೋದಯಸ ಸಮ್ಯಕ್ತ್ವದೇಳ್ಗೆ ಪನ್ನೆರಡುಸಂಧಿ ॥ ೪೬ ॥
ಸಾಸಿರದಮೇಲೆ ನಾನೂರಮೂವತ್ತೊಂದು ।
ಭಾಸುರಂಬಡೆದ ಶಕವರ್ಷದೆಸೆವಾಶ್ವಯುಜ ।
ಮಾಸದಾ ಶುಕ್ಲಪಕ್ಷದ ಷಾಡ್ಯಮುಂ ಮಂದವಾರದೊಳಗೀ ಕೃತಿಯುನು ॥
ಈ ಸಂಸ್ಕೃತಿ ಶ್ರಾಂತವಿಶ್ರಾಂತಮಂ ಮಾಡು- ।
ವಾಸೆಯಿಂದಲೆ ಸಮಾಪ್ತಂಗೆಯ್ದೆಸಿಂತಿದನು- ।
ದಾಸೀನಮಂ ಮಾಡದೇ ಭವ್ಯಸಮಿತಿ ಸಂತೋಷದೊಳು ಲಾಲಿಸುವುದು ॥ ೪೭ ॥

ಅಂತು ಸಂಧಿ ೧೨ಕ್ಕಂ ಪದನು ೭೭೫ಕ್ಕಂ ಸಮಾಪ್ತ ಮಂಗಲಮಹಾ ॥ ಶ್ರೀಶ್ರೀಶ್ರೀ

---

ಶ್ರೀವೀತರಾಗಾಯ ನಮಃ ।

ಶ್ರೀವಾಸುಪೂಜ್ಯಾಯ ನಮಃ ।

# ಟಿಪ್ಪಣಿ.

## ಮೊದಲನೆಯ ಸಂಧಿ.

**ಪಲ್ಲವಿ:**—ಇದನ್ನು ಕೆಲವರು ಸೂಚನೆಯೆಂದೂ ಹೇಳುವರು. ಕೆಲವು ಷಟ್ಪದಿ ಕಾವ್ಯಗಳ ಆರಂಭದಲ್ಲಿ (ಜೈಮಿನಿಭಾರತ, ಗದಗಿನ ಭಾರತ, ತೊರವೆ ರಾಮಾಯಣಗಳಂತೆ) ಇರುವ ಪೀಠಿಕಾ ಸಂಧಿಗೆ ಸೂಚನೆಯಿಲ್ಲ. ಮತ್ತೆ ಪ್ರಭುಲಿಂಗಲೀಲೆಯಲ್ಲಿ ಒಂದೊಂದು ಸಂಧಿಗೂ ಮೊದಲಲ್ಲಿ ವಚನಸೂಚನೆಗಳೆರಡೂ ಇವೆ. ಒಂದೊಂದು ಸಂಧಿಗೂ ಮೊದಲಲ್ಲಿ ಸೂಚನೆಯನ್ನು ಹೇಳುವುದು ಷಟ್ಪದಿಕಾವ್ಯಗಳ ಸಂಪ್ರದಾಯವಾದರೂ, ಈ ಮೊದಲನೆಯ ಸಂಧಿಯ ಸೂಚನೆ ಸಮ್ಯಕ್ತ್ವಕೌಮುದಿ ಎಂಬ ಗ್ರಂಥಕ್ಕೇ ಸೂಚನೆಯಾಗಿರುವುದು. ಅರ್ಹದ್ದಾಸನೂ ಅವನ ಹೆಂಡಿರೂ ತಮತಮಗೆ ಸಮ್ಯಕ್ತ್ವವು ಹುಟ್ಟಿದ ಕಥೆಗಳನ್ನು ಹೇಳಿಕೊಳ್ಳುತ್ತಿದ್ದಂದು ಕೇಳುತ್ತಿದ್ದ ಉದಿತೋದಯ ಮಹಾರಾಜನ ಮನಸ್ಸಿನಲ್ಲಿ ಸಮ್ಯಕ್ತ್ವವು ನೆಲೆಗೊಂಡು ಅವನು ಜಿನದೀಕ್ಷೆಯನ್ನು ಪಡೆದು ಹದಿನಾರನೆಯ ಸ್ವರ್ಗವಾದ ಅಚ್ಯುತಕಲ್ಪದಲ್ಲಿ ಅಚ್ಯುತೇಂದ್ರನಾಗಿ ಜನಿಯಿಸಿದನು.

ಒರೆ=ಹೇಳು; ಒಗೆ=ಹುಟ್ಟು; ಒಸೆ=ಪ್ರೀತಿಸು, ಪ್ರಸನ್ನನಾಗು. ಕೆಯ್ಕೊಂಡು=ಅಂಗೀಕರಿಸಿ, ತಳೆದು; ಸಗ್ಗ=ಸ್ವರ್ಗ.

ಆಪ್ತ ಆಗಮ ತತ್ವ ಇವುಗಳಲ್ಲಿ ನಿರ್ಮಲವಾಗಿಯೂ ನಿಸ್ಸಂದೇಹವಾಗಿಯೂ ನಿರ್ದೋಷವಾಗಿಯೂ ಇರುವ ಶ್ರದ್ಧೆಯೇ ಸಮ್ಯಕ್ತ್ವವೆಂದು ಶಾಸ್ತ್ರವಿದರು ಹೇಳುವರು.

**ಅತ್ತಾಗಮತಚ್ಚಾಣಂ ಜಂ ಸದ್ದಹಣಂ ಸುಣಿಮ್ಮಳಂ ಹೋದಿ ।**
**ಸಂಕಾಇದೋಸರಹಿಯಂ ತಂ ಸಮ್ಮತ್ತಂ ಮುಣೇಯವ್ವಂ ॥**

೧. ಈ ಪದ್ಯದಲ್ಲಿ ಶ್ರೀಪರಮೇಶ್ವರನಾದ ವೀರಜಿನೇಂದ್ರನನ್ನು ಸಮ್ಯಕ್ತ್ವಸಂಪತ್ತನ್ನು ನಮಗೆ ದಯಪಾಲಿಸಬೇಕೆಂದು ಪ್ರಾರ್ಥನೆ

೨. ಈ ಪದ್ಯವೊಂದರಲ್ಲಿಯೇ ಚತುರ್ವಿಂಶತಿ ತೀರ್ಥಂಕರರ ನಾಮಸ್ಮರಣೆಯನ್ನು ಕವಿ ಮಾಡುತ್ತಾನೆ.

೩. ಮಾಳ್ಪ=ಮಾಡುವ ಬಂಟನಿಡಿತ=ಬಂಟರಿಂದ (ಕಾಲಾಳ್ಗಳಿಂದ) ಹಿಡಿಯುವದು. ಒಡಿದು=ಹೊಡೆದು, ನಾಶಮಾಡಿ. ಎಂಟನೆಯ ನೆಲೆ=ಸಿದ್ಧರ ನೆಲೆ. ಹರಿದಾಳಿ=ಮುತ್ತಿಗೆ. ಚಿರಪಟ್ಟ=ಸ್ಥಿರವಾದ ಪಟ್ಟ. ನೆನೆದು=ಸ್ಮರಿಯಿಸಿ.

**ಎಂಟು ಕರ್ಮಂಗಳು:—** " ಜ್ಞಾನಾವರಣೀಯಂ, ದರ್ಶನಾವರಣೀಯಂ, ವೇದನೀಯಂ, ಮೋಹನೀಯಂ, ಆಯುಷ್ಯಂ, ನಾಮಂ, ಗೋತ್ರಂ, ಅಂತರಾಯಂ ಎಂಬ ಅಷ್ಟವಿಧಗಳಕ್ಕುಂ. " ( ಅಜಿತಪುರಾಣಂ ೧೧. )

**ಸಿದ್ಧರ ಎಂಟು ಗುಣಂಗಳು:—** ಸಮ್ಯಗ್‌ಜ್ಞಾನ, ಸಮ್ಯಗ್ದರ್ಶನ, ಸಮ್ಯಕ್ಚಾರಿತ್ರ, ವೀರ್ಯ, ಸೂಕ್ಷ್ಮತ್ವ, ಅವಗಹನ, ಅಗುರುಲಘುತ್ವ, ಅವ್ಯಾಬಾಧಂ ಎಂಬಿವು.

೪. ನೀಗಬೇಕು=ತೊಲಗಿಸಬೇಕು. ಬಳಲ್ಕೆ=ಆಯಾಸ ( ಧಾವತಿ ). ಬಗೆ=ಮನಸ್ಸು. ಪ್ರಸಿದ್ಧವಹ=ಪ್ರಸಿದ್ಧವಾದ. ಮಾಳ್ಪೆನು=ಮಾಡುವೆನು. ಕತ್ತಲೆಯನ್ನು ಹೋಗಲಾಡಿಸುವದಕ್ಕೆ ದೀಪವೂ ಆಯಾಸವನ್ನು ಪರಿಹರಿಸುವುದಕ್ಕೆ ನೀರೂ ಬೇಕಲ್ಲವೇ? ಇಲ್ಲಿ ಕರ್ಮಾಂಧಕಾರವನ್ನು ತೊಲಗಿಸಲಿಕ್ಕೆ ರತ್ನತ್ರಯದ ಬೆಳಕೂ, ಸಂಸಾರದ ಬಳಲಿಕೆಯನ್ನು ತೊಲಗಿಸುವ ದಯಾರಸವೂ ಆಚಾರ್ಯರಲ್ಲಿ ಇರುವುವು.

**ರತ್ನತ್ರಯಗಳು:—**ಸಮ್ಯಗ್ದರ್ಶನ, ಸಮ್ಯಕ್‌ಜ್ಞಾನ, ಸಮ್ಯಕ್ಚಾರಿತ್ರವೆಂಬಿವು.

**ತತ್ವಪ್ರೀತಿ ಮನಕ್ಕೆ ಪುಟ್ಟಿಲದು ಸಮ್ಯಗ್ದರ್ಶನಂ ಮತ್ತಮಾ**
**ತತ್ವಾರ್ಥಂಗಳನೊಲ್ದು ಬೋಧಿಪುದು ಸಮ್ಯಗ್ಜ್ಞಾನಮಾಬೋಧದಿಂ**
**ತತ್ವಂಗಳ್ ಕಿಡದಂತುಟೋವಿ ನಡೆಯಲ್ ಸಮ್ಯಕ್ಚರಿತ್ರಂ ಸುರ**
**ತ್ನತ್ವಂ ಮೂರಿವು ಮುಕ್ತಿಗೆಂದರಿಪಿದೈ ರತ್ನಾಕರಾಧೀಶ್ವರಾ.**

೫. ಅಟಮಟ=ಮೋಸ, ಕಪಟ. ಪರಿಪಡಿಸು=ತೊಲಗಿಸು, ಹೋಗಲಾಡಿಸು. ದಿಟ=ಸತ್ಯ. ಪೇಸು=ಅಸಹ್ಯವೆಂದ ಬಿಡು. ಮೂಡು=ಹುಟ್ಟು. ಬಯಲ=ವ್ಯರ್ಥವಾದ, ಪ್ರಯೋಜನವಿಲ್ಲದ. ತಟಹೊಟ=ಟಕ್ಕು, ಮೋಸ. ಪಲವು ಸೂಳ್=ಹಲವು ಬಾರಿ; ಅನೇಕಾವರ್ತಿ. ಎರಗಿ=ನಮಸ್ಕರಿಸಿ, ಅಡ್ಡಬಿದ್ದು. ಪೇಳ್ದ=ಇಲ್ಲಿ ಉಪದೇಶ ಮಾಡಿದ.

೬. ಉಜ್ಜುಗವಂ=ಉದ್ಯೋಗವನ್ನು. ಉಜ್ಜುಗಿಪ=ಯತ್ನಿಸುವ. ನೆರೆ=ಚೆನ್ನಾಗಿ, ಸೆಟ್ಟಗೆ; ಏಳಿಗೆ=ಉನ್ನತಿ. ನಿರ್ವೃತಿ=ಮುಕ್ತಿ. **ಏಳುಋದ್ಧಿಗಳು:—** ಬುದ್ಧಿ, ತಪ-ವಿಕ್ರಿಯಾ, ಔಷಧ, ರಸ, ಬಲ, ಅಕ್ಷೀಣ. **ಏಳು ತತ್ವಗಳು:—** ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರೆ, ಮೋಕ್ಷ. **ಏಳು ಭಯಗಳು:—** ಇಹಲೋಕಭಯ, ಪರಲೋಕಭಯ, ಅನುರಕ್ಷಕಭಯ, ಅಕಸ್ಮಾತ್‌ಭಯ, ವೇದನಾಭಯ, ಮರಣಭಯ, ಅಗುಪ್ತಿಭಯ.

ಇಲ್ಲಿಗೆ ಮೊದಲನೆಯ ಪದ್ಯದಿಂದ ಆರನೆಯ ಪದ್ಯದವರೆಗೆ ಜಿನಕವಿಗಳ ಸಂಪ್ರದಾಯದಂತೆ ಪಂಚಪರಮೇಷ್ಠಿಗಳ ವಂದನೆಯಾಯ್ತು ( ಅರ್ಹತ್ಸಿದ್ಧಾಚಾರ್ಯೋಪಾಧ್ಯಾಯ ಸರ್ವಸಾಧುಸ್ತವನಂ ).

೭. ಮಾಣದೆ=ಬಿಡದೆ, ತಪ್ಪದೆ. ನೆಲಿಸಿ=ನೆಲೆಗೊಂಡಿದ್ದು.

೯. ಎಲ್ಲ ಕಲೆಯುಲ್ಲಿ. ಬಲ್ಲಿದನು–ಎಲ್ಲಾ ವಿದ್ಯೆಗಳಲ್ಲಿಯೂ ನಿಪುಣನು. ಸಕ್ಕದದಿ=ಸಂಸ್ಕೃತದಿಂದ. ಉಲ್ಲಸ=ಉಲ್ಲಾಸ.

೧೦. ತೆಂಬೆಲರ=ತೆಂಕಣಗಾಳಿಯ. ತಕ್ಕರ=ಯೋಗ್ಯರಾದವರ; ತೊಡಂಬೆ=ಗೊಂಚಲು. ಕೆಂಬರಲ=ಕೆಂಪೆಂಬ ರತ್ನದ ತೊಡವು=ಆಭರಣ, ಒಡವೆ. ಅಣ್ಪು=ಲೇಪನ. ಪೊರೆದ=ಕೂಡಿಕೊಂಡಿರುವ. ನುಣ್ಚರಂ=ಮೃದುವಾದ ಸ್ವರ.

೧೧. ಚೆಂದುಟಿ=ಕೆಚ್ಚನೆ+ತುಟಿ. (ಕೆಂಪಗಿರುವ ತುಟಿ) ಪೊಣ್ಮುವ=ಏಳುತ್ತಿರುವ, (ಉದ್ಗಮನಾರ್ಥ) ಎಳಜವ್ವನೆಯರು=ಎಳೆಯ ಪ್ರಾಯದ ಹೆಂಗಸರು. ಒಸೆ=ಪ್ರೀತಿಸು; ಬಟ್ಟವಾಲ್=ಕೆನೆಹಾಲು. ಅಸಿಯಳು=ವಲ್ಲಭೆ. ಅರಮಾವು (ಅರಸು+ಮಾವು)=ಸೀಮಾವು. ತನಿವಣ್=ಪಕ್ವವಾದ ಹಣ್ಣು.

೧೨. ನೀರೆ=ವಲ್ಲಭೆ (ಹೆಂಡತಿ).

೧೩. ಸಸಿನಕೆ=ಸಮಿಾಪಕ್ಕೆ. ಸಮವಸರಣವೆಂದರೆ ಇಲ್ಲಿ ಶ್ರೀವೀರಜಿನೇಂದ್ರ ಸಮವಸರಣ (ಜಿನೇಂದ್ರರ ಒಡ್ಡೋಲಗಕ್ಕೆ ಸಮವಸರಣವೆಂದು ಹೆಸರು). ನಾಲ್ದೆರದ ಸುರಸಮಿತಿ=ಭವನಾಮರರು, ವ್ಯಂತರಾಮರರು, ಜ್ಯೋತಿರಮರರು, ಕಲ್ಪಾಮರರು ಎಂಬ ನಾಲ್ಕು ಬಗೆಯ ಸುರರ ಸಮೂಹ. ತಳಿರ್=ಚಿಗುರು; ನನೆ=ಹೂ, ದೋರೆವಣ್=ಇನ್ನೂ ಚೆನ್ನಾಗಿ ಮಾಗದ ಹಣ್ಣು; ತನಿವಣ್=ಮಾಗಿದ ಹಣ್ಣು. ತೀಡಿದುದು=ಊದಿದುದು=ಬೀಗಿತ್ತು. ತಿಳಿದುವು=ನಿರ್ಮಲವಾದುವು; ಝುಳಝುಳಸಾದುವು.

೧೪. ಓರಣ=ವಿಶ್ವಾಸ; ಬಿಸವಂದ=ಆಶ್ಚರ್ಯ.
ಈ ಪದ್ಯದಲ್ಲಿಯೂ ಮೇಗಣ ಪದ್ಯದಲ್ಲಿಯೂ ಜಿನರ ಮಹಿಮೆ ಸ್ಪಷ್ಟವಾಗಿ ತಿಳಿಯುವುದು.

೧೫ ಅಂಗಚಿತ್ತ=ಮೆಚ್ಚು, ಬಹುಮಾನ=ಸಂತೋಷದಿಂದ ರಾಯನು ಸುದ್ದಿಯನ್ನು ತಿಳಿಸಿದವನಿಗೆ ತನ್ನ ಮೈಯಮೇಲೆ ಇದ್ದ ವಸ್ತ್ರ ಆಭರಣಗಳಲ್ಲಿ ಯಾವುದನ್ನಾದರೂ ಕೊಟ್ಟರೆ ಅದು ಅಂಗಚಿತ್ತವೆನಿಸುವುದು; ಇದನ್ನು ಹೀಗೆ ಕೊಡುವುದಕ್ಕೆ ಮೆಚ್ಚುಗೊಡುವುದೆಂದೂ ಹೇಳುವುದುಂಟು. ಐದಿ=ಬಂದು. ಮಣಿದು=ನಮಸ್ಕರಿಸಿ=ಎರಗಿ. ಮನುಜಕೋಷ್ಠದೊಳು ಕುಳ್ಳಿರ್ದು=ಸಮವಸರಣದಲ್ಲಿ ಬೇರೆ ಬೇರೆ ಜಾತಿಯವರಿಗೆ ಪ್ರತ್ಯೇಕವಾಗಿ ಕೋಷ್ಠಗಳು ಇರುವವು. ಮನುಷ್ಯನಾದವನು ಗಣಧರರ ಕೋಷ್ಠದಲ್ಲಿ ಕುಳಿತುಕೊಳ್ಳಲಾರನು. "ಹನ್ನೆರಡು ಕೋಷ್ಠಂಗಳೊಳ್ ದಕ್ಷಿಣಾನುಕ್ರಮದೊಳೆ ಗಣಧರಗಣಮುಂ ಕಲ್ಪಾಮರಕಾಂತಾಸಂತತಿಯುಂ ಉಪಾಸಕಾಂಗನಾಸಂಗತಗಣನೀಗಣಮುಂ ಜ್ಯೋತಿರಮರಯುವತಿಸಮಿತಿಯುಂ ವಾನವ್ಯಂತರನಿತಂಬಿನೀನಿಕುರುಂಬಮುಂ ಭವನವಾಸಿಕವನಿತಾಸಮೂಹಮುಂ ವನಜಸಂಕುಲಮುಂ ಜ್ಯೋತಿರ್ದೇವಸಮೂಹಮುಂ ಕಲ್ಪದಿವಿಜಸಮು

ದಯುಮುಂ ಮಾನವನಿವಹಮುಂ ತಿರ್ಯಕ್ಕ್ರತಿಯುಂ ಎಂಬೀ ದ್ವಾದಶಗಣಂಗ ಳಿಕ್ಕುಂ" (ಅಜಿತಪುರಾಣ).

೧೬. ವಾಯುತ್ರಯ=ಘನೋದಧಿ ಘನಾನಿಳ ತನುವಾತವೆಂಬ ವಾಯುತ್ರಯಂ. ಲೋಕತ್ರಯ=ಅಧಸ್ತಿರ್ಯಗೂರ್ಧ್ವಗಳೆಂಬ ಮೂರು ಲೋಕಗಳು. ದೊರೆ=ಸಮಾನ. ನಿಡುವೊಡವಿ=ವಿಸ್ತಾರವಾದ ಭೂಮಿ.

೧೭. ಅಂದಿನಸುರಬಾಧೆ—ಪೂರ್ವದಲ್ಲಿ ಹಿರಣ್ಯಾಕ್ಷನು ಭೂಮಿಯನ್ನು ಕದ್ದುಕೊಂಡು ಹೋದಂದು ಅವನನ್ನು ಧ್ವಂಸಮಾಡಲು ನಾರಾಯಣನು ವರಾಹಾವತಾರವನ್ನು ಎತ್ತಿದಂತೆ ಪುರಾಣಕಥೆ. ಹಸಗೆಯ್ದು=ಹದಮಾಡಿದ. ಅಂದವಡೆದ=ಸೊಗಸನ್ನು ಪಡೆದ. ಮಿಸುನಿ=ಚಿನ್ನ, ಭಂಗಾರ. ಕಣ್ಬಗೆಗೆಬಂದ=ಕಣ್ಣಿಗೂ ಮನಸ್ಸಿಗೂ ರಮ್ಯವಾದ.

೧೮. ಪೌರಜನಪದದ=ಪೌರವೆಂಬ ದೇಶದ.

೧೯. ಹಳಹಳಚನೆ=ನಿರ್ಮಲವಾಗಿ (ಹಳಗನ್ನಡ ಪಳಚ್ಚನೆ). ಬೆಸಕೋಲ್=ಅಂಬು. ತಿರು=ಬಿಲ್ಲನಾರಿ. ಹಳಿಹಳಿಯೊಳು=ಪಳಪಳನೆ. ಅಳುರ್ವ=ವ್ಯಾಪಿಸುವ, ಹರಡುವ. ತೊಳತೊಳಗುವ=ಪ್ರಕಾಶಿಸುವ, ಬೆಳಗುವ.

೨೦. ತತ್ತಿ=ಮರಿ. ಬಿಸಡಿ= ಮುಗಿಲು=ಮೋಡ. ನಳನಳಿಸಿ-ಮನೋಹರವಾಗಿ. ನೆರೆ=ಅಧಿಕವಾಗಿ. ವೊತ್ತ=ಸಮೂಹ, ಗುಂಪು. ಕಣ್ಗೊಳಿಪ=ಶೋಭಿಸುವ.

೨೧. ಮಿಗಿಲಾಗಿ=ಹೆಚ್ಚಾಗಿ. ಧಗಧಗಿಸಿ=ಝಳಝಳನೆ. ದೇಗುಲಂಗಳೊಳು=ದೇವಾಲಯಗಳಲ್ಲಿ. ಮಗಿಲು=ಕೊಳೆ. ಹೋಹಂತೆ=ಹೋಗುವ ಹಾಗೆ. ಹರಿಸವಡೆಯೆ=ಆನಂದವನ್ನು ಹೊಂದಲು.

೨೨. ಪಾಲ್ದೀವು=ಪಾಲ್+ತೀವು=ಹಾಲನ್ನು ತುಂಬಿರುವುದು. ಪೆಸರ್ವಡೆದ=ಪೆಸರ್+ವಡೆದ=ಪ್ರಸಿದ್ಧವಾದ. ಓವಿದ=ಪ್ರೀತಿಸಿದ. ಇಲ್ಲಿ ಸಲಹಿದ (ಧಾತು ಓವು.)

೨೩. ಎಲ್ಲೆಡೆಯೊಳಂ=ಎಲ್ಲಾ ಕಡೆಯಲ್ಲಿಯೂ. ಕಮ್ಮಗಳವೆ=ಮಧುರವಾದ ಕಳವೆ (ಧಾನ್ಯ).

೨೪. ನಳನಳಿಸಿ=ಕೋಮಲವಾಗಿ. ತಳಿ=ಬೇಲಿ. ಎಸಳಿಕ=ಒಂದು ತರದ ಮರ. ಅಟ್ಟಳಿಗೆ=ಸಂ. ಅಟ್ಟಾಳಕಾ. ಬಿಚ್ಚು=ಬೆಸುಗೆ. ಗುಡಿಲರ=ಗುಡಿಸಲು. ಮಸಯಿಸುವ=ತೀಡಿ ಹರತಮಾಡುವ. ಗೊಂದಣಂ=ಗುಂಪು (ಸಂಭ್ರಮ.) ಕುಡಿಯರರು=ಒಕ್ಕಲಿಗರು. ಒಪ್ಪಂಬಡೆದು=ಚೆಲ್ವಿಕೆಯನ್ನು ಪಡೆದು.

೨೫. ಮುಂಬರಿದು=ಮುಂದುಗಡೆ ಹರಿದು. ಕಡುಬೆಳೆದು=ಅಧಿಕವಾಗಿ ಬೆಳೆದ. ಸಡಗರ=ಸಂಭ್ರಮ. ಎಯ್ತಂದ=ಬಂದ. ಇದಿರ್ಗೊಂಬೆವೆಂದು=ಇದಿರುಗೊಳ್ಳುವೆವು ಎಂದು. ಕಳಸ=ಕಲಶ; ಕನ್ನಡಿ. ಇವು ಮಂಗಳ ದ್ರವ್ಯಗಳು. ಒಸೆದು=ಪ್ರೀತಿಸಿ. ಕಳಮೆಯ ಧಾನ್ಯ ಲಕ್ಷ್ಮಿ ಬರುತ್ತಿರುವಂದು ಇದಿರುಗೊಳ್ಳಲಿಕ್ಕೆ ಹೊರಟ ಹೊಲ

ವನ್ನು ಕಾಯುವ ಸ್ತ್ರೀಯರ ಕಡೆಗಣ್ಣ ಕಾಂತಿಯೇ ನಡೆಮುಡಿಯಾಯ್ತು; ಕಳಶವೇ ಅವರ ನೆಲೆಮೊಲೆಗಳು, ಕನ್ನಡಿಯೇ ಅವರ ನಗೆಮೊಗವೆಂದು ಕವಿ ಬಹು ಚನ್ನಾಗಿ ವರ್ಣಿಸಿರುವನು. ( ರೂಪಕಾಲಂಕಾರ ).

೧೬. ಅಟ್ಟಳೆ=ಅಟ್ಟಳಿಗೆ=ಅಟ್ಟ. ಅಡರಿ=ಹತ್ತಿ. ಗಾಳಿವಟ್ಟೆ=ಗಾಳಿಯಹಾದಿ=ಆಕಾಶ. ನಿಟ್ಟೆಸಳಗಣ್ಣ=ನಿಡಿದು+ಎಸಳ್+ಕಣ್ಣ=ದೊಡ್ಡ ಎಸಳ್ಗಳಂತಿರುವ ಕಣ್ಣುಗಳುಳ್ಳ. ಬಟ್ಟಜವ್ವನದ=ಮನೋಹರವಾದ ಹರೆಯದ. ( ವೃತ್ತ ಸ್ತನದ? )

೧೭. ರಂಗು=ಬಣ್ಣ. ತೆಗಳ್ವ=ನಿಂದಿಸುವ, ದೂರುವ. ಸೋವ=ಹಾರಿಸುವ ( ಓಡಿಸುವ ) ಎಳವಾಳೆ=ಒಂದು ಬಗೆಯ ಮೀನು. ಎರಗಿದುವು=ಇಳಿದು ಬಂದುವು. ಅರಗುಲಿ ಎಂದರೆ ಧರ್ಮವನ್ನು ಕೊಲ್ಲುವವನು. ಮೀನನ್ನು ಕೊಲ್ಲುವವನಿಗೆ ಮೀಂಗುಲಿ ಎಂದು ಹೆಸರು.

೧೮. ಕರಮೆ=ಹೆಚ್ಚಾಗಿ.

೧೯. ಅಲರ್ಗಣ್ಣು=ತಾಮರೆಯಂತಿರುವ ಕಣ್ಣು. ಮನವೊಸೆದು–ಒಸೆದು=ಮೆಚ್ಚಿ.

೨೦. ಜೀತು ( ಧಾತು. ಜೀ ಅವಸಾನೇ ) ಕಳೆದು. ಕಾತರ=ಆತುರ.

೨೧. ಅರ್ತಿ=ಪ್ರೀತಿ. ಬೆಲೆವೆಣ್=ವೇಶ್ಯೆ. ಮನೆವೆಣ್=ಗೃಹಿಣಿಯರು. ತೊಳ್ತುವೆಣ್=ಊಳಿಗಕ್ಕಾಗಿರುವ ಸ್ತ್ರೀ.

೨೩. ಇನಿಸು+ಅಗಲಿ=ಸ್ವಲ್ಪ ಅಗಲಿ; ಇನಿಯರು=ವಲ್ಲಭರು. ನನೆಗಣೆಯಂ=ಪುಷ್ಪಾಯುಧ–ಮನ್ಮಥ. ಅನುವರ=ಯುದ್ಧ. ಮಾಣವು=ಬಿಡವು.

೨೪. ಪೀಲಿ=ನವಿಲಗರಿ. ಓಳಿ=ಪಂಕ್ತಿ. ಆ ಬನಂ ಬನಕೆ ಬಿರ್ದನಡೆವಂತೆ=ಸ್ತ್ರೀಯರ ಅಂಗವನ್ನು ವನಕ್ಕೆ ಹೋಲಿಸಿರುವುದರಿಂದ ಆ ವನವು ನಂದನವನಕ್ಕೆ ( ಬಿರ್ದ ) ಔತಣಕ್ಕೆ ನಡೆವಂತೆ ಇತ್ತು.

೨೫. ಕೇಳ್ವಮಾಳ್ಕೆಯೊಳು=ಕೇಳುವ ರೀತಿಯಲ್ಲಿ=ಕೇಳುವ ಹಾಗೆ.

೨೬ ಮುಗಿವನ್ನೆವರ=ಮುಗಿವ ವರೆಗೂ.

೨೭. ಪಜ್ಜಳಿಸೆ=ಪ್ರಜ್ವಲಿಸಲು. ಪಡುಗೆಂಪು=ಪಶ್ಚಿಮದಿಕ್ಕಿನ ಕೆಂಪು. ಪಕ್ಕೆ=ಗೂಡು. ಜಜ್ಜರಿಸೆ=ಹೆದರಲು ( ಅಗಲಲು ). ಜಕ್ಕವಕ್ಕಿಯ ಜೋಡು=ಚಕ್ರವಾಕಮಿಥುನ. ಒಜ್ಜರಿಸೆ=ಒದಗಲು. ಸಂಜೆವರೆ ( ಸಂಜೆ+ಪರೆ )=ಸಂಜೆಗಾಲದ ವಾದ್ಯಗಳು. ಕಜ್ಜಳಂ=ಕಾಡಿಗೆ. ಪಗಲ ಪಜ್ಜೆ ಪರಿಪಡೆ=ಹಗಲಿನ ಹೆಜ್ಜೆ ಹೋಗಲು. ಪಗಲೊಡೆಯಂ=ದಿನೇಶ=ಸೂರ್ಯ.

೨೮. ಮೊಗೆದ=ತುಂಬಿದ. ಅನನ್ಯಜ=ಮನ್ಮಥ.

೨೯. ಲಗ್ಗೆಯನಿಡುವ=ಲಕ್ಷ್ಯಮಾಡಿ ಹೊಡೆಯುವ. ಓಪರಂ=ವಲ್ಲಭರನ್ನು. ಸೂಡಕಾದುವೆನು=ಯುದ್ಧಮಾಡುವೆನು. ಪಲ್ಲಟಿಸುವ=ವ್ಯತಿರೇಕವಾಗಿ ತಿರುಗುವ, ಇಲ್ಲಿ ಪ್ರತಿಭಟಿಸುವ. ಅರಲಸರನ=ಪುಷ್ಪಾಸ್ತ್ರನ, ಮನ್ಮಥನ.

೪೦. ತಾರಗೆ=ನಕ್ಷತ್ರ. ನಸುಬಲವಾದುದು=ಸ್ವಲ್ಪ ಬಲವಾಯ್ತು. ನಲವು=ಸಂತೋಷ.

೪೧. ತುಂಬುವೆರೆ=ಪೂರ್ಣಚಂದ್ರ. ತಿಳಿವೆಳಗು=ನಿರ್ಮಲವಾದ ಕಾಂತಿ. ಪೊರವೊಳಲ=ಊರ ಹೊರಗಿನ ಪೊಳಲ್=ಪಟ್ಟಣ.

೪೨. ಓಜೆ=ಕ್ರಮ.

೪೩. ಸಜ್ಜನಿಕೆಯಂ ಮೆರೆದೊಡೆ=ಸೌಜನ್ಯವನ್ನು ತೋರಿಸಿಕೊಂಡರೆ. ಮೆರೆ=ವಿಡಂಬನೇ. ಈ ಕ್ರಿಯಾಪದವನ್ನು ಇಲ್ಲಿ ಸಕರ್ಮಕವಾಗಿ ಪ್ರಯೋಗಿಸಿರುವುದು ಪೂರ್ವಕವಿಗಳ ಸಂಪ್ರದಾಯ.

೪೪. ಹರಿಬ=ಹಂಬಲು.

೪೫. ರಾಣುವೆ=ಅರಸುತನ. ಇಚ್ಛೆಗತನದಿ=ಕಾಮುಕದಿಂದ. ಬಣ್ಣವಣ್ಣಿಗೆ=ಕೊಂಡಾಟ. ಒಚ್ಚಪಂ=ಸೊಗಸಾಗಿ, ಪಡಿಪುಚ್ಚ=ಸಂಶಯ, ಸಂದೇಹ.

೪೬. ಇರುಪೆಗಳು–ಇರುಂಪೆ=ಇರುಪೆ=ಇರುವೆ.

೪೭. ಆರ್ಗಮಳವಲ್ಲ=ಆರಿಗೂ ಸಾಧ್ಯವಲ್ಲ. ಪುಲ್ಮಾನಿಸರ್=ಅಲ್ಪ ಮನುಷ್ಯರು.

೪೮. ಕಿರುಗಿಚ್ಚು=ಅಲ್ಪವಾದ ಬೆಂಕಿ. ಹರವರಿಯ=ವಿಸ್ತಾರವಾದ? ಬಿಂಜಡಡವಿ—ಬಿಂಜವೆಂದರೆ ಅಡವಿ, ಇಲ್ಲಿ ಬಿಂಜವೆಂದರೆ ವಿಂಧ್ಯವೆಂದು ಹೇಳಬಹುದು. ದಾಮದೂಮಮಂ ಮಾಡುವುದು=ಧಾಳಾಧೂಳಿ ಮಾಡುವುದು.

೪೯. ಒಂದಿನಿಸು=ಒಂದಿಷ್ಟು, ಸ್ವಲ್ಪ. ಹೊಮ್ಮಿಗಂ=ಹೊಂಬಣ್ಣದ ಜಿಂಕೆ.

೫೦. ಐಸಿರಿ=ಐಶ್ವರ್ಯ. ದೇಸಿಗ=ಗತಿಕೆಟ್ಟವನು, ಪರದೇಶಿ.

---

## ಎರಡನೆಯ ಸಂಧಿ.

೧. ಸೆಂಡಾಡಿ=ಚೆಂಡಿನಂತೆ ಹಾರಿಸಿ. ಮರೆವೊಕ್ಕ=ಶರಣಾಗತರಾದ. ಜೀಯೆನಿಸಿ ಧರಣೀತಳಮನೆಲ್ಲಮಂ ಭೂಮಂಡಲವೆಲ್ಲವು ತನ್ನನ್ನು ಜೀಯ ಎನ್ನುವಂತೆ ಮಾಡಿ ಅಂದರೆ ತನಗೆ ವಶಮಾಡಿಕೊಂಡು.

೩. ರಾಯರಾವುತರು=ಅಶ್ವಾರೂಢರು, ಕುದುರೆಯ ಸವಾರರು. ಜೋದರು=ಯೋಧರು. ಕಾಲಪಾಯಕರು=ವೇಳೆಯನ್ನು ಹೇಳುವವರು. ಪಡಿಯರರು=ಪ್ರತೀಹಾರರು. ರಾಯಸದವರು=ರಾಜರುಗಳ ಪತ್ರವ್ಯವಹಾರವನ್ನು ನಡೆಸುವವರು. ಗಡಿನಾಯಕರು=ದೇಶದ ಸೀಮೆಗಳನ್ನು ಕಾಯುವವರು.

೪. ಸಂದಣಿ=ಗುಂಪು. ತಿಂಥಿಣಿ=ಸಮೂಹ. ಮಾಣಿಕದ ಹಿಂಡುವೆಳಗು=ಮಾಣಿಕ್ಯ ಸಮೂಹದ ಕಾಂತಿ. ಕಂಡರಣೆ–ಶಿಲೆಯಲ್ಲಿ ಕೆತ್ತುವ ಕೆಲಸಕ್ಕೆ ಕಂಡರಣೆಯೆಂದು ಹೆಸರು. ಕ್ರಿ. ಕಂಡರಿಸು.

೫. ನೀರೆಯರ್=ಕಾಮಿನಿಯರು. ಎಲರ್ಗೆ=ಗಾಳಿಗೆ.

೬. ಉಬ್ಬಸ=ಸಂಕಟ. ಅಸವಸ=ಅವಸರ. ಗಡಿವಾಡಗಳು=ಗಡಿಯ ಹಳ್ಳಿಗಳನ್ನು. ಮಾಮಸಕ=ಹೆಚ್ಚಾದ ರೋಷ. ಇರಿ=ತಿವಿ. ( ಹಾಳುಮಾಡು ).

೭. ಅಡುವೊಲ=ಅಡುಂಬೊಲಂ=ಆಶ್ರಯವಾದ ಸ್ಥಾನ; ನೆಲೆ. ಉಲುಹು=ಗೌಜು, ಗದ್ದಲ. ಆಳ್ವೆಸನನು=ಸೇವಕನಿಗೆ ಆಜ್ಞಾಪಿಸುವ ಆಜ್ಞೆಯನ್ನು. ತುಡುಗಣಿತನ=ತುಂಟತನ.

೮. ಒದರೆ=ಹೇಳಲು. ಕೆಕ್ಕಳಂಕೆದರಿ=ಬಹಳವಾಗಿ ರೇಗಿ. ಗದ್ದುಗೆವೊಯ್ದು=ಸಿಂಹಾಸನವನ್ನು ಬಡಿದು. ಅನಿತಿನಿತೆಂಬ ಗಣನೆಗೆಯ್ದದ=ಅಷ್ಟು ಇಷ್ಟು ಎಂಬ ಲೆಕ್ಕಕ್ಕೆ ಬಾರದ. ತೆರಳ್ದಂ=ಹೊರಟನು.

೯. ಅಷ್ಟಾದಶಪ್ರಜೆ=ಹದಿನೆಂಟು ಬಗೆ ವೃತ್ತಿಯ ಪ್ರಜೆಗಳು. ಪೊತ್ತ=ಸಮೂಹ. ದುತ್ತಂಡಿಕೆ=ದುಷ್ಟತನ. ಇದಿರಾದ=ವಿರೋಧಿಸಿದ. ಮನ್ನೆಯರಂ=ಶೂರರನ್ನು ತೊತ್ತಳಂ ದುಳಿದು=ಧಾಮಧೂಮಮಾಡಿ. ಚಾತುರ್ದಂತಸೇನೆ=ಚತುರಂಗಸೇನೆ.

೧೦. ದಾಳಿಯಿಟ್ಟು=ಮುತ್ತಿಗೆ ಹಾಕಿ. ಮಾರ್ಮಲೆತು=ಪ್ರತಿಭಟಿಸಿ ದೂಳಿಪಟ್ಟ=ಧೂಳೀಪಟ. ಠಾಣೆಯಂ=ಗಡಿಗಾಪು, ಗಡಿಯನ್ನು ಕಾಯಲ್ಕೆ ಸೇನೆ.

೧೧. ಅಷ್ಟಶೋಭೆ=ಗುಡಿ, ತೋರಣ, ರಂಗವಲ್ಲಿ, ಅರವಟ್ಟಿಗೆ, ಚಪ್ಪರ, ಮಂಗಳವಾದ್ಯ, ಮುಂತಾದುವು.

೧೨. ಬೆಸದಿಂದ=ಆಜ್ಞೆಯಿಂದ. ಇರುಳೊಳ್=ರಾತ್ರಿಯಲ್ಲಿ.

೧೩. ಜಾಯಾಜನದ ಜಂಗುಳಿ=ಸ್ತ್ರೀಜನದ ಸಮೂಹ. ಜವ್ವನಿಗನಂ=ಯುವಕನನ್ನು, ಹರೆಯದವನನ್ನು. ಕೈವರ್ತಿಸಿ=ಒಪ್ಪಿಸಿ; ಕೈವಶಮಾಡಿ. ಆ ಯಿರವಿನಂತೆ=ಆ ಸ್ಥಿತಿಯಂತೆ. ಓಯುರಂಗೆಟ್ಟು=ಸೊಗಸುಗೆಟ್ಟು.

೧೪. ಕಾಷ್ಠಾಂಗಾರ.

**ಕಾಷ್ಠಾಂಗಾರನ ಕಥೆ.**

ಜಂಬೂದ್ವೀಪದ ಭರತಕ್ಷೇತ್ರದ ಆರ್ಯಖಂಡದ ರಾಜಪುರವನಾಳುವ ಸತ್ಯಂಧರ ಮಹಾರಾಜನು ಅವನ ಪಟ್ಟಮಹಾದೇವಿ ಜಯಾವತಿ ಮಂತ್ರಿ ಸುಬುದ್ಧಿಯಿವರೊಡನೆ ಪ್ರಜಾಪಾಲನೆ ಮಾಡುತ್ತಿರುವಂದು ಆ ಪುರದಲ್ಲಿ ಕಾಷ್ಠಾಂಗಾರನೆಂಬ ಶೂದ್ರನು ನಿತ್ಯವೂ ಕಾಷ್ಠವನ್ನು ( ಕಟ್ಟಿಗೆ ) ತಂದು ಊರಲ್ಲಿ ಮಾರಿ ಜೀವಿಸುತ್ತಿರಲೊಂದಾನೊಂದು ದಿಸ ಕಟ್ಟಿಗೆಯನ್ನು ಹೊತ್ತು ಗ್ರಾಸವಿಲ್ಲದೆ ಬಳಲುತ್ತ ಬಿಸಿಲಿಗೆ ಸೈರಿಸಲಾರದೆ ವಿಲಾಸಿನಿಯೆಂಬ ಸೂಳೆಯ ಮನೆಯ ಗೋಡೆಯನ್ನು ಹಿಡಿದು ನೆಳಲಿನಲ್ಲಿ ನಿಂತಿರಲು, ಮೇಗಣಾಪ್ಪರಿಗೆಯಲ್ಲಿ ಸೂಳೆ ವಿಟನೊಡನೆ ಸರಸವಾಡುತ್ತಿರಲಾ ವಿಟನು ಕಾಷ್ಠಾಂಗಾರನನ್ನು ಕಂಡು ನಿನಗಾಗಿ ಬಂದಿರುವನೆಂದು ವಿಳಾಸಿನಿಗೆ ಹೇಳಿದನು. ಅದಕ್ಕೆ ಅವಳು ಕೋಪಿಸಿ

ಅವನ ವಿಕಾರವನ್ನು ಕಂಡು ಇಂಥವನನ್ನು ಕೂಡುವದರಿಂದ ಯಮನನ್ನು ಕೂಡುವುದೆ ಮೇಲೆಂದು ನಿಂದಿಸಿ ಅವನ ಮೇಲೆ ಉಗುಳಲು ಕಾಷ್ಠಾಂಗಾರನು ಸಿಟ್ಟುಗೊಂಡು ಈ ಸೂಳೆಗೆ ಒತ್ತೆಯೆಷ್ಟೆಂದು ವಿಚಾರಿಸಿಕೊಂಡು ಅಗ್ರಹದಿಂದ ರೊಕ್ಕವನ್ನು ಕೂಡಿಟ್ಟು ಕೊಂಡು ಮಹಾರಣ್ಯದಲ್ಲಿ ಒಬ್ಬ ತಪಸ್ವಿಗಳನ್ನು ಕಂಡು ನಮಿಸಿ ವರವನ್ನು ಬೇಡಲು ಅವರು ಪಂಚಾಣುವ್ರತಗಳನ್ನು ಹೇಳಲು ಅಂಗೀಕರಿಸದೆ ಪೌರ್ಣಮಿಯಲ್ಲಿ ಸ್ತ್ರೀಸೇವಾನಿ ವೃತ್ತಿಯನ್ನು ಅಂಗೀಕರಿಸಿ ಕೆಲವು ದಿವಸಕ್ಕೆ ನೂರುಹಣವನ್ನು ಪಡೆದು ಚೆನ್ನಾಗಿ ಅಲಂಕಾರ ಮಾಡಿಕೊಂಡು ವೇಶ್ಯೆಯ ಮನೆಗೆ ಬಂದು, ಉತ್ತಮ ವರ್ಗದ ಘಂಟೆಯನ್ನು ಬಾಜಿಸಲು ಅವಳು ಪರಿವಾರದೊಡನೆ ಬಂದು ಒಳಗೆ ಕರೆದುಕೊಂಡು ಹೋಗಿ ಸತ್ಕರಿಸಿ ದಳು. ಈ ಉತ್ಸವಕ್ಕೆ ಕಾರಣವೇನೆಂದು ಕೇಳಲು ಅವಳು ಇಂದು ಪೌರ್ಣಮಿಯೆಂದು ಹೇಳಿದಳು. ಅದನ್ನು ಕೇಳಿ ತುಸ ಹೊತ್ತಿದ್ದು ವಂಚಿಸಿ ಹೋಗಿಬಿಟ್ಟನು. ವಿಲಾಸಿನಿ ಅವನಿಂದ ಪಡೆದ ಹಣದ ಸಾಲವು ಹರಿಯದೆ ಹೋದುದರಿಂದ ಅರಸನಿಗೆ ತಿಳಿಸಿದಳು. ಅರಸನು ಊರ ಬಾಗಿಲುಗಳೆಲ್ಲವನ್ನು ಮುಚ್ಚಿಸಿ ಒಂದನ್ನು ಮಾತ್ರ ತೆರೆದಿಟ್ಟು ಅದರ ಬಳಿಯಲ್ಲಿ ಅವಳನ್ನು ನಿಲ್ಲಿಸಿ ನಿನ್ನನ್ನು ವಂಚಿಸಿ ಹೋದವನು ಬಂದ ಕೂಡಲೆ ನನ್ನಲ್ಲಿಗೆ ಹಿಡಿತಾ ಎಂದು ಹೇಳಿದನು. ಊರಿನವರೆಲ್ಲರನ್ನೂ ಹೊರಡಿಸಲು ಕಾಷ್ಠಾಂಗರನೂ ಬಂದನು. ಆಗ ಅವನನ್ನು ಹಿಡಿದುಕೊಂಡು ಅರಸನಲ್ಲಿ ಕರೆತರಲು, ಅರಸನಿಗೆ ತನ್ನ ಪೂರ್ವವೃತ್ತಾಂತವೆಲ್ಲವನ್ನೂ ಹೇಳಿ, ಸೂಳೆಯರ ಮೋಸವನ್ನು ದೂಷಿಸಿ ನುಡಿಯಲು ಅರಸನು ಮೆಚ್ಚಿ ಅವನಿಗೆ ಮಂತ್ರಿಪದವಿಯನ್ನು ಕೊಟ್ಟನು. ಕೆಲವು ಕಾಲವಾದ ಬಳಿಕ ಹಾವಿಗೆ ಹಾಲೆರೆದಂತಾಗಿ ರಾಜಸೇವಕರನೊಳಗುಮಾಡಿಕೊಂಡು ಅರಸನನ್ನು ಕೊಂದು ರಾಜ್ಯವನ್ನು ಸ್ವವಶಮಾಡಿಕೊಳ್ಳಬೇಕೆಂಬ ದುರ್ಬುದ್ಧಿಯಿಂದ ಚತುರಂಗ ಸೇನೆಯನ್ನು ಕೂಡಿಸಿ ಸನ್ನದ್ಧನಾಗಿರುವುದನ್ನು ಸತ್ಯಂಧರರಾಯನರಿತು ಗರ್ಭಿಣಿಯಾದ ತನ್ನ ಅರಸಿ ಜಯಾವತಿಯನ್ನು ಕೇಕಿಯಂತ್ರದಲ್ಲಿರಿಸಿ ಕಳುಹಿ, ತಾನೊಬ್ಬನೇ ನಿಂತು ಘೋರಯುದ್ಧ ವನ್ನು ಮಾಡಿ ಕಡೆಗೆ ನಿಶ್ಚಲ ಹೃದಯನಾಗಿ ಸರ್ವಸಂಗಪರಿತ್ಯಾಗವನ್ನು ಮಾಡಿ ಶತ್ರು ಗಳಿಂದ ಸತ್ತು ಸ್ವರ್ಗಸ್ಥನಾದನು. ಇತ್ತ ಕೇಕಿಯಂತ್ರವು ಜಯಾವತಿಯನ್ನು ನಟ್ಟಡವಿ ಯಲ್ಲಿ ಇಳಿಸಲು ನವಮಾಸವು ತುಂಬಿರಲು ಪುತ್ರೋತ್ಪತ್ತಿಯಾಗಿ ದುಃಖಿಸುತ್ತಿರಲು ಅಲ್ಲಿಗೆ ರಾಜಶ್ರೇಷ್ಠಿಯಾದ ಗಂಧೋತ್ಕಟನು ಬರಲು ಅಳುತ್ತಿದ್ದ ಕೂಸನ್ನು ಬಿಟ್ಟು ಜಯಾವತಿ ಮರೆಯಾದಳು. ಆ ರಾಯನು ಅತ್ಯಾದರದಿಂದ ಮನೆಗೆತ್ತಿಕೊಂಡು ತನ್ನ ಅರಸಿಗೆ ಕೊಟ್ಟು ಆಕೆಯೇ ಹೆತ್ತಳೆಂದು ಸಾರಿಸಿ, ಸಾಕಿ ಅರಣ್ಯದಲ್ಲಿ ಜೀವವನ್ನು ಧರಿಸಿ ದ್ದುದರಿಂದ ಜೀವಂಧರನೆಂಬ ಹೆಸರನಿಟ್ಟು ಸಲಹಿದನು. ಈ ಹುಡುಗನು ಸಮವಯಸ್ಕ ರೊಡನಿದ್ದು ಸಕಲವಿದ್ಯೆಗಳನ್ನು ಕಲಿತಿರಲು ಒಂದಾನೊಂದು ದಿನ ಒಬ್ಬ ರಾಚಾರ್ಯರು ಭಸ್ಮಕವ್ಯಾಧಿಯಿಂದ ಭಿಕ್ಷೆಗೆ ಬರಲು ಜೀವಂಧರನು ಅವರಿಗೆ ಸಾಕಾಗುವಷ್ಟು ಅನ್ನವನ್ನಿ ಕ್ಕಿದನು. ಉಂಡ ಕೂಡಲೆ ಅವರಾ ರೋಗವು ಪರಿಹಾರವಾಗಲು ಕುಮಾರನಿಗೆ ಉಪಕಾ ರವನ್ನು ಮಾಡಬೇಕೆಂದೆಣಿಸಿ ಅಲ್ಲಿಯೆ ನಿಂತು ಸಕಲ ಗ್ರಂಥಗಳನ್ನೂ ಕಲಿಸಿ ಶಸ್ತ್ರ ಶಾಸ್ತ್ರ ವಾಹನಾರೋಹಣಾದಿಗಳನ್ನು ಕಲಿಸಲು ಅವನು ಅವಾರ್ಯವೀರ್ಯ ಪರಾಕ್ರಮಯು

ತನಾದನು. ಹೀಗಿರಲು ಒಮ್ಮೆ ಪರರಾಯರು ಬಂದಾ ಪುರಕ್ಕೆ ಮುತ್ತಿಗೆ ಹಾಕಿ ಗೋವುಗಳನ್ನು ಹಿಡಿದುಕೊಂಡು ಹೋಗುತ್ತಿರಲು ಕಾಷ್ಠಾಂಗಾರನು ತಿರುಗಿಸಲಾರದೆ ಹೋಗಲು ಜೀವಂಧರನು ಕೇಳಿ ಪುರಜನಸಹಿತವಾಗಿ ಹೋಗಿ ಅವರನ್ನು ಅಂಜಿಸಿ ಗೋವುಗಳನ್ನು ತಿರುಗಿಸಿಕೊಂಡು ಬಂದನು. ಮತ್ತೊಂದು ದಿನ ಮದಗಜವು ಸೊಕ್ಕೇರಿ ಧಾಳಾಧೂಳಿ ಮಾಡುತ್ತಿರಲದರೊಡನೆ ಹೋರಾಡಿ ಕಂಭಕ್ಕೆ ತಂದು ಕಟ್ಟಿದನು. ಇವೇ ಮೊದಲಾದ ಶೌರ್ಯದ ಸುದ್ದಿಯನ್ನು ಕೇಳಿದ ಕಾಷ್ಠಾಂಗಾರನು ಜೀವಂಧರನನ್ನು ಕೊಲ್ಲಲಿಕ್ಕೆ ಪಡೆಯೊಡನೆ ಬಂದಂದು ನಡೆದ ಕಾಳಗದಲ್ಲಿ ಕಾಷ್ಠಾಂಗಾರನನ್ನು ಕೊಂದು, ಜೀವಂಧರನು ಜಯವನ್ನು ಪಡೆದು ರಾಜ್ಯದಲ್ಲಿ ನಿಂತು ಸದ್ಗುರೂಪದೇಶದಿಂದ ಮಹಾಪುರುಷ ಸ್ವಭಾವಗುಣಸಾಗಿ ಪ್ರಜಾಪಾಲನೆ ಮಾಡುತ್ತಿರಲು ವೀರವರ್ಧಮಾನ ಸ್ವಾಮಿಗಳ ಸಮವಸರಣವು ಬರಲು, ಸ್ವಾಮಿಗಳ ಸಮಕ್ಷದಲ್ಲಿ ದೀಕ್ಷೆಯನ್ನು ಕೈಕೊಂಡು ಮೋಕ್ಷಕ್ಕೆ ಹೋದನು.

೧೬. ಹುರಿಗೂಡಿದೊಡೆ=ಬಲವಾದರೆ. ಅನಿತರಿಂ=ಅಷ್ಟರಿಂದ, ಇಲ್ಲಿ ಅದುದರಿಂದ. ದಿನಜಾಪ್ಯಮಂ ಮಾಡದೆ=ದಿನವನ್ನು ವ್ಯರ್ಥಮಾಡದೆ; ಆಲಸ್ಯಮಾಡದೆ.

೧೭. ಚೆದುರತನದಿಂ=ಚಮತ್ಕಾರದಿಂದ. ರಾಣ್ಮೆ=ಪ್ರಭುತ್ವ. ಪದೆದು=ಇಚ್ಛೆಗೊಂಡು. ಸಮೆದು=ಮಾಡಿ. ಒದವಿದ=ಕೂಡಿದ್ದ. ಕಳ್ದು=ಕದ್ದು.

೧೮. ಕೊಂಡೊಯ್ದರ್=ತೆಗೆದುಕೊಂಡು ಹೋದರು.

೧೯. ಒಗೆದ=ಉಂಟಾದ, ಸಂಭವಿಸಿದ. ಮುನಿಸು=ಕೋಪ. ಹಿತವರಂ=ಹಿತರಾದವರನ್ನು; ಹೀಗೆಯೇ ಪಗೆವರ್ ಎಂದೂ ಪ್ರಯೋಗವುಂಟು.

೨೦. ನಲ್ಮೆಯಿಂ=ಪ್ರೀತಿಯಿಂ, ಒಳ್ಳೆಯತನದಿಂದ. ಪರಿಹರಿ= ಪಡಕಣ=ಬೊಕ್ಕಸ. ಸಡ್ಡೆಮಾಡದೆ=ಲಕ್ಷ್ಯಮಾಡದೆ (ಸಡ್ಡೆ=ಸಂ. ಶ್ರದ್ಧೆ).

೨೧. ಪಾಪದ ಫಲವಿದೈಸೆ=ಪಾಪದ ಫಲವಿದಲ್ಲವೇ! ಬಟ್ಟೆಯೊಳು=ಹಾದಿಯಲ್ಲಿ.

೨೨. ಹಜ್ಜೆ ಹದನಮಂ=ಕಾಲಡಿ ಮೊದಲಾದ ಸುಳಿವುಗಳನ್ನು. ನೋಳ್ಪಾಗಳ್=ನೋಡುವಂದು.

೨೩. ಹಸನಾಯ್ತು=ಚೆನ್ನಾಯ್ತು. ಹಸೆಯ ಹೊತ್ತರೊಳಗೆ=ಸೂರ್ಯೋದಯಕ್ಕೆ. ಗಜಬಜೆ=ಗಪುಜು, ಗದ್ದಲ. ಉಸಿರ್ದನು=ಹೇಳಿದನು.

೨೪. ತರಹರದಿಂ=ತ್ವರಿತದಿಂದ. ತರದೊಡೆ—ಇಲ್ಲಿ ತಾರದೊಡೆ ಎಂದಿದ್ದರೆ ವ್ಯಾಕರಣಕ್ಕೆ ಸರಿಯಾಗುತ್ತಿತ್ತು. ಈಗ ರೂಢಿಯಲ್ಲಿ ತರದೆ, ಬರದೆ ಎಂದು ನಿಷೇಧಾರ್ಥದಲ್ಲಿ ಹೇಳುವುದು ತಪ್ಪೆಂದು ಹೇಳಬೇಕಾಗಿಲ್ಲ. ತಾರದೆ, ಬಾರದೆ ಎಂದರೆ ಶುದ್ಧ. ಮಾಳ್ಪೆವು=ಮಾಡುವೆವು.

೨೫. ಬೀಳ್ಕೊಡಲ್=ಕಳುಹಿಕೊಡಲು. ತಳ್ಳಂಕ=ತಳಮಳ, ಕಳವಳ; ಭಯ. ಪಗಲ್ ಅಳಿದುದು=ಸಂಜೆಯಾಯ್ತು.

೨೬. ತಪ್ಪುದಂ=ತರುವುದನ್ನು. ಆರಯ್ದು=ಆಲೋಚಿಸಿ.

೨೮. ಒತ್ತಿನೊಳ್=ಸಮೀಪದಲ್ಲಿ. ಸತ್ತಿಗೆ=ಕೊಡೆ (ಸಂ. ಛತ್ರಿಕಾ). ಹತ್ತಲಾರ್ಗಳವಲ್ಲದಿರಲು=ಹತ್ತಲು ಆರಿಗೂ ಸಾಧ್ಯವಾಗದೆ ಇರಲು. ಇಲ್ಲಿ ಆರ್ಗೆ + ಅಳವು+ ಅಲ್ಲದೆ + ಇರಲು. ಎಂಬಲ್ಲಿ ಆರ್ಗಂ ಎಂದು ಸಮುಚ್ಚಯವಿರುವುದೇ ಪದ್ಧತಿ. ಇದನ್ನು ಕೆಲವರು ಬಿಟ್ಟು ಬಿಡುವರು. ಮುತ್ತ=ಮುದಿಯಾದ ಧೀವರಂ= ಬೇಡನು.

೨೯. ಅರಸಿ=ಹುಡುಕಿ (ತಂದು). ಓವುತಿರಲು=ಸಲಹುತ್ತಿರಲು. ಕುಡಿ ನಡೆವುದಂ= ಬಳ್ಳಿ ಹಬ್ಬುವುದನ್ನು.
ಎಳಗುಡಿಯು=ಎಳೆದಾದ ಹಂಬುಗಳನ್ನು.

೩೦. ಅಡರಿ=ಹತ್ತಿ. ಗುಡ್ಡೆಣಿಕೆ=ತಪ್ಪೆಣಿಕೆ. ಬಯಲಾಸೆ=ವ್ಯರ್ಥವಾದ ಆಶೆ. ಗಹಗಹಿಸು—ನಗುವಲ್ಲಿ ಅನುಕರಣ. ಗಹಗಹ ಎಂದು ನಕ್ಕು. ಕಡುನೊಂದು=ಅಧಿಕವಾಗಿ ವ್ಯಥೆಪಟ್ಟು.

೩೧. ಕುದೃಷ್ಟರ್ಗೆ=ದುರ್ಬುದ್ಧಿಯುಳ್ಳವರಿಗೆ. ಊಸೆಯುಂ=ಅಪಮಾನ. ಹಬ್ಬಿತು=ಹರಡಿಕೊಂಡಿತು.

೩೨. ನಲಿ=ಸಂತೋಷಿಸು. ಮೇಬೊಲಕೆ=ಮೇವ ಹೊಲಕ್ಕೆ. ಹದವುಮಿಗೆ=ಹದವನ್ನು ನೆಟ್ಟಗೆ ಕಂಡು. ಮೇಹಂ=ಮೇವನ್ನು. ಒಳಗಾದುವು=ಸಿಕ್ಕಿ ಬಿದ್ದುವು.

೩೩. ಅನಿತರೊಳಗೆ=ಅಷ್ಟರೊಳಗೆ (ಆ ವೇಳೆಗೆ). ಶಂಕಾಹೃದಯು=ಭಯಗೊಂಡ ಮನಸ್ಸುಳ್ಳ. ಮಲಮಲನೆ ಮರುಗಿ=ಮಲಮಲನೆ ವ್ಯಥೆಪಟ್ಟು. ಮನದೆಕೊಳ್ಳದೆ= ಮನಸ್ಸಿನಲ್ಲಿ ಕೊಳ್ಳದೆ ಎಂದರೆ ಎಣಿಸದೆ, ಲಕ್ಷ್ಯಮಾಡದೆ.

೩೪. ಅತಿಗಳೆಯುವಾದ ಕಾರ್ಯಂ=ಮೀರಿಹೋದ ಕೆಲಸವು. ಅತಿಗಳೆ=ಅತಿಕ್ರಮಿಸು. ಮುಂಚಿಹೋಗುವುದು.

೩೫. ಕರ್ವು=ಕಬ್ಬು. ಏಸುಬಾಧೆಯುಂ=ಎಷ್ಟು ಬಾಧೆಯನ್ನು (ಮಾಡಿದರೂ). ಮೆರೆವರೈಸೆ=ಪ್ರಕಟಿಸುವರಲ್ಲವೇ? ಪಿಳ್ಳೆಗಳ=ಪಿಳ್ಳೆಗಳ=ಮಕ್ಕಳ.

೩೬. ಹಸುಳೆಗಳಿರಾ-ಬಾಲಕರಿರಾ; ಚಿಣ್ಣಗಳಿರಾ. ಮುಸಕದಿಂ=ರೋಷದಿಂ. ಗೋಣ್= ಕುತ್ತಿಗೆ, ಕತ್ತು. ಈಡಾಡುವಂ=ಚೆಲ್ಲುವನು. ಬರಿದೆ=ಸುಮ್ಮನೆ. ಮಾಣನು=ಬಿಡನು. ಅಸವಸದಿಂದ=ಆತುರದಿಂದ.

೩೭. ಹಿಪ್ಪಲಿಕೆ ಹೊತ್ತು ಹರೆಯದ ಮುನ್ನಂ=ಬೆಳಗಾಗುವುದಕ್ಕೆ ಮುಂಚೆ.

೩೮. ನಚ್ಚಿರ್ದ=ನಂಬಿದ್ದ. ಅಂಚೆ=ಹಂಸ. ಈಡಾಡು=ಪ್ರಮಾದತ್ತರ್ಜನೇ-ಬಿಸಾಡು. ದಾಯ=ಅನುಕೂಲವಾದ ಸಮಯ.

೩೯. ನಷ್ಟಕಾರ್ಯಾಭಿವಚನಮುಂ=ತಪ್ಪಿಹೋದ ಕೆಲಸದ ಮಾತನ್ನು.

೪೦. ಮುರುಂಟು=ಇಲ್ಲಿ ಚಿವುಟು (ಸಾಮಾನ್ಯಾರ್ಥ-ಸುಡು). ಕಕ್ಕಸ=ಕರ್ಕಶ, ಕಠಿಣ. ಕಟಕಿ=ತಿರಸ್ಕಾರದ ಮಾತು.

೪೧. ಓಲಗ=ಸಭೆ. ಅರಗುಲಿ=ಧರ್ಮವನ್ನು ಕೆಡಿಸುವಾತನು. ಬರಸಿಡಿಲ=ಮಳೆ ಸುರಿಯದೆ ಹೊಡೆವ ಸಿಡಿಲು. ನೆರೆ=ಅಧಿಕವಾಗಿ. ಎಸಗಿದ=ಮಾಡಿದ. ಮರುಗುತ್ತ=ಚಿಂತಿಸುತ್ತ.

೪೨. ತೆಮಳಿ=ತೆವಳಿ.

೪೩. ಅಲಸದೆ=ಬೇಸರವಿಲ್ಲದೆ ಅತಿವಿಸ್ಮಾಣದಿಂಗೆಯ್ಯೆ=ಬಹು ಚಮತ್ಕಾರದಿಂದ ಮಾಡಲು. ಡೊಗರು=ಡೊಕ್ಕೆ. ಓವದೆ=ಸಲಹದೆ.

೪೪. ನಂಜು=ವಿಷ. ತಲೆಗೊಳ್ವೊಡೆ=ತಲೆಹೊಯ್ವುದಾದರೆ. ಚಾರಿಪರು=ಅಡ್ಡಬರುವರು, ತಡೆವರು. ನೆಲದೆರೆಯ=ನೆಲದೊಡೆಯ=ಅರಸ.

೪೫. ಕಾಲತ್ರಿಕಂ=ಮೂರುರುಘೂವ. ಇನಿಸುಬೇಗದಿ=ಇಷ್ಟು ಹೊತ್ತಿಗೆ. ನಿರವಿಸಿದಂ=ಹೇಳಿದನು ( ನಿರೂಪಿಸಿದನು ).

೪೬. ಎದೆಹಾರುತೆ=ಭಯದಿಂದ ನಡುಗುತ್ತ. ಗೊಂದಣಂಗೊಂಡು=ಗುಂಪುಕೂಡಿ ಮನಸಂದು=ಮನವೊಪ್ಪಿ. ಇಂತುಟೆಂದು=ಇಷ್ಟೆಂದು, ಹೀಗೆಂದು.

೪೭. ಪರಿಸ್ಪಂದ=ಪರಿವಾರ. ಪರಿವರಿವ=ವ್ಯಾಪಿಸುವ, ಹರಡುತ್ತಿರುವ. ಬೆಳ್ಳಾರ=ಮೃಗಜಾಲಿಕೆ, ವಾಗುರೆ. ಸಂದಣಿಗಿ=ಗುಂಪುಕೂಡಿ. ಬಿಲ್ಕೋಲ್ವಿಡಿದು=ಬಿಲ್ಲು ಅಂಬುಗಳನ್ನು ಹಿಡಿದು. ಅನುವರ=ಯುದ್ಧ. ಮಾಣಿಪರಿಲ್ಲ=ಬಿಡಿಸುವವರಿಲ್ಲ.

೪೮. ಮಿಗೆ=ಹೆಚ್ಚಾಗಿ. ಓತು=ಒಂದಾಗಿ ( ಧಾತು ಓ=ಸ್ನೇಹಮಾಡು. ) ಕೂರಸಿಗಳು=ಹರತವಾದ ಕತ್ತಿಗಳು.

೪೯. ಬಲ್ಲಾಳ್ + ಇಟ್ಟಿಗೊಂಡಂತೆ. ಮೊದಲೆ ಬಲ್ಲಾಳಾದವನು ( ಬಲಿಷ್ಠ ) ಅದರ ಮೇಲೆ ಈಟಿಯನ್ನು ಕೈಗೆ ತೆಗೆದುಕೊಂಡರೆ ಮತ್ತಷ್ಟು ಭಯಂಕರವಲ್ಲವೇ! ಉಳಿವು=ಬದುಕು. ಕಟ್ಟೊಡೆಯಂ = ಮಹಾಪ್ರಭು. ಪಿರಿದುಮುಳಿದಂ=ಹೆಚ್ಚಾಗಿ ಸಿಟ್ಟುಮಾಡಿದನು. ಅಳುಗಜಗುಳಂ=ವ್ಯರ್ಥವಾದ ಹರಟೆಯನ್ನು. ಪೊಳಲ=ಪಟ್ಟಣದ. ಎಳಸಿ=ಬಯಸಿ.

೫೦. ಅಂತು=ಧರಿಸಿ. ( ಧಾತು ಅರ್=ಧಾರಣೇ ).

೫೧. ಛಪ್ಪನ್ನದೇಶ=ಐವತ್ತಾರು ದೇಶ.

೫೨. ಪಾಳೆಯಂ=ಇಲ್ಲಿ ಸೇನೆ. ಬಿಜಯಂಗೆಯ್ವುದು=ದಯಮಾಡಿಸುವುದು.

೫೩. ಹಸಗೆಯ್ಸಿ=ಚೆನ್ನಾಗಿ ಮಾಡಿಸಿ. ಬಿರುಮಳೆ ಹತ್ತಿದಂದದಿ=ದುರ್ದಿನವು ಬಂದಂತೆ ಮನಸ್ಸಿನಲ್ಲಿ ಚಿಂತಿಸಿ. ಚಾರ್ವಾಕಮಂ ನೆಮ್ಮಿದವಂ=ಚಾರ್ವಾಕಮತವನ್ನು ಅವಲಂಬಿಸಿದವನು. ನೆಮ್ಮು=ಅಲಂಬನ.

೫೪. ನೆತ್ತರಿಂ ಪೊರೆದ=ರಕ್ತದಿಂದ ಕಲಸಿದ. ಕೋಟಲೆ=ದುಃಖ. ಕೇಳಿದಕ್ಕಾವೊಡಂಬಡುವುದಿಲ್ಲೆನಲು—ಕೇಳ್ + ಇದಕ್ಕೆ + ಅವು + ಒಡಂಬಡುವುದಿಲ್ಲ + ಎನಲು ಅವು = ನಾವು.

೫೫. ಗೊಲ್ಲಸಂಗೊಂಡು=ಆಯಾಸಪಟ್ಟು.

೫೭. ನಾಣ್ನುಡಿ=ಲೋಕೋಕ್ತಿ ( ನಾಡ + ನುಡಿ ).

೫೯. ಮೊರೆದು=ಕೂಗಿ. ಹುರಿಯಾಗಿ=ಒಟ್ಟುಗೂಡಿ. ಹದಿಕೆ=ಚಂದದ ಹಣವನ್ನು; ಅನುಗೆಯ್ಸಿ=ರಚಿಯಿಸಿ. ಮಣಿದೊಡವು=ರತ್ನದ ಆಭರಣ. ಪರಿದು=ಸಾರಿಸಿ. ಪುತ್ಥಳಿ=ಬೊಂಬೆ.

೬೧. ನಾಡೆ=ಅಧಿಕವಾಗಿ.

೬೨. ತಿರಿದು=ಯಾಚಕವಾಡಿ. ಆರಡೆಕಾರ=ತುಂಟ. ಪಿಸುಣ=ಚಾಡಿಕಾರ. ಅನ್ನೆಯ ಕಾರ=ಅನ್ಯಾಯುವನ್ನು ಮಾಡುವವನು.

೬೩. ನವೆದು=ಬಡವಾಗಿ, ಕೃಶವಾಗಿ.

೬೪. ಕೊಕ್ಕರಿಸದೇ=ಅಸಹ್ಯಪಡದೆ. ಓಸರಿಸದೆ=ಒಂದು ಕಡೆಗೆ ಸರಿಯದೆ, ಉನ್ಮುಖ ವಾಗದೆ ಎಂದರೆ ಮನವಿಟ್ಟು. ಸುರಗಿ=ಕತ್ತಿ ( ಸಂ, ಛುರಿಕಾ ).

೬೫. ಮರುಕವಡೆಯದೆ=ದುಃಖಪಡದೆ. ದಬ್ಬುದಲೆ=ಕಳಂಕ. ಮಾಣವಕ=ಹುಡುಗ.

೬೬. ಹಾರುತನ=ಬ್ರಾಹ್ಮಣತ್ವ.

೬೭. ಬಿಸವಂದ=ಆಶ್ಚರ್ಯ.

೬೮. ಬೆಚ್ಚಿ=ಬೆದರಿ, ಭಯಪಟ್ಟು. ಒಸೆದು=ಪ್ರೀತಿಸಿ; ಪ್ರಸನ್ನವಾಗಿ.

೬೯. ಬೀಟೆ=ಬಿರುಕು.

೭೦. ಅಳುಕದೇ=ಅಂಜದೆ. ಕೀರಿ=ಆಗ್ರಹದಿಂದ ಕೂಗಿ. ತುಳಿಲಾಳು=ಸೇವಕ. ತುಂಬುವೊಳೆಗೆ=ಪೂರ್ಣ ಪ್ರವಾಹವುಳ್ಳ ನದಿಗೆ. ಈಸುವರು=ಈಜಾಡುವರು. ಆಳಿಮನಸು=ಕೆಟ್ಟ ಮನಸ್ಸು.

೭೧. ಎಯ್ದುವನ್ನೆವರಂ=ಬರುವಷ್ಟರಲ್ಲಿ.

೭೨. ಪರದುಗೆಯ್ವೆನೆಂದು=ವ್ಯಾಪಾರಮಾಡುವೆನೆಂದು, ಪರದು=ವರ್ತಕತನ. ಸೆರೆ=ಚೆನ್ನಾಗಿ.

೭೩. ಪಾಣ್ಬ=ವಿಟ. ಕಾಪು=ಬೆಳಸು.

೭೪. ಗೊಂದಿ=ಮೂಲೆ, ಮರೆ. ಹಚ್ಚಡ=ಬಲ್ಲಿ.

೭೫. ಜತನ=ಜೋಪಾನ. ಕಾಪು=ಕಾವಲು, ರಕ್ಷಣೆ. ಆರಡಿ=ಕೆಟ್ಟ ನಡತೆ. ತೊಂಡು=ಮನಬಂದಂತೆ ತಿರುಗಾಡುವುದು.

೭೬. ಸೊಣಗ=ಶುನಕ, ನಾಯಿ. ಸುನಿ=ನಾಯಿ. ಮುಗ್ಗಿದೊಡೆ ಬದುಕದಂದದೊಡಲುಂ=ಮುಗ್ಗರಿಸಿದರೆ ಬದುಕಲಾರದಷ್ಟು ಬಡವಾದ ಶರೀರವೂ. ಗೊಡ್ಡಾಟ=ಚೇಷ್ಟೆ.

೭೯. ಇನಿಮಾವು=ಸೀಮಾವು. ಕಳ್ಳಂ=ಹೆಂಡವನ್ನು.

೮೦. ಮುದಿಗೋಡ=ಮುದಿಕೋತಿ. ಅರೆಮಾಡುವ=ಹಾಳುಮಾಡುವ.

೮೧. ಬರ್ದುಂಕುವರು=ಬಾಳುವರು.

೮೨. ತಳುವದೆ=ತಡೆಮಾಡದೆ. ಗಳಪಿದೆ=ಹರಟಿದೆ, ಬೊಗಳಿದೆ.

೮೪. ಒದವಿದ=ಪ್ರಾಪ್ತವಾದ. ಎನ್ನಿಂದ ಚೆದುರನಾದನಲಾ=ನನಗಿಂತ ಜಾಣನಾದನಲ್ಲಾ. ಕಡುಮಚ್ಚರದಿಂ=ಹೆಚ್ಚಾದ ಹೊಟ್ಟೆಗಿಚ್ಚಿನಿಂದ (ಮಚ್ಚರ=ಸಂ· ಮತ್ಸರ).

೮೫. ತಿಟ್ಟೆ=ದಿಣ್ಣೆ. ತೊರೆ=ಹೊಳೆ.

೮೬. ಆರಯ್ದು=ಆಲೋಚಿಸಿ, ಚೆನ್ನಾಗಿ ವಿಚಾರಮಾಡಿ. ಅಂಕಿಸಿದ=ಗುರುತುಮಾಡಿದ. ಬರೆಪ=ಬರೆಹ, ಲಿಖಿತ, ಲಿಪಿ. ಮೀರಲೀಸದು=ಮೀರಲಿಕ್ಕೆ ಬಿಡದು.

೮೭. ಉಮ್ಮಳಿಕೆ=ವ್ಯಸನ. ಹಂಬಲ=ಚಿಂತೆ. ಇಂಬಾಗುವಂದದಿಂ=ಸೊಗಸಾಗುವ ಹಾಗೆ; ರಮ್ಯವಾಗುವಂತೆ. ಬೀಳೆ=ಬಿರುಕು ಮುಗಿಲೊಡ್ಡು=ಮೇಘಜಾಲ. (ಒಡ್ಡು=ಸಮೂಹ).

೮೮. ಮರುವಗಲೊಳ್=ಮರುದಿನ ಹಗಲಲ್ಲಿ. ಒಂದಿ=ಕೂಡಿ.

೮೯. ಹೊಳೆಹು=ಕಾಂತಿ, ಶೋಭೆ. ಅಡಸುವುದು=ಒದಗುವುದು.

೯೦. ಅಟಮಟ=ಮೋಸ, ಸುಳ್ಳು. ಬೆಟ್ಟತಟ್ಟೆಯ ಮಾತು=ಕಠಿಣೋಕ್ತಿ, ಬಿರುನುಡಿ.

೯೧. ಬಹತ್ತರ=ಬಹಳ? ಟಂಕೋತ್ತರವನು=ಶಪಥದ ಮಾತು.

೯೨. ಸುಗಿದು=ಸೀಳಿ. ಬಲುಹಿಂದ=ಬಲಾತ್ಕಾರದಿಂದ, ಒತ್ತಾಯದಿಂದ.

೯೩. ಪಾವುಗೆ=(ಸಂ. ಪಾದುಕಾ.) ಮೆಟ್ಟು, ಕೆರ, ಜೋಡು. ರನ್ನದ ಊರ್ಮಿಕೆ=ರತ್ನದ ಉಂಗುರ. ಪೈಸರವ ಮಾಡದೆ=ವಿರೋಧಮಾಡದೆ. ಬೆಕ್ಕಸ=ಭಯ.

೯೪. ಗಜಬಜಿಸಿ=ಗದ್ದಲಮಾಡಿ; ಬೊಬ್ಬೆಹಾಕಿ.

೯೫. ಬಲ್ಲಿದಂ ಯಮದಂಡ ಕಂಡ=ಬಲಿಷ್ಠ ಯಮದಂಡ ನೋಡಿದೆಯಾ. ಹೊಲ್ಲದುದಂ=ಕೆಡಕನ್ನು. ದುರುದುಂಬಿತನದಿಂ=ಕೆಡಕುತನದಿಂದ. ಗುಜ್ಜುಗುರುಕು=ಗುಸುಗುಟ್ಟು. ಗುಡ್ಡೇಣಿಕೆ=ವ್ಯರ್ಥಾಲೋಚನೆ.

೯೬. ಅತಿರೇಕ=ಆಗ್ರಹ. ಉಲಿಯುತಿರ್ದರು=ಘೋಷಿಸುತ್ತಿದ್ದರು; ಹೇಳುತ್ತಿದ್ದರು.

೯೭. ಮನದೆಗೊಂಡು=ಮನದಲ್ಲಿ ಗ್ರಹಿಸಿ.

೯೮. ಓಸರಿಸಿತು=ಒಂದುಕಡೆಗೆ ಸರಿಯಿತು, ಕಳೆಯಿತು. ಪಂಚಾಂಗಮಂತ್ರ:—ಸಹಾಯ, ಸಾಧನೋಪಾಯ, ದೇಶಕಾಲವಿಭಾಗ, ವಿನಿಪಾತಪ್ರತೀಕಾರ, ಸಿದ್ಧಿ. ಶಬದೊಡಿಗೆ=ಶಬದತೊಡಿಗೆ=ಹೆಣಕ್ಕೆ ಮಾಡಿದ ಅಲಂಕಾರ.

೯೯. ಉರೆ=ಹೆಚ್ಚಾಗಿ. ಬೇಸರಂ=ಆಲಸ್ಯವನ್ನು, ಬೇಜಾರನ್ನು.

೧೦೦. ಅಲವರಿಕೆ=ಬೇಸರ. ಉಲುಹು=ಸದ್ದು. ಬಿಸವಂದ=ಅತಿಶಯದ.

೧೦೧. ಸಪ್ತವ್ಯಸನ:—

**ಜೂಯಂ ಮಜ್ಜಂ ಮಂಸಂ ವೇಸಾ ಪಾರದ್ಧಿ ಚೋರ ಪರಯಾರಂ**
**ದುಗ್ಗಇ ಗಮಣಸ್ಸೇದಾಣಿ ಹೇಉ ಭೂದಾಣಿ ಪಾವಾಣಿ.**

ಜೂಜಾಡುವುದು, ಕಳ್ಳುಡಿವುದು, ಮಾಂಸತಿನ್ನುವುದು, ಸೂಳೆಯರ ಸಹವಾಸ

ಮಾಡುವುದು, ಬೇಟೆಯಾಡುವುದು, ಕಳವುಮಾಡುವುದು. ಪರಸ್ತ್ರೀ ಗಮನ ಮಾಡುವುದು—ಇವೇಳೂ ಮನುಷ್ಯನನ್ನು ದುರ್ಗತಿಗೆ ಕೆಡಹುವ ಕಾರಣಗಳು.

೧೦೭. ತಿಂಗಳ=ಚಂದ್ರನ. ನಡೆನೋಡುತಂ=ಚನ್ನಾಗಿ ನೋಡುತ್ತ.

---

## ಮೂರನೆಯ ಸಂಧಿ.

೧. ಸೊಗಸುಗಡಲ=ಶೃಂಗಾರಾರ್ಣವದ. ಅಬ್ಜಮಂಡಲಂ=ಚಂದ್ರಮಂಡಲ. ಪೊಗೆದು=ತುಂಬಿಸಿ. ಜೊನ್ನ=(ಸಂ.) ಜ್ಯೋತ್ಸ್ನಾ, ಬೆಳದಿಂಗಳು.

೨. ತೆಟ್ಟೆತೆಟ್ಟೆಯೊಳು=ಗುಂಪುಗುಂಪಾಗಿ. ಬೇಟಂ=ವಿರಹ. ಒಲುಮೆಗಲಹ=ಪ್ರಣಯ ಕಲಹ.

೩. ತಣ್ಬಿಡುವ=ತಣ್ಣಗಾಗುವ. ತಣ್ಬುಳಿಲ=ತಣ್ಣನಿರುವ, ಮಳಲದಿಣ್ಣೆ. ಬಾಯ್ದೆರೆ=ತುಟಿ. ಬಟ್ಟ=ವೃತ್ತವಾದ, ದುಂಡಗಿರುವ. ಪೆರೆ=ಚಂದ್ರನಂತಿರುವ, ಮೊಗ. ಜಾಣ್ಬಡೆದ=ಚಾತುರ್ಯವುಳ್ಳ. ನುಣ್ಬೊಗರ=ಕೋಮಲಕಾಂತಿಯ. ಪೊಸವಾಳೆಕಣ್ಬೊಣರ=ಹೊಸಬಾಳೆ ಮೀನಂತಿರುವ ಕಣ್ಣಧಾಳದ.

೪. ಅಮಳ್ವಕ್ಕಿ=ಚಕ್ರವಾಕಪಕ್ಷಿಗಳ ಜೊತೆ. ( ಅಮಳ್=ಜೊತೆ; ಯುಗಳ ). ಗರುವೆ=ಗಂಭೀರೆ.

೫. ನೀರೆ=ಕಾಂತೆ. ಕುಡಿತೆ=ಬೊಗಸೆ. ಚೆಲ್ಲಕಾರ್ತಿ=ಸರಸವತಿ. ಬಣ್ಣಿಗೆ=ಹೊಗಳಲಿಕ್ಕೆ ಯೋಗ್ಯವಾದ. ಚೆನ್ನೆ=ಚೆಲುವೆ. ಪೊಂಗುವ=ಉಕ್ಕುವ. ಬಿಂಕಗಾರ್ತಿ=ಗರುವೆ.

೬. ಗಂಡುದೊಳ್ತು=ಗಂಡು ದಾಸಿಯರಂತೆ ಊಳಿಗದಲ್ಲಿಡುವುದು. ಎಸಕಂ=ಉದ್ಯೋಗ. ಗಾಡಿಕಾರ್ತಿ=ಸೊಬಗುಳ್ಳವಳು.

೭. ಬಚ್ಚಬಯಲಂತೆ=ಬಟ್ಟಬಯಲು. ಬಕ್ಕಬಯಲು=ಶೂನ್ಯ. ಪಳಚ್ಚನೆ=ಪ್ರಕಾಶಿಸುತ್ತ. ಪಡಿಯಚ್ಚು=ಪ್ರತಿಮುದ್ರೆ=ಸಮಾನ. ಮಿಸುನಿದಾವರೆ=ಹೊಂದಾವರೆ. ಮೆಚ್ಚುವೆಣ್ಣ=ಇಚ್ಛೆಗಾರ್ತಿ. ಒಲುವೊಗರಿಗೆ=ವಲ್ಲಭರಿಗೆ, ಕಾದತಿದಿಗೆ.

೮. ತವಕ=ಆತುರ.

೯. ಹೊಲೆ=ಮಾಲಿನ್ಯ, ಸೂಳೆ. ಏರುಂಜವ್ವನಂದಳೆದ=ಏರುವ ಯೌವನವನ್ನು ಪಡೆದ=ನವಯೌವನವನ್ನು ಹೊಂದಿದ.

೧೦. ಕಾತರಿಪ=ಆತುರದಿಂದ ನೋಡುವ. ತಳ್ಕೆ=ತಬ್ಬುವಿಕೆ=ಆಲಿಂಗನ. ಉಂಡಿಗೆ=ಮೊಹರು. ಆಣತಿ=ಆಜ್ಞೆ.

೧೧. ಕಿಕ್ಕಣ್ಣಿಡುವ=ಓರೆನೋಟ ನೋಡುವ.

೧೨. ನಿಗುರಿ=ಮೇಲೆತ್ತಿ. ಕರ್ಪೂರ ಪಳಿಕುದಂಬುಲ=ಸ್ಫಟಿಕದಂತಿರುವ ಪಚ್ಚೆಕರ್ಪೂರವೆರಸಿದ ತಾಂಬೂಲ.

೧೩. ಉಪರಿಮಕೆ ಎತ್ತಿ=ಮೇಲಕ್ಕೆ ಎತ್ತಿ. ನಸುನಿದ್ರೆಗೆಯ್ದು=ಸ್ವಲ್ಪ ನಿದ್ರೆಮಾಡಿ.

೧೪. ಬಳಿವಳಿಯೊಳ್=ಹಾದಿಯಲ್ಲಿ. ಒಡಲಕರೆ=ದೇಹದ ಕಪ್ಪು. ಬಗೆಯುಸು=ಚಿತ್ತವನ್ನು ಬಂದಿವಿಡಿದಳ್=ಸೆರೆಗೆಯ್ದಳು.

೧೫. ಅಣಕಮೇ=ಲಜ್ಜೆಯೇ. ಕೆಣಕಿ=ರೇಗಿಸಿ. ಹೆಣಗುತೆ=ಹೋರಾಡುತ್ತ.

೧೬. ಅಸುವಿಡಿಯಲುಂಟೇ=ಪ್ರಾಣವನ್ನು ಹಿಡಿದಿರಲಿಕ್ಕಾದೀತೇ?

೧೭. ಸಿಡ್ಡಳ=ಕರುಣಿ? ಎಚ್ಚರುಂಟೆ=ಮೈಮರೆವಳೆಂದರ್ಥ.

೧೮. ಮಂತಣಂಗೊಂಡು=ಆಲೋಚನೆ ಮಾಡುತ್ತ. ತೇರುತೆಕ್ಕೆ=ಧಾಳಾಧಾಳಿ, ಉಪದ್ರ. ದಾಳಿ=ಮುತ್ತಿಗೆ. ಅಂತರಿಸದೆ=ತಡೆಯದೆ. ತಿಂಥಿಣಿ=ಸಮೂಹ. ಪಾಳೆಯಂಬಿಡೆ=ಸೈನ್ಯವು ಬೀಡು ಬಿಪ್ಪಿಸಲು.

೨೦. ತಳ್ಳುಬಳ್ಳಿ=ಹೊರಗೆ ನೂಂಕಿ ಬಿಡುವುದು; ಉಚ್ಚಾಟನ. ಕಾವನ=ಕಾಮನ, ಮನ್ಮಥನ. ಅಬ್ಬರಂ=ಗೌಜು. ನಿತ್ತರಿಸಬಹುದೆ=ಸುಧಾರಿಸಲಾದೀತೇ? ತಳ್ಳಂಕ=ನಡುಕ, ಭಯ. ಇಂದು ಹುಟ್ಟಿದದಿನಂ ಬಂದುದು ಎಂಬುದು ರೂಢಿಯಲ್ಲಿ ದುರ್ದಿನವು ಬಂದಿತೆಂದರ್ಥ.

೨೧. ಸಟೆಗೆ=ಹುಸಿಗೆ, ವ್ಯರ್ಥವಾಗಿ. ಅಬ್ಬರಿಪ=ಗದ್ದಲಮಾಡುವ. ಕಟಕ=ಸೇನೆಯಿರುವ ಸ್ಥಳ. ಬಿಸುಸುಯ್ಯುತಿರ್ದರು=ಬೆಚ್ಚನೆ ಉಸಿರು ಬಿಡುತ್ತಿದ್ದರು.

೨೨. ರುದ್ರನಂತೆ ವೇಷವನ್ನು ಹಾಕಿ ಕಳುಹಿದುದರಿಂದ ಅವಳನ್ನು ಕಂಡಕೂಡಲೆ ಮನ್ಮಥನು ಹೆದರಿ ತನ್ನನ್ನೇ ಸುಟ್ಟು ಬಿಡುವಳೋ ಎಂಬ ಭಯದಿಂದ ಓಡಿಹೋಗುವನೆಂದು ಒಬ್ಬನು ಭಾವಿಸಿದಂತೆ ಕವಿ ವರ್ಣಿಸಿರುವನು.

೨೩. ಸಡಗರ=ಸಂಭ್ರಮ. ಹೆರೆನೊಸಲಿನಬಲೆ=ಚಂದ್ರನಂತೆ ಮುಖವುಳ್ಳ ಹಣೆಯುಳ್ಳ ಹೆಂಗಸು. ಮಡದಿ=ಹೆಂಗಸು.

೨೪. ಹರಲ್=ಕಲ್ಲು ಇಲ್ಲಿ ರತ್ನ. ಕೀಳಿಲೊಳ್=ಕೆಳಗಿನ ಬಾಗಿಲಲ್ಲಿ. ಹರಣದೆರೆಯನ=ಪ್ರಾಣನಾಥನ. ಓಸರಂಗೇಳ್ವ=ಶಕುನವನ್ನು ಕೇಳುವ ಕುರಿಗೇಳುವ.

೨೫. ಎಳವರೆಯು=ಚಿಕ್ಕಪ್ರಾಯ. ಉರೆ=ಹೆಚ್ಚಾಗಿ.

೨೬. ತರಹರಂಗೊಂಡು=ತಡವರಿಸಿಕೊಂಡು. ಹರಣವಂ=ಪ್ರಾಣವನ್ನು. ಇನಿಸು=ಇಷ್ಟು, ಸ್ವಲ್ಪವಾದರೂ.

೨೭. ಅರಲಂಬನ=ಪುಷ್ಪಾಸ್ತ್ರನ, ಮನ್ಮಥನ ಅಟ್ಟುಳಿ=ಹಿಂಸೆ. ಹಾವಳಿ=ಬಾಧೆ, ಹಿಂಸೆ, ಧಾಂಧಲೆ. ಅಬ್ಬರ=ಆರ್ಭಟೆ. ನನೆಯುಸರಲ=ಪುಷ್ಪಬಾಣಂ, ಕಾಮ; ಉಪಟಳ=ಉಪದ್ರವ. ಇಟ್ಟೆಡೆ=ಇರುಕು, ಇಕ್ಕಟ್ಟು. ಉಬ್ಬಸ=ಸಂಕಟ.

೨೮. ಸುಪ್ಪತ್ತಿಗೆ=ಹಾಸಿಗೆ. ಒರಗು=ಮಲಗು. ಬಿರಿಮುಗುಳ=ಬಿರಿದ ಹೂವಿನ. ಬಿಜ್ಜ

ಣಿಗೆ=ಜೇಸಣಿಗೆ. ಸಿರಿಪಚ್ಚೆವುಡಿ=ಶ್ರೀಗಂಧದಪುಡಿ. ಸಿರಿಗಣ್ಬ=ಶ್ರೀಖಂಡ. ಅಣ್ಪು=ಲೇಪನ. ಕಿಚ್ಚು=ಬೆಂಕಿ.

೨೯. ಅನುಸಂಧಿ=ವೇಳೆ, ಸಂದರ್ಭ. ಅಂಗಭೂತಂ=ಅಂಗಜ, ಮನ್ಮಥ. ಹರಿದಾಳಿಯುಂ ಮಾಡಿ=ಮೂವಳಿಸಿ=ಮೂರುಸುತ್ತು ಸುತ್ತಿ. ಮುಂಗುಡಿಯೊಳ್=ಸೈನ್ಯದ ಮುಂಗಡೆಯುಲ್ಲಿ. ಲಗ್ಗೆ=ಮುತ್ತಿಗೆ ಹಾಕಲಿಕ್ಕೆ ಗುರಿ; ಕೋಳುಂಗೊಂಡು=ನಾಣಪಾಡಂಗಿಡಿಸಿ=ಲಜ್ಜೆಯ ಕ್ರಮವನ್ನು ಕೆಡಿಸಿ. ಒಳಗರಿದು=ಮರ್ಮವನ್ನು ತಿಳಿದು.

೩೦. ಅಲರ್ಗಣೆ=ಪುಷ್ಪಾಸ್ತ್ರ. ಆಯು=ಆದಾಯ; ಅಳತೆ. ಲಾಳವಟ್ಟೆ=ಲಾಳದಮಾರ್ಗ. ಎಸುವ=ಬಾಣಪ್ರಯೋಗವನ್ನು ಮಾಡುವ. ಬಟ್ಟೆ=ಹಾದಿ, ಮಾರ್ಗ. ಕಡುಹೇಡಿ=ಅತಿಭೀರು; ಅಂಜುಕುಳಿ.

೩೧. ಅಚ್ಚರಿ=ಆಶ್ಚರ್ಯ. ಆವದಿನದಿಂದಂ=ಬಹುಕಾಲದಿಂದ.

೩೨. ತಳುವಲ್=ತಡೆಯುಲು. ಬರುನೆಳಲ್=ಬರಿಯು ನೆರಲು, ಛಾಯೆಮಾತ್ರವೇ. ಅಳುಕಿ=ಹೆದರಿ. ಏ ಕಡೆಗೆ ತಳರ್ದಂ=ಆವ ದಿಕ್ಕಿಗೆ ಹೋದನು. ಒಳಮೆಯ್ಯ ಜಗಲಿ=ಒಳಗಡೆಯ ಜಗಲಿ.

೩೪. ಸರಿಮಿಗಿಲ್=ಸಮ, ಅಧಿಕ.

೩೫. ಅಷ್ಟೋಪವಾಸ:—ಎಂಟುದಿವಸಕ್ಕೊಮ್ಮೆ ಭೋಜನಮಾಡಿ ಹೀಗೆ ದೇಹವನ್ನು ಕರಗಿಸುವ ಕಾಯಕ್ಲೇಶವನ್ನು ಮಾಡುವುದರಿಂದ ಪರಮಲಾಭವುಂಟೆಂದು ಶಾಸ್ತ್ರಕಾರರು ಹೇಳುತ್ತಾರೆ.

೩೬. ನಂದೀಶ್ವರದ ನೋಂಪಿ—ನೋಂಪಿ=ವ್ರತ.
ನಂದೀಶ್ವರ ದ್ವೀಪದಲ್ಲಿ ರತಿಕರವೆಂಬ ಎಂಟು ಪರ್ವತಗಳಿವೆ. ಅಲ್ಲಿಯು ಜಿನಬಿಂಬಗಳಿಗೋಸ್ಕರ ಒಂದು ದಿನ ಬಿಟ್ಟು ಒಂದು ದಿನದಂತೆ ಎಂಟು ಉಪವಾಸಗಳನ್ನು ಮಾಡಿ, ಬಳಿಕ ದಧಿಮುಖವೆಂಬ ನಾಲ್ಕು ಪರ್ವತಗಳ ಮೇಗಣ ಜಿನಬಿಂಗಳಿಗೆ ನಾಲ್ಕು ಉಪವಾಸಗಳಾಗಬೇಕು; ಆ ಬಳಿಕ ಅಂಜನ ಪರ್ವತದ ಮೇಲಣ ಜಿನಬಿಂಬಕ್ಕೆ ಒಂದು ಉಪವಾಸ—ಹೀಗೆ ಹದಿಮೂರು ಉಪವಾಸವಾದರೆ ನಾಲ್ಕು ದಿಕ್ಕುಗಳಿಂದ ಐವತ್ತೆರಡು ಉಪವಾಸಗಳಾದುವು. ಈ ವ್ರತವನ್ನು ಮಾಡುವವರಿಗೆ ಮಹರ್ಧಿಕದೇವತ್ವವು ಒದಗಿ ಕಡೆಗೆ ನಿರ್ವಾಣಪದವು ಪ್ರಾಪ್ತವಾಗುವುದು.

೩೮. ಎತ್ತಣದು=ಎಲ್ಲಿಯದು.

೩೯. ಸಾಷ್ಟಾಂಗವೆರಗಿ=ಅಷ್ಟಾಂಗಪ್ರಣಾಮಮಾಡಿ—
ಉರ, ಶಿರಸ್ಸು, ದೃಷ್ಟಿ, ಮನಸು, ವಚನ, ಪದ್ಭ್ಯ, ಕರ, ಕರ್ಣ=ಇವೇ ಎಂಟಂಗಗಳು.
ಮನ+ದಣಿವತೆರದಿ=ಮನಸ್ಸು ತೃಪ್ತಿಪಡುವಂತೆ.

೪೦. ಪಂಚವಿಧಭಕ್ಷ್ಯ—

೪೧. ಉಸಿರಿಂ=ಹೇಳಿರಿ.

೪೨. ಸಿರವಿಸಲ್ವೇಕು=ಅಪ್ಪಣೆ ಕೊಡಿಸಬೇಕು; ಹೇಳಬೇಕು.

# ನಾಲ್ಕನೆಯ ಸಂಧಿ.

೩. ಗಾಳಿವಟ್ಟೆ=ಆಕಾಶ.

೪. ತುಂಬು=ಹೊಸಗನ್ನಡದಲ್ಲಿ ತೂಬು. ಉಚ್ಚ್ರಲು=ಸಡಿಲಿಸಲು, ಬಿಚ್ಚಲು. ಪೊರಮಡು=ಹೊರಡು. ಇಂಬುವೆತ್ತ=ಸೊಗಯಿಸುವ. ಪುರವಟಿಗರು= (?) ಅಡಪವಳರು=ಹಡಪದವರು (ತಾಂಬೂಲದವರು). ಝಳಂಬಾಯ್ತುರು=ಬಿಜ್ಜಣಿಗೆವಿಡಿವವರು. ನಚ್ಚಣಿಗರು=ನರ್ತಕರು. ಪಡಿಯರರು=ಪ್ರತೀಹಾರರು.

೫. ಮಜ್ಜನಸಾಲೆ=ಸ್ನಾನಶಾಲೆ. ಪಜ್ಜಳಿಪ=ಪ್ರಜ್ವಲಿಸುವ, ಹೊಳೆವ. ಅರ ಮೆಯ್ ಸೋಂಕದಂತೆ=ಅರ ಮೆಯ್ಯ್ಯ ಸೋಕದ ಹಾಗೆ. ಇಂತಹ ಕಡೆಗಳಲ್ಲಿ ಸಮುಚ್ಚಯದ ಉಂ ಎಂಬುದನ್ನು ಬಿಟ್ಟು ಹೇಳುವುದು ಚೆನ್ನಾಗಿಲ್ಲ; ಅನ್ವಯವು ಕೆಡುವುದು.

೬. ಊಳಿಗಂ=ಸೇವೆ (ಚಾಕರಿ). ಕಣ್ಗೊಳಿಸುವ=ಮನೋಹರವಾದ, ಸೊಗಯಿಸುವ. ಏರುಂಜವ್ವನ=ನವಯೌವನ. ತೊಡವು=ಆಭರಣ, ಒಡವೆ. ಮುಡಿಯಾದಿಯಾಗಿ ಕೆಂಬಜ್ಜೆವರ=ಅಡಿಯಿಂದ ಮುಡಿಯುವರೆಗೆ. ಕೆಂಬಜ್ಜೆ=ಕೆಚ್ಚನೆ+ಪಜ್ಜೆ (ಹೆಜೆ). ಅರುಮರಿಯುದಂದದಿ–ಅರ ಮೈ ಸೋಂಕದಂತೆ ಇವೆರಡರೊಳಗೆ ಆವುದು ಅನ್ವಯಕ್ಕೆ ಸರಿಯಾದುದು?

೭. ಏಕ್ಕಾವಳಿ=ಏಕಸರ. ಸಿಡುವೆರಲ್=ನೀಟವಾದ ಬೆರಲು. ಅನುಗೊಳಿಸುವ=ಒದವಿಸುವ. ಊಡುವ=ಹಚ್ಚುವ.

೮. ಎಣೆ=ಸಮ, ಸಮಾನ.

೯. ಎದೆಹೊಯ್ಲತನ=ದುಷ್ಟತನ. ಬೋನ=ಅನ್ನ. ಅಡ್ಡಣಿಗೆ=ಪಾತ್ರ. ಹರಿಯಣ=ಹರಿವಾಣ.

೧೦. ಒಸರಿ=ಸ್ರವಿಸಿ; ಬಾಯುನೀರು ಕರೆದು.

೧೧. ಆರೋಗಿಸುವ=ಊಟಮಾಡುವ. ಕರಂ=ಅಧಿಕಾರ್ಥದ ಅವ್ಯಯ. ತರಹರಂಗೊಂಡು=ಆತುರದಿಂದ. ಕುಕ್ಕರಿಸಿ=ಒಕ್ಕರಿಸಿ. ಬಸಿರು=ಹೊಟ್ಟೆ.

೧೨. ದಿನಬಂಜೆವಡೆಯದೆ=ಒಂದು ದಿನವಾದರೂ ತಪ್ಪದೆ ಎದೆದುಡುಕು=ಹೆದರಿಕೆ. ಸುಪ್ಪಾರರೊಳ್=ಅಡುಗೆಯುವರಲ್ಲಿ. (ಸಂ. ಸೂಪಕಾರ). ನಾಣ್ಚಿ=ಸಿಗ್ಗಾಗಿ, ಲಜ್ಜಿಸಿ.

೧೩. ಕಿರಿದು ಪಗಲಿಂದ=ಕೆಲವು ದಿನಗಳಿಂದ. ತನು=ಶರೀರವು. ತನುವಾದುದು=ಬಡವಾಯ್ತು.

೧೪. ಹವಣ್=ಪ್ರಮಾಣ ಇಲ್ಲಿ ಆನುಕೂಲ್ಯ. ನೆರೆ=ಹೆಚ್ಚಾಗಿ. ಜೀವಿತಂ=ಸಂಬಳ.

೧೫. ಕಟ್ಟೇಕಾಂತ=ಕಡಿದು + ಏಕಾಂತ=ಅತಿರಹಸ್ಯ.

೧೬. ಹರಿಯಣ=ಹರಿವಾಣ. ಉಣಿಸೆಂಬುದಿಸಿಸಿಲ್ಲ=ಊಟವೆಂಬುದು ತುಸುವಾದರೂ ಇಲ್ಲ.

೧೭. ಪೆರತಿಲ್ಲ=ಬೇರೊಂದಿಲ್ಲ. ಇಂತು + ಇನಿಸು + ಹೇಸುವನಲ್ಲ.=ಇಂತಿಷ್ಟಾದರೂ ಹಿಂಜರಿಯುವನಲ್ಲ. ಅವನೇ + ತಪ್ಪದು + ಎಂದು=ಅವನೇ ನಿಶ್ಚಯ ಎಂದು.

೧೮. ಎಕ್ಕದ ಮುಗುಳ್ಗಳಂ=ಎಕ್ಕೆಗಿಡದ ಹೂಗಳನ್ನು. ಹರಹಿ=ಹರಡಿ. ಜಗಜಟ್ಟಿಗಳಂ=ಪ್ರಸಿದ್ಧರಾದ ಜಟ್ಟಿಗರನ್ನು. ಎಕ್ಕತುಳದ+ಆಳ್ಗಳಂ=ಒಂದೇಸಮನಾದ (ಬಲವುಳ್ಳ) ಆಳುಗಳನ್ನು. ಬಲಿದು ಕದವಂ=ಬಾಗಿಲನ್ನು ಹಾಕಿ.

೧೯. ಮೂದಲಿಸುತ=ಹೀಯಾಳಿಸುತ್ತ. ಮಲ್ಲರು=ಬಲಿಷ್ಠರು. ದಿಂಡುಗೆಡೆವಂತೆ=ಹೆಣ ಬೀಳುವಂತೆ. ಬಲುಹೂನಿ=ಬಹಳವಾಗಿ ಹಟವಿಡಿದು. ಹೆಡಗುಡಿಗಟ್ಟಿ=ಹಿಂಗಟ್ಟು ಕಟ್ಟಿ.

೨೦. ಸೆಳೆನೀರು=ತಿಳಿನೀರು.

೨೧. ಕೈವೊಯ್ದು=ಚಪ್ಪಾಳೆ ತಟ್ಟಿ. ಲಂಡ=ಪೋಕರಿ, ಪುಂಡ. ಇರವು=ಸ್ಥಿತಿ.

೨೨. ವೆಗ್ಗಳ=ಅಧಿಕ.

೨೪. ಹದಣಾಗಿ=ಹದವಾಗಿ, ಅನುಕೂಲವಾಗಿ. ಹೊಸೆದು=ಕಲ್ಪಸೆಮಾಡಿ.

೨೫. ಅರಗು=ಕೊನೆ-ಕಡೆ. ಬರದು=ಬಾರದೆಂದಿದ್ದರೆ ಶುದ್ಧ.

೨೬. ಎಡೆವೊಳೆ=ನಡುವಣ ನದಿಯಲ್ಲಿ—ನದಿಯ ಮಧ್ಯಮಾರ್ಗದಲ್ಲಿ.

೨೭. ನಳನಳಿಸಿ=ಕೋಮಲವಾಗಿ, ರಮಣೀಯವಾಗಿ.

೨೮. ತವಕಿಪೆ=ಆತುರಿಸುವೆ.

೩೧. ಕದುಕು=ತಿವಿತದಿಂದಾದ + ಏರು=ಘಾಯ. ದಬ್ಬುದಲೆ=ನಡುಕ; ಒದರಾಟ.

೩೨. ಅಣುಗ=ಮಗ. ಸೊಣಗನುಣಿಸಾದನಲ್ಲಾ=ನಾಯಿಗೆ ತುತ್ತಾದನಲ್ಲಾ, ದುರ್ಗತಿಗೆ ಬಿದ್ದನಲ್ಲಾ. ನಾಡುಗರು=ನಾಡಿನವರು; ಜನ ಸಾಮಾನ್ಯರಾದವರು.

೩೬. ಮರುಕ=ವ್ಯಸನ. ಇಂದುವರದತ್ತಾವಧಾನದೊಳಗೆ=ಈ ವರೆಗೆ ಅದೇ ಧ್ಯಾನದಲ್ಲಿಟ್ಟ ಮನದಿಂದ.

೩೭. ವಿಸ್ಮೃತಿಯುಪ್ಪುದು=ಮರೆತು ಹೋಗುವುದು. ಪಂಚಪದಮಂತ್ರ=ಪಂಚಗುರುಗಳನ್ನು ಧ್ಯಾನಿಸುವ ಐದು ಅಕ್ಷರಗಳುಳ್ಳ ಮಹಾಮಂತ್ರ.

೪೧. ಬಜ್ಜಡಂ=ಕಲ್ಮಷ, ಪಾಪ. ನಿರ್ಜಾಡಿಸು=ತೊಲಗಿಸು.

೪೩. ಕೆಕ್ಕಳ ಕೆರಳ್ದು=ಅತಿ ಕುಪಿತನಾಗಿ. ಮೆಯ್ಗಾಪಿನ ಆಳುಗಳನು ಅಟ್ಟಿದಂ=ಅಂಗರಕ್ಷಣೆಯ ಭಟರನ್ನು ಕಳುಹಿದನು.

೪೪. ಉಸ್ಮೆ=ಏಳಲು. ಬೆಸನಂ ಬೇಡಿ=ಅಜ್ಞೆಯನ್ನು ಕೇಳಿ.

೪೫. ಕಪ್ಪುರವಳಿಕಿನಂತಿರ್ಪ=ಕರ್ಪೂರದ ಸ್ಫಟಿಕದಂತಿರುವ.

೪೬. ಅವಧಿಜ್ಞಾನ=ಪೂರ್ವಾಪರ ಭವಗಳ ಜ್ಞಾನ. ಗಣನೆಗಿಯ್ದದ=ಲೆಕ್ಕಕ್ಕೆ ಬಾರದ. ಉಪಸರ್ಗ=ಬಾಧೆ.

೪೭. ಕನಲಿ=ಸಿಟ್ಟಾಗಿ. ಡಾಣೆ=ದಂಡ, ದೊಣ್ಣೆ, ಬಡಿಗೆ.

೪೮. ಉರುಹು=ಉರುಬು=ಊದು. ಕೈವೊಯ್ದು=ಚಪ್ಪಾಳೆ ಹೊಡೆದು. ಗೊಂದಣ=ಸಮೂಹ. ಸೊಡರು=ದೀಪ.

೪೯. ರೂಡಿಸಿದ=ಕೂಡಿದ, ನೆರೆದ. ಕಡುಮಸಗಿ=ಬಹಳವಾಗಿ ವಿಜೃಂಭಿಸಿ ಇಲ್ಲಿ ರೇಗಿ. ಪೀಡು ಬೆದರ್ವಂದದಿಂ=ಪಾಳೆಯವೆಲ್ಲವೂ ಹೆದರುವಂತೆ; ಕೆಂಗಣ್ಮಸಗಿ=ಕಣ್ಣು ಕೆಂಪಗಾಗುವಂತೆ ಸಿಟ್ಟು ಮಾಡಿ.

೫೦. ಚತುರಂಗಬಲ=ಆನೆ ಕುದುರೆ ರಥ ಕಾಲಾಳುಗಳ ಸೇನೆ. ಕಣ್ಗೆಟ್ಟು=ದಿಕ್ಕುದೋರದೆ. ಈಡಾಡು=ಬೀಸಾಡು.

೫೧. ರೂಪುದಾಳಿ=ರೂಪವನ್ನು ಧರಿಯಿಸಿ. ಹೇಡಿಗೊಂಡು=ಪುಕ್ಕಲನಾಗಿ.

೫೨. ಬಯಲ್ಮಾಡಿದೊಡೆ=ನಾಶಮಾಡಿದರೆ. ದೇಗುಲ=ದೇವಸ್ಥಾನ. ಅನುಮಾಡಿದೊಡೆ=ಸರಿಮಾಡಿಸಿದರೆ. ಮರೆಗಡೆಗೆ ಬಂದವರ=ಶರಣು ಹೊಕ್ಕವರ ಮುಮ್ಮಡಿಯಪ್ಪುದು=ಮೂರರಷ್ಟು ಆಗುವುದು.

೫೩. ಚಿಕ್ಕಸಂ ಬಟ್ಟು=ಆಶ್ಚರ್ಯವನ್ನು ಹೊಂದಿ. ಬೆಂಬಳಿಯಿಂ=ಹಿಂದೆ, ಬೆಂಬಲದಲ್ಲಿ.

೫೫. ಪರಮೇಶನಿರ್ದ್ದಂದದಿಂ... ಮುನಿನಿಕಾಯಮಿರ್ದ್ದಂದದಿಂ = ಪರಮೇಶ್ವರನಿರುತ್ತಿರಲು, ಮುನಿಸಮೂಹವಿರುತ್ತಿರಲು ಅವರಿಗೆ ಇಚ್ಛಾಕಾರವನ್ನು ಮಾಡದೆ... ಇಚ್ಛಾಕಾರ=ಇಚ್ಛಾಮಿ ಇಚ್ಛಾಮಿ ಎಂದು ಹೇಳಿ ವಿನಯವನ್ನು ಪ್ರಕಟಿಸುವುದು. ಬಲವಂದು=ಪ್ರದಕ್ಷಿಣೆಮಾಡಿ. ಒಸೆದು=ವಿಶ್ವಾಸಿಸಿ. ಎಯ್ದೆ=ಚೆನ್ನಾಗಿ.

೫೬. ಓವದೆ=ಇದಕ್ಕೆ ಸಾಮಾನ್ಯವಾಗಿ ಪ್ರೀತಿಸದೆ ಎಂದರ್ಥವಿದ್ದರೂ ಇಂತಹ ಸಂದರ್ಭದಲ್ಲಿ ಕೇವಲ ಪಾದಪೂರಣಾರ್ಥವೆಂದೂ, ನಿರರ್ಥಕದ ಮಾತೆಂದೂ ತಿಳಿಯಬೇಕು. ಸಾಧಾರಣ ಕವಿಗಳಲ್ಲಿ ಇಂತಹ ಪಾದಪೂರಣದ ಪದಗಳು ದೊರೆಯುತ್ತವೆ.

೫೮. ಆಶ್ಚರ್ಯಪಂಚಕಂ=ಸುರಪುಷ್ಪವೃಷ್ಟಿ, ಹೊಮ್ಮಳೆ, ಮಂದಾನಿಲ, ದೇವದುಂದುಭಿ, ಸುರರ ಅಹೋನಾದ.

> **ಸುರಿಯೆ ವಸುಧಾರೆ ನಭದೊಳ್ ।**
> **ಸುರವೃಂದಂ ಪೊಗಳೆ ವೊಳಗೆ ಸುರದುಂದುಭಿ ತ- ॥**
> **ಣ್ಣೆಲರೆಸಗೆ ಕುಸುಮವರ್ಷಂ ।**
> **ದೊರೆಕೊಳೆ ಸಾಶ್ಚರ್ಯವಾಯ್ತು ಪಂಚಾಶ್ಚರ್ಯಂ ॥**

(ಅಜಿತ VII ೩).

೬೧. ಎದೆ=ಹೃದಯದಲ್ಲಿ.

೬೨. ಅರ್ತಿ=ಅಳ್ತಿ=ಪ್ರೀತಿ. ಭದ್ರಪರಿಣಾಮ=ಶುಭವಾದ ಗತಿ.

೬೩. ಮಿಥ್ಯೆ=ಸುಳ್ಳು, ಮೋಸ, ಮಾಯೆ.

೬೪. ಜನಜನಿತಮಾಗಿ=ಲೋಕಪ್ರಸಿದ್ಧವಾಗಿ.

೬೫. ಡಾಳಕಿ=ಗೈಯಾಳಿ.

೬೬. ಮಳೆಗಾಲದ=ಮೇಘದ. ನುಣ್ಚರವನ್ನು=ಗಂಭೀರವಾದ ಶಬ್ದವನ್ನು. ಕರಲುನೆಲ=ಹಾಳುನೆಲ. ಓರಣದಿಂ=ಚೆಂದದಿಂದ.

## ಐದನೆಯ ಸಂಧಿ.

೧. ಬಟ್ಟವೆರೆವೊಗದ=ದುಂಡಗೆ ಚಂದ್ರನಂತಿರುವ ಮುಖವುಳ್ಳ.

೨. ನೆಮ್ಮುಗೆ=ಆಲಂಬನ, ಆಶ್ರಯ. ಆ ರಾಜಗೃಹದವರು ದಾನಗಳಲ್ಲಿ ಬಹು ಶ್ರೇಷ್ಠರಾದವರೆಂದು ಉತ್ಪ್ರೇಕ್ಷಿಸಿ ಕವಿ ಹೇಳುವಲ್ಲಿ, ಶ್ರೇಯಾಂಸನು ಮಾಡಿದ ಇಕ್ಷುರಸದ ದಾನದಿಂದ ಶಾಂತಿನಾಥನೆಂಬುದು ಪ್ರಸಿದ್ಧವಷ್ಟೆ. ಶ್ರೇಯಾಂಸನ ದಾನವನ್ನೂ ಮೀರಿದ ಉತ್ತಮಪಾತ್ರದಾನವನ್ನು ಮಾಡುತ್ತಿದ್ದರೆಂದು ಭಾವ.

೩. ಪಡಲಿಗೆ=ಹರಿವಾಣ, ತಟ್ಟೆ.

೪. ಚಂದ್ರಗತಿ=ಮುನಿಗಳು ಉಪವಾಸಾಂತರದ ಪಾರಣೆಗೆಂದು ಬರುವಲ್ಲಿ ನಡೆವ ರೀತಿಗೆ ಚಂದ್ರಗತಿಯೆಂದು ಹೆಸರು.

೫. ಅಪವರ್ಗಸತಿಗೆ=ಮೋಕ್ಷ ಲಕ್ಷ್ಮಿಗೆ. ಕರಕರೆ=ಚಿಂತೆ. ತನುತನುವಂ=ಬಡವಾದ ಶರೀರವನ್ನು.

೬. ಭಾವರಿ ಮುರಿದು=ವ್ರತವು ಕೆಟ್ಟು.

೭. ಅಲಸಿ=ಬೇಸತ್ತು. ಕಲಿನವಿಜಯುಂಗೆ=ದೋಷರಹಿತನಾದ ಜಿನೇಶ್ವರನಿಗೆ.

೮. ಗಂಡವಿಮುಕ್ತರಂ=ವೀತರಾಗರನ್ನು ಸುತದೋಹಳದಿ=ಪುತ್ರನಿಲ್ಲವೆಂಬ ಚಿಂತೆಯಿಂದ.

೯. ಬಾಳ್ವೆ=ಬಾಳು.

೧೦. ಪಚ್ಚುಗೊಂಒರೆ=ಭಾಗಮಾಡಿಕೊಳ್ಳುವರೇ ಎಂತಾನುಂ=ಹೇಗಾದರೂ.

೧೧. ಬಳವಿಗೆ=ಅಭಿವೃದ್ಧಿ. ಮುನ್ನಂ ನೋನದವರ್ಗೆ=ಪೂರ್ವದಲ್ಲಿ ವ್ರತವನ್ನು ಆಚರಿಸಿ ಪುಣ್ಯವನ್ನು ಪಡೆಯದವರಿಗೆ.

೧೨. ಆರಭಾರವನು=ವ್ಯವಹಾರವನ್ನು. ಭೋಗ + ಉಪಭೋಗ=ಭೋಗಿಸುವ ಪದಾರ್ಥವು ಒಮ್ಮೆ ಭೋಗಿಸಿದ ಬಳಿಕ ಮತ್ತೆ ಕೆಲಸಕ್ಕೆ ಬಾರದು. ಹೂ, ಗಂಧ, ಅನ್ನ ಮುಂತಾದುವು ಉಪಭೋಗದ ಪದಾರ್ಥಗಳು. ಹಲವು ಸಾರಿ ಭೋಗಿಸಲಿಕ್ಕೆ ಅನುಕೂಲವಾದುವು—ಮನೆ, ಮಡದಿ, ಕುದುರೆ, ವಸ್ತ್ರ, ಆಭರಣ ಮುಂತಾದುವು.

೧೩. ನಮೆವರು=ಕೃಶವಾದವರು, ಬಡವಾದವರು.

೧೪. ಇನಿಯನಂ=ವಲ್ಲಭನನ್ನು, ಗಂಡನನ್ನು.

೧೫. ನೋಂಪಿ=ವ್ರತ. ಚೊಕ್ಕಟದಿ=ಸೊಗಸಿನಿಂದ, ಚೆನ್ನಾಗಿ. ಅನ್ನಿಗರ=ಇತರರ, ಹೆರವರ. ಎರವು=ಭೇದ,

೧೬. ಜನದರಿಕೆಯಲ್ಲಿ=ಜನರರಿವಂತೆ, ಪ್ರಸಿದ್ಧವಾಗಿ.

೧೮. ಮನೆವಾರ್ತೆ=ಸಂಸಾರ; ಗೃಹಕೃತ್ಯ.

೧೯. ಕೊರುಗುರಿಂದ=ಉಗುರಕೊನೆಯಿಂದ. ಮಿಡಿಯುತ=ಮೀಟುತ್ತ.

೨೧. ಡಾಳೆ=ಡಾಳಕಿ.

೨೨. ಹೊಲೆಗಂಡು=ಮೈಲಿಗೆಯಾಗಿ. ತುಬ್ಬಿ=ಸೂಚಿಸಿ. ಹೊತ್ತು ಮೂಡಿ ಮುಳುಗುವನ್ನೆವರ=ಸೂರ್ಯನು ಉದಯಿಸಿ ಅಸ್ತಮಿಸುವವರೆಗೂ, ಹಗಲೆಲ್ಲಾ. ತಂಬಿಸು=ಸ್ತಂಭಿಸು, ನಿಲ್ಲುವಂತೆ ಮಾಡು. ಡೊಗ್ಗಿರಿದು=ಮುಗ್ಗರಿಸಿ ಕೆಡೆ=ನೆಲದಲ್ಲಿ ಬೀಳು.

೨೩. ಮುದು ಪಾರಿ=ಮುದುಪ, ಮುದುಕ. ಬೆಜ್ಜರಂ=ಭಯ. ಗೊಡ್ಡ=ಬಾಧೆ.

೨೪. ನಾಡಾಡಿಗರಂ=ಸಾಮಾನ್ಯರಾದವರನ್ನು ಅಪ್ರಸಿದ್ಧರನ್ನು.

೨೫. ಗುಜ್ಜುಗುರುಕು=ನಿಟ್ಟುಸಿರು; ವ್ಯಸನ. ಬೋಸರಿಗತನ=ಮಿಥ್ಯಾದರ; ಮಿಥ್ಯಾವಿಸಯ, ಕಪಟದ ವಿಶ್ವಾಸ. ತೊಳ್ತಂಮಾಡಿ=ದಾಸಿಯಾಗಿ ಮಾಡಿ. ದೇಹಾರ=ಇಲ್ಲಿ ಕೆಟ್ಟಗತಿ, ಕೇಡು. ( ಸಾಮಾನ್ಯಾರ್ಥ ಹೊಸ್ತಿಲು ).

೨೬. ಬಣಜಿಗಿತ್ತಿ=ವರ್ತಕನ ಹೆಂಡತಿ. ಸಂತೈಸಿ=ಸಮಾಧಾನಪಡಿಸಿ.

೨೭. ಕುರುಜೆಡೆ=ಕಿರಿದು+ಜೆಡೆ. ಮರವಡಿಯ ಚೀಲ=

೨೮. ಹಸನಾದ=ರಮ್ಯವಾದ, ಸೊಗಸಾದ.

೨೯. ಎರಕ=ಪ್ರೀತಿ. ನೆರೆಸವಿಯುತ=ಬಹಳವಾಗಿ ರುಚಿಯಿಸುತ್ತ ( ತಿಂದು ).

೩೦. ಎತ್ತಾನುಂ=ಎಲ್ಲಿಯಾದರೂ. ಹೇಕುಳಿ=ಅಮೇಧ್ಯದ ಗುಂಡಿ. ಅಳುತ=ಮುಳುಗುತ್ತ.

೩೧. ಅನಿತರಿಂ=ಅದರಿಂದ. ಅಲೆಪಡಿಸುವ=ಅಲೆಯಿಸುವ, ಪೀಡಿಸುವ. ಬಿನುಗು=ಗರ್ವದ, ಸೊಕ್ಕಿನ. ಇದಾವ ಗಹನಂ=ಇದಾವ ಕಷ್ಟ.

೩೨. ಎಡರು=ಕಷ್ಟ. ಅಳಿವೆಂ=ಸಾಯುವೆನು. ಅನಾಮಿಕಂ=ಹೆಸರಿಲ್ಲದವನು; ಅಪ್ರಸಿದ್ಧನು.

೩೩. ಕರವಾಳ=ಖಡ್ಗವನ್ನು, ಕತ್ತಿಯನ್ನು.

೩೪. ಜಡಿದು=ಝಳಪಿಸಿ. ಕೊಡುಬೆಸನ ಕೊಡುಬೆಸನ=ಅಜ್ಞೆಯನ್ನು ಕೊಡು, ಅಜ್ಞೆಯನ್ನು ಕೊಡು. ಕಡಿಕಂಡಮಂ ಮಾಡಿ=ತುಕ್ಕಡಿಸಿ, ಕತ್ತರಿಸಿ. ಬಿಸುಡು=ಬೀಸಾಡು. ಅಳುತ=ಆಕ್ರಮಿಸುತ್ತ ಘುಡುಘುಡಿಸು=ಆರ್ಭಟಿಸು.

೩೫. ಉರುಹು=ಉರುಬು=ನಾಶಮಾಡು ಜವಹುರವ=ಯಮಪುರವನ್ನು ಮಿಳ್ತುವಿನ=ಮೃತ್ಯುವಿನ. ಸೆಂಡಾಡು=ಚೆಂಡಿನಂತೆ ತಿರಿಕಲ್ಲಾಡು. ಬಾಳ್ತಲೆಗೊಂಡು=ಜೀವದೊಡನೆ ತಲೆಯನ್ನು ಕತ್ತರಿಸಿಕೊಂಡು. ಬೆಸನ ಹೇಳದೆ=ನೇಮಕವನ್ನು ಮಾಡದೆ, ಅಪ್ಪಣೆಯನ್ನು ಕೊಡದೆ.

೩೬. ಹರಿದಾಳಿ ಮಾಡಿ=ಮುತ್ತಿಗೆ ಹಾಕಿ. ಹರಿಸೂರೆಗೊಳುತ=ಕೊಳ್ಳೆಯನ್ನು ಹೊಡೆಯುತ್ತ. ನುಗ್ಗುನುರಿಮಾಡಿ=ದೂಳಿಮಾಡು, ಚೂರ್ಣಿಸು, ಪುಡಿಪುಡಿಮಾಡು. ಒಗ್ಗರಿಸು=ಒಟ್ಟುಗೂಡಿಸು. ನಿಗ್ಗರಿಸು=ಕೆಡಹು. ಎಗ್ಗತನ=ಹೆಡ್ಡತನ, ಅವಿವೇಕ. ಹುಲ್ಪೆಸನ=ಅಲ್ಪಕಾರ್ಯವನ್ನು.

೩೭. ದೆಸೆಯಾಳ್ದರ್=ದಿಕ್ಪಾಲಕರು. ಕಮ್ಮರಿಯ ಬಿದ್ದು=ಪ್ರತಿಜ್ಞೆಮಾಡಿ ಬಿದ್ದು.

೩೮. ಅಳ್ತಿ=ಪ್ರೀತಿ. ಬೊಬ್ಬಿರಿದು=ಕೂಗಿ. ಕೊರಸಿಯ=ಹರಿತವಾದ ಕತ್ತಿಯನ್ನು.

೩೯. ಬೆದರ್ವ=ಹೆದರುವ. ಬೆಚ್ಚುವ=ಬೆದರುವ. ಅದುರ್ವ=ನಡುಗುವ. ಹಿಂಡುಗೆದ

ರ್ವ=(ಭಯದಿಂದ) ಗುಂಪು ಚೆದುರುವ. ಮರುಳು=ಪಿಶಾಚ. ಗದಗಾವು=ಗುಂಪು ಕೂಡುವಿಕೆ. ಒತ್ತರ=ರಭಸ. ಅದಟುಗೆಡುವ=ಪರಾಕ್ರಮ ಕೆಡುವ, ಎದೆ ಯೊಡೆವ.

೪೦. ಪೌರರು=ಪುರದ ಜನರು. ಏತರಿಂದ=ಆವಕಾರಣದಿಂದ.

೪೧. ಪುದಿದ=ಹೊದ್ದ. ಎದೆಹಾರಿ=ಧೈರ್ಯಗೆಟ್ಟು. ಇರುಪೆ=ಇರುವೆ.

೪೨. ಆನೆ ಸೆಂದುರ=ಸಿಂಧುರ, ಆನೆ. ದರ್ದುರ= ಹೊತ್ತ ಕಂಡಿರುಳಿನಂತೆ=ಹಗಲನ್ನು (ಸೂರ್ಯನನ್ನು) ಕಂಡ ರಾತ್ರಿ (ಕತ್ತಲೆ) ಯಂತೆ. ಅಂಗಜಾರಿಯ ಭವನ=ಮದನ ವೈರಿಯ ಭವನ=ಜಿನಾಲಯ. ಅಂಗವಿಸು=ಯತ್ನಿಸು, ಮೇಲೆ ಬೀಳು. ಅಮ್ಮದೆ=ಅಣ್ಮದೆ=ಪರಾಕ್ರಮವನ್ನು ತೋರಲಾರದೆ.

೪೩. ಮರಳಲು=ಹಿಂತಿರುಗಲು. ಹಿರಿದು ಹಸನಾಯ್ತು=ಬಹಳ ಚೆನ್ನಾಯ್ತು.

೪೪. ಅಂತಪ್ಪವರ್=ಹೊಸಗನ್ನಡದಲ್ಲಿ ಅಂಥವರು. ಪನಸು=ಹಲಸು. ಎಲವ=ಎಕ್ಕೆ.

೪೫. ಚೋರ ಕಂಡಿ=ಕಳ್ಳನ ಕನ್ನ. ಗಹಗಹಿಸಿನಕ್ಕು=ಅಟ್ಟಹಾಸದಿಂದ ನಕ್ಕು.

೪೬. ಭೀತಿವೆತ್ತು=ಭಯವನ್ನು ಪಡೆದು. ಮಗುಳಲ್ಕೆ=ಹಿಂತಿರುಗಲು. ಅಘಟಿತ=ಅಸಾಧ್ಯ.

೪೭. ಒದರ್ವ=ಕೂಗುವ, ಗರ್ಜಿಸುವ.

೪೮. ಕರೆಗಣ್ಮೆ=ಕರೆಗೆ+ಅಣ್ಮೆ=ಕೋಪಾಗ್ನಿ ಅತ್ಯಂತವಾಗಲು. ಕಡುಮಸಗುತ=ಅಧಿಕವಾಗಿ ರೇಗುತ್ತ. ಮೂದಲಿಸಿ=ಹೀಯಾಳಿಸಿ ನುಡಿದು. ಅರಿದು=ಕತ್ತರಿಸಿ. ಮೆಟ್ಟಿಲ್=ಎತ್ತರ. ಬೀಳ್ಕೊಟ್ಟನು=ಕಳುಹಿಕೊಟ್ಟನು.

೪೯. ಹರೆಯುಹೊತ್ತರೊಳ್=ಅರುಣೋದಯದಲ್ಲಿ, ಮುಂಜಾನೆಯಲ್ಲಿ. ತತ್ತರಂದರಿದು=ತುಂಡುತುಂಡಾಗಿ ಕತ್ತರಿಸಿ.

೫೦. ಹಣ್ಣಿದಾಕಾರ್ಯಮಂ=ಸಜ್ಜುಗೊಳಿಸಿದ ಕೆಲಸವನ್ನು. ಪೈಸರಂಗೊಳಿಸಿ=ಪ್ರತಿಭಟಿಸಿ. ಮಸಿವಣ್ಣಮಂ ಮಾಡಿದೆ=ಕಪ್ಪುಬಣ್ಣ ಮಾಡಿದೆ, ಹಾಳುಮಾಡಿದೆ.

೫೧. ಮೊರೆಯೊ ಮೊರೆಯೋ=ಶರಣು ಶರಣು. ಸಂಕಟದಲ್ಲಿ ಕರುಣದ ಆಕ್ರಂದನ ಧ್ವನಿ. ಬರಿದೆ=ವ್ಯರ್ಥವಾಗಿ. ಗೊಡ್ಡೇರಿನಿಂ=ತಾನು ಬಂಜೆಯೆಂಬ ವ್ಯಥೆಯಿಂದ. ಗೊಡ್ಡು=ಬಂಜೆ; ಏರು=ಘಾಯ. ಇರಿಯಿಸಿದಳ್=ಕೊಲ್ಲಿಸಿದಳು. ಮೊರೆಯಿಡಲ್=ಕೂಗಾಡಲು. ಮರುಗಿ=ಕರುಣೆಯಿಂದ ಚಿಂತಿಸಿ, ಸಂತಾಪಗೊಂಡು. ಉರಿಯಿಂ ಹಿರಿಯನಾಗಿ=ಅಗ್ನಿಯಿಂದ ದೊಡ್ಡವನಾಗಿ=ಬಹಳ ಕೋಪಗೊಂಡು. ಅರಗುಲಿಯು ಮಾಡಿದವರ್ಗೆ=ಧರ್ಮವನ್ನು ಕೊಂದವರಿಗೆ=ಅಧರ್ಮದಿಂದ ಕೊಲೆ ಮಾಡಿದವರಿಗೆ. ಆಜ್ಞೆಯಂ ಮಾಡಿಂ=ದಂಡನೆಯನ್ನು ಮಾಡಿರಿ.

೫೨. ಕವರಲೆಂದು=ಸೂರೆಗೊಳ್ಳಲೆಂದು. ಮರವಟ್ಟಂತೆ=(ಮರ + ಪಡು). ಮರದಂತೆ ಅಚೇತನನಾದ ಹಾಗೆ. ತಂಬಿಸೆ=ಸ್ತಂಭವಾಗಲು, ಅಲ್ಲಾಡದಿರಲು. ಕಳಿವನ್ನೆವರಂ=ಕಳೆದು ಹೋಗುವ ವರೆಗೂ.

೫೩. ಸಂದಣಿಸಿ=ಗುಂಪುಗೂಡಿ. ಉಲಿ=ಕೂಗು.

೫೪. ತೆರೆದು + ಅರಿಕೆ ಮಾಡು=ಮರೆಮಾಚದೆ ಬಿಡಿಸಿ ಹೇಳು.

೫೫. ಉಬ್ಬಸಂಗೊಳಿಸುತಿವೆ=ಬಾಧೆ ಪಡಿಸುತ್ತಿವೆ. ಎದೆಯುಮೆಟ್ಟಿ=ಎದೆಯನ್ನು ತುಳಿದು.

೫೬. ಮಚ್ಚರದಿ=ಹೊಟ್ಟೆಗಿಚ್ಚಿನಿಂದ; ಮತ್ಸರದಿಂದ. ಹಳು=ಅಡವಿ. ಒಚ್ಚತಂ=ಉಚಿತವಾಗಿ, ಒಪ್ಪಿಗೆಯಾಗಿ. ಅಚ್ಚರರ=ಅಪ್ಸರರ. ಗೊಂದಣಂ=ಸಮೂಹ. ನೆರೆದುದು=ಕೂಡಿತು.

೫೭. ಐದು ಪರಿಯಾಶ್ಚರ್ಯ:-ನಾಲ್ಕನೆಯ ಸಂಧಿ ೫೮ ನೆಯ ಪದ್ಯದ ಟಿಪ್ಪಣಿಯನ್ನು ನೋಡಿ. ಪುಳಿತ=ಕೊಳೆತುನಾರುವ. ಅಪಮಾನ ಪಡಿಸುವ ಪದ್ಧತಿ ಪೂರ್ವದಲ್ಲಿ ಹೇಗಿತ್ತೆಂಬುದನ್ನು ಇದರಿಂದರಿಯಬಹುದು.

೫೮. ಮಾಸಂಕೆದಿಂದ=ಮಹಾಶಂಕೆಯಿಂದ, ಅತಿಭಯದಿಂದ. ಓಸರಂ ಮಾಡದೆ=ಆಲಸ್ಯ ಮಾಡದೆ, ತಳುವದೆ. ನೆಲೆಮಾಡಿ=ನೆಲೆಗೊಳಿಸಿ=ಸ್ಥಿರಪಡಿಸಿ.

೫೯. ಒಲ್ಲನೆ + ಉಲಿಯೆ=ಘಟ್ಟಿಯಾಗಿ ಘೋಷಿಸಲು.

೬೦. ಹೊದಕುಳಿ=ಸಂತಾಪ. ಒದವಿನಿಂದ=ಪ್ರಾಪ್ತಿಯಿಂದ.

೬೧. ಅಸತಿ=ಹಾದರ. ತೊಡಕು=ಸಿಕ್ಕು, ಗೋಜು.

೬೨. ಮುಂದುಗೆಡಿಸುವ=ಮುಂದೆ ಬರಲಿಕ್ಕಿರುವ ಪರತ್ರೆಯನ್ನು.

೬೪. ಒರೆದ = ಹೇಳಿದ ಬಚ್ಚಣೆ ಮಾತು=ಬಣ್ಣದ ಮಾತು, ವರ್ಣನೆಯ ಮಾತು.

೬೫. ತೊಳ್ತಿರಿಗೆ ತೊಳ್ತಂ ಮಾಡಿ=ದಾಸಿಯರಿಗೆ ದಾಸಿಯಾಗಿ ಮಾಡಿ; ಅತಿ ನೀಚವಾದ ಊಳಿಗದಲ್ಲಿರಿಸಿ. ಮೊಗಗೆಡಿಸಬೇಕು=ಅಪಮಾನ ಮಾಡಿಸಬೇಕು.

೬೬. ನರ್ಮವಚನ=ಪ್ರಿಯವಚನ; ಸರಸವಾದ ಮಾತು. ಆಲಯಿಸಿ=ಕೇಳಿ. ಎಣಿಕೆ ಮಾಡುತ್ತಿರಲ್ = ಆಲೋಚಿಸುತ್ತಿರಲು ಸಂತಸವಡೆದಂ = ಸಂತೋಷವನ್ನು ಹೊಂದಿದನು.

---

## ಆರನೆಯ ಸಂಧಿ.

೧. ಗರುವೆ=ಗಂಭೀರೆ.

೨. ಸೋವಿಲೆಪೆಸರ=ಸೋವಿಲೆಯೆಂಬ ಹೆಸರುಳ್ಳ.

೪. ದರ್ವೀಕರೇಶ್ವರರ್=ನಾಗೇಂದ್ರರು.

೭. ಅಲವರಿಕೆ=ಬೇಸರ. ಅತ್ಯಾಶೆ? ಉಣ್ಬನಿತಂ=ತಿನ್ನುವಷ್ಟನ್ನು.

೮. ಕಡುಕೂರ್ಮೆ=ಅತಿ ಪ್ರೀತಿ, ಕೈಲೆಡೆಗೊಟ್ಟು=ಕೈಯಲ್ಲಿ ಒಪ್ಪಿಸಿ.

೯. ಕೋರಿಸಿ=ಹೊಗಳಿಸಿ.

೧೦. ಎಕ್ಕೆಕ್ಕೆ=ಹೆಚ್ಚು. ಒರಸೊರಸು=ಸರಿಸಮ. ಗರಗರಿಕೆ=ಸೊಬಗು. ಕಕ್ಕಸ=ಕರ್ಕಶ. ದಿಕ್ಕತೆಕ್ಕೆ=ಹೆಚ್ಚು ಕಡಿಮೆ.

೧೧. ತೆಳ್ಪು=ಶುಭ್ರತೆ, ನೈರ್ಮಲ್ಯ. ಕಾವನ+ಅಲರ್ಗಣೆಗೆ=ಮನ್ಮಥನ ಪುಷ್ಪಾಸ್ತ್ರಕ್ಕೆ. ಬಿಡುಮುಡಿ=ಕೇಶಪಾಶ. ತೊಡೆವ=ಅಳಿಸುವ.

೧೨. ಪೊಸಮಿಸುನಿಗೇದಗೆಯೆಸಳ್ಗಳ್=ಹೊಸದಾದಹೊಂಬಣ್ಣದ ಕೇದಗೆಯ ಹೂವಿನ ದಳಗಳ, ಗರಿಗಳ. ಸುವರ್ಣತ್ವಮಂ=ಒಳ್ಳೆಯ ಬಣ್ಣವನ್ನು, ಹೊಂಬಣ್ಣವನ್ನು.

೧೩. ಲಳಿ=ತೆರೆ, ಅಲೆ; ಲಳಿ=ಸೊಗಸು. ಅಗ್ರಹಾರಂ= ಮೇಗಣ ಹಾರವು; ಅಗ್ರ ಹಾರ=ಬ್ರಾಹ್ಮಣರ ಕೇರಿ. ದಾಮ=ಡಾಬು; ದಾಮ=ಹಗ್ಗ.

೧೪. ಪೇಳ=ಗೋಷ್ಠಿ. ಅಳ್ತಿ=ಪ್ರೀತಿ. ಅನುಶ್ರುತಂ=ಎಡೆವಿಡದೆ.

೧೫. ಓರಗೆಯ=ಸಮವಯಸ್ಕರಾದ, ಸಮಾನರಾದ, ಸಮವಯಸ್ಸಿನ, ಸಮತೆಯ. ಪುತ್ತಳಿ=ಬೊಂಬೆ. ನಟನೆಯನು=ಭಂಗಿಯನ್ನು.

೧೬. ಪೆರ್ಚ್ಗೆ=ಅಭಿವೃದ್ಧಿ

೧೭. ನೆರವಿ=ಗುಂಪು, ಜನಸಮೂಹ. ಜೂದುಂಗಾರ=ಜೂಜಾಡುವವನು. ಪಾರ್ವಂ= ಹಾರುವ=ಬ್ರಾಹ್ಮಣ. ಸಾವಂದು=ಸಾಯುವ ಕಾಲದಲ್ಲಿ.

೧೮. ಪದದಿ=ಹದದಿಂದ=ರೀತಿಯಿಂದ. ಹೆಳವಂ=ಕಾಲಿಲ್ಲದವನು.

೧೯. ಜಾಣ್ಮೆ=ಚಾತುರ್ಯ. ಇನಿಸುಳಿಯದೆ=ತುಸುಹೊತ್ತಾದರೂ ನಿಲ್ಲದೆ. ಅನುಕರಿಸಿ= ಕೈಕೊಂಡು, ಅಂಗೀಕರಿಸಿ

೨೦. ಮನವಾರೆ=ಬಗೆ ತೀರುವ ಹಾಗೆ. ಮನುಚರಿತ=ಧರ್ಮಾಚರಣೆಯುಳ್ಳವನು. ಮಣಿದು=ನಮಸ್ಕರಿಸಿ.

೨೧. ನಿರವಿಸಲ್ಕೆ=ಅಪ್ಪಣೆ ಕೊಡಿಸಲು, ಉಪದೇಶಮಾಡಲು. ಒಲಿದು=ಪ್ರೀತಿಸಿ= ಒಸೆದು. ಆವರಿಸಲು=ವ್ಯಾಪಿಸಲು. ಅವರ ಬೀಳ್ಕೊಂಡು=ಅವರಿಂದ ಅಪ್ಪಣೆ ತೆಗೆದುಕೊಂಡು.

೨೨. **ತೀರ್ಥಂಕರರ ಜನ್ಮಸ್ಥಾನಗಳು:**—೧ ವೃಷಭ—ಸಾಕೇತ. ೨ ಅಜಿತ— ಸಾಕೇತ. ೩ ಸಂಭವ—ಶ್ರಾವಸ್ತಿ. ೪ ಅಭಿನಂದನ—ಅಯೋಧ್ಯೆ. ೫ ಸುಮತಿ— ಸಾಕೇತ. ೬ ಪದ್ಮಪ್ರಭ—ಕೌಶಂಬೀ. ೭ ಸುಪಾರ್ಶ್ವ—ವಾರಣಾಸಿ. ೮ ಚಂದ್ರ ಪ್ರಭ—ಚಂದ್ರಪುರಿ. ೯ ಪುಷ್ಪದಂತ—ಕಾಕಂದೀ. ೧೦ ಶೀತಳ—ಭದ್ರಪುರ. ೧೧ ಶ್ರೇಯಾಂಸ—ಸಿಂಹಪುರ. ೧೨ ವಾಸುಪೂಜ್ಯ—ಚಂಪಾಪುರ. ೧೩ ವಿಮಲ— ಕಾಂಪಿಲ್ಯಾ. ೧೪ ಅನಂತನಾಥ—ಅಯೋಧ್ಯೆ. ೧೫ ಧರ್ಮನಾಥ—ರತ್ನಪುರ. ೧೬ ಶಾಂತಿನಾಥ—ಗಜಪುರ. ೧೭ ಕುಂಥುನಾಥ—ಗಜಪುರ. ೧೮ ಅರಹನಾಥ— ರಾಜಪುರ. ೧೯ ಮಲ್ಲಿನಾಥ—ಮಿಥಿಲಾನಗರ. ೨೦ ಮುನಿಸುವ್ರತ—ರಾಜಗೃಹ. ೨೧ ನಮಿನಾಥ—ಮಥುರಾಪುರ. ೨೨ ನೇಮಿನಾಥ—ದ್ವಾರಕಾಪುರ. ೨೩ ಪಾರ್ಶ್ವನಾಥ—ವಾರಾಣಸೀ. ೨೪ ಮಹಾವೀರ—ಕೌಂಡಣ್ಯಪುರ.

೨೪. ಕಂಪು=ವಾಸನೆ. ಒತ್ತಿನೊಳ್=ಹೊಂದಿಕೆಯಲ್ಲಿ. ಅಮರಿದ=ಸಂಘಟಿಸಿದ, ಕೂಡಿ ಸಿದ. ಪರಿಮಳಂಬೊರೆದ=ಪರಿಮಳವನ್ನು ಹೊತ್ತ. ಪಜ್ಜಳಿಪ=ಥಳಥಳಿಸುವ.

೨೫. ಸಾವಧಿಕವೋ ನಿರವಧಿಕವೋ=ಸ್ವಲ್ಪ ದಿನಕ್ಕೆ ಮಾತ್ರವೋ. ಎಂದೆಂದಿಗೂ ಇರುವುದೋ–ತಾತ್ಕಾಲಿಕವೋ– ನಿತ್ಯವೋ?

೨೬. ಅಲಗು=ಕತ್ತಿಯ ಬಾಯಿ. ಏರು = ಘಾಯ. ಉರವಣಿಸಿ=ಮೇಲೆ ಬಿದ್ದು. ನುಣ್ಣದೆ=ನುಂಗದೆ. ಶೃಂಖಲಾಬಂಧಂ = ಸಂಕೋಲೆಯ ಕಟ್ಟು; ಸರಪಳಿಯ ಬಿಗಿತ.

೨೭. ಅಗ್ಗಳ=ಶ್ರೇಷ್ಠ.

೨೮. ಪೊಳಲ್=ಪುರ, ಪಟ್ಟಣ. ಪೊಳಲರಿಕೆಯಲ್ಲಿ=ಪುರವೆಲ್ಲವರಿವಂತೆ.

೨೯. ದಕ್ಕಿತು=ಸಫಲವಾಯ್ತು, ಮಾತು ಉಳಿಯಿತು. ಚೆದುರತನಕೆ=ಜಾಣ್ಮೆಗೆ.

೩೦. ಕೋಡಗ=ಮಂಗ, ಕೋತಿ. ಕೈಸಾರ್ದ=ಕೈವಶವಾದ, ಕೈಗೆ ಬಂದ. ಒತ್ತರಿಸ ಬೇಡ=ಅಲಕ್ಷ್ಯಮಾಡಬೇಡ, ಅಸಡ್ಡೆಮಾಡದಿರು. ಕಿವುಡುಗೇಳುತ್ತ=ಕೇಳಿಯೂ ಕಿವುಡನಂತೆ ಕೇಳದೆ, ಅಲಕ್ಷ್ಯಮಾಡಿ.

೩೧. ಅಟಮಟವ=ಮೋಸವನ್ನು, ವಂಚನೆಯನ್ನು. ಬೆನ್ನೊಳೆಯ್ದಿ=ಬೆನ್ನಟ್ಟಿ ಬಂದು.

೩೨. ಉಮ್ಮಳಿಕೆ=ಚಿಂತೆ. ಏರುಮಾರು=ಹೆಚ್ಚು ಕುಂದು. ಅಯಿಲಂ=ಕೆಟ್ಟನಡತೆ. ಒತ್ತು= ಬಲಾತ್ಕಾರ. ಜೊತ್ತು=ಕಪಟತನ, ಮೋಸ. ಆರಡಿ=ತೊಂದರೆ. ತೊಂಡುತೊಳ ಸು=ಮಾತಿನ ಸುತ್ತು, ಅಸಂಗತವಾದ ಮಾತು. ಎಕ್ಕಸಿಕ್ಕ=ವ್ಯತ್ಯಸ್ತ. ಜೂದು= ಜೂಜು=ದ್ಯೂತ. ಲಂಡುಬಂಡು=ಪುಂಡಾಟ, ಪೋಕರಿತನ.

೩೪. ಕನೆ=( ಕನ್ಯಾ ) ಮಗಳೇ! ಅನ್ನೆವರ=ಅವರೆಗೂ. ಓಜೆಯಿಂ=ಪ್ರೌಢಿಯಿಂದ.

೩೬. ಎಲ್ಲವಕ್ಕೆ+ಇದೆ=ಕೆಲವಕ್ಕೆ ಹಲವಕ್ಕೆ ಎಂಬಂತೆ ಎಲ್ಲವರ್ಕ್ಕೆ, ಎಂಬ ರೂಪವೂ ಇರುವಂತೆ ಕಾಣಬರುತ್ತದೆ. ತೀವಿದ=ತುಂಬಿದ. ಚತುಸ್ಸಂಘ=ನಾಲ್ಕು ಸಂಘದವ ರು? ( ಋಷಿ, ಆರ್ಯಿಕಾ, ಶ್ರಾವಕ, ಶ್ರಾವಕಿ ).

೩೭. ಹದಕೆ=ರೀತಿಗೆ, ಪಾಡಿಗೆ. ತರಿದು=ಕತ್ತರಿಸಿ, ಕೊರೆದು=ಖಂಡಿಸಿ, ಅರೆದವರ್ಗೆ= ತೇದವರಿಗೆ. ಬೆಲೆಗೊಂಡವರ್ಗೆ=ಬೆಲೆಗೊಟ್ಟು ಕೊಂಡವರಿಗೆ.

೩೮. ಒಲೆಯುತ=ತೂಗುತ್ತ. ಚೆಲ್ವ=ರಮಣೀಯತೆ; ಜವ್ವನ=ಯೌವನ, ಹರಯ; ಸೊಬಗು=ಸೊಗಸು, ಅಂದ. ಕೊಂಡಾಡುತ್ತ=ಹೊಗಳುತ್ತ.

೩೯. ಎತ್ತಾನುಂ ಒಂದುದಿನಂ ಅಗಲಿ ಕೂಡಿದಂ ಆದೊಡೆ=ಎಲ್ಲಿಯಾದರೂ ( ಎಂದಾ ದರೂ ) ಒಂದು ದಿನ ಬಿಟ್ಟಿದ್ದು ಕೂಡಿದವನಾದರೆ. ಎತ್ತಣದು ಬದುಕು=ಬಾಳು ಎಲ್ಲಿಯದು? ( ಇಲ್ಲವೇ ಇಲ್ಲವೆಂದರ್ಥ. ) ಆವಪ್ರಕಾರದಿಂ=ಆವ ರೀತಿಯಿಂದಾ ದರೂ. ಇವಳಾ=ಇವಳನ್ನು.

೪೦. ಹತಿಸುವ ಎಣಿಕೆಯಿಂ ಎಣಿಸಿ=ಕೊಲ್ಲುವ ಬಗೆಯನ್ನು ಬಗೆದು. ಬಲಿದು=ಬಲ ಪಡಿಸಿ.

೪೧. ಏನೆಂದು ಬಣ್ಣಿಸುವೆನು=ಏನೆಂದು ವರ್ಣಿಸಲಿ; ( ಹೊಗಳಲಿಕ್ಕೆ ಸಮರ್ಥನಲ್ಲ ವೆಂದರ್ಥ ).

೪೨. ಸಲೆ=ಚೆನ್ನಾಗಿ. ( ಹಳಗನ್ನಡದಲ್ಲಿ ನಿತ್ಯವೂ ಎಂದರ್ಥವಿದ್ದಿರಬೇಕು ). ಸೂಡು= ಹೂಮಾಲೆಯನ್ನು ಹಾಕುವಲ್ಲಿಯೂ, ಹೂವನ್ನು ಮುಡಿಸುವಲ್ಲಿಯೂ ಈ ಕ್ರಿಯಾ ಪದವನ್ನು ಪ್ರಯೋಗಿಸುವರು. ಅಲರ=ಹೂವಿನ. ಎಡ್ಡವಾಯ್ತು=ರಮ್ಯವಾಗಿತ್ತು.

೪೩. ಥಾಳೆಯರ್=ದುಷ್ಟಸ್ತ್ರೀಯರು. ಇರ್ವರಂ=ಇಬ್ಬರನ್ನು.

೪೪. ಮುಡಿಗೆ=ಶಿರಸ್ಸಿಗೆ, ಮುಡಿ=ಧರಿಯಿಸು. ಮುಗ್ಗಿರಿದು=ಮುಗ್ಗರಿಸಿ; ಕೆಡೆಯಲು= ಬೀಳಲು.

೪೫. ಬೆಸಗೊಂಡೊಡೆ=ಕೇಳಲು.

೪೬. ಪೊರೆಗೇಳಿ=ಕರುಣದ ಶಬ್ದವನ್ನು ಕೇಳಿ. ನಡೆತಂದು=ಬಂದು. ಇಂತಪ್ಪ=ಇಂತ ಹ=ಇಂಥ. ಒಂದಿನಿಸು ಬಿಡವು ಇಲ್ಲದಿರ್ಪವರ್=( ದಯೆಯೇ ಮೂಲವಾದ ಧರ್ಮವಾಗಿ ಉಳ್ಳ ಜೈನಧರ್ಮದೊಳಗೆ ಆಚರಿಸುತ್ತ ) ಒಂದು ತುಸವಾದರೂ ತೆರಪಿಲ್ಲದೆ ( ಅವಕಾಶವಿಲ್ಲದೆ ) ಇರುವವರು.

೪೭. ಕಂದರ್ಪವಿಜಯಗೆ=ಮದನವಿಜಯನಾದ ಶ್ರೀಜಿನೇಶ್ವರನಿಗೆ. ಹರಿತಂದುದಂ= ಓಡಿಬಂದುದನ್ನು.

೪೮. ಕರಡಿಗೆ=ಸಂಪುಟ. ಒತ್ತಿನೊಳಗೆ=ಪಕ್ಕದಲ್ಲಿ.

೪೯. ಕಲ್ಲನೆಚ್ಚಾವಿಂಟಿ=ಕಲ್ಲನ್ನು ಎಸೆದ ಆ ದಿಣ್ಣೆ.

೫೦. ಅಪರಂಜಿಯೊಡವೆರೆದ=ಒಳ್ಳೆಯ ಚಿನ್ನದೊಡನೆ ಕೂಡಿದ. ತಳುವದೇ=ತಡಮಾಡ ದೆ, ಫಕ್ಕನೆ. ಒಳವರಿದ=ಒಳಗೆ ಹರಿದ.

೫೧. ಪೀರಿ=ಕುಡಿದು. ಬಡಮಾಳ್ಪ=ಕ್ಷೀಣಮಾಡುವ; ಹೆಚ್ಚುಗೆಯಮಾಳ್ಪ=ವರ್ಧಿಸುವ. ಮೆರೆದು=ಪ್ರಕಟಿಸಿ. ಅನ್ನೆಯದಿ=ಅನ್ಯಾಯದಿಂದ.

೫೨. ಕೊಂಡಾಡಿ=ಹೊಗಳಿ. ಪಲಸೂಳ್=ಹಲವು ಬಾರಿ. ಸಂದಣಿಸಿ=ಗುಂಪುಗೂಡಿ.

೫೩. ಎಯ್ತಂದು=ಹತ್ತಿರಕ್ಕೆ ಬಂದು. ಕಾಮಲತೆ + ಅರಸು + ಅರಿವ ತೆರದಿಂ + ಎಳ್ದ ಳು ( ಎದ್ದಳು ). ಕಂಡ=ಕಂಡೆಯಾ.

೫೪. ತಂದಲ್=ವೃಷ್ಟಿ.

೫೫. ಓಸರಿಸದೆ=ಅತ್ತಿತ್ತ ಸರಿಯದೆ, ಬೇರೆಡೆಯಲ್ಲಿ ವ್ಯಸನಿಕ್ಕದೆ.

೫೬. ಕೆಲರ್=ಕೆಲವರು.

೫೭. ಬಣ್ಣವಣ್ಣಿಗೆಯನುಡಿ=ಚೆಂದಕ್ಕೆ ಹೇಳಿದ ಮಾತು. ಕುಕ್ಕಿದತೆರದಿ=ತಿವಿದ ಹಾಗೆ. ಲಂಡೆ=ಲವುಡಿ. ಬರಲ=ಪೊರಕೆಯನ್ನು. ಸೆರೆ=ಹೆಚ್ಚಾಗಿ, ಬಹಳವಾಗಿ.

೫೯. ರಿಪುದುಗರ=ರಿಪುಡರ. ಮನನಿತ್ತನು=ಮೆಚ್ಚಿದನು.

---

## ಏಳನೆಯ ಸಂಧಿ.

೧. ನಿವೇಶ=ಮನೆ. ಬಳಸಿನೊಳು=ಸುತ್ತಲೂ. ಎಸೆಯಲ್=ಶೋಭಿಸಲು. ಮತ್ತಕಾಶಿನಿ=ಪ್ರಮದೆ, ಹೆಂಗಸು. ಅರಸುಗೆಯ್ಯುತಿಹನು=ರಾಜ್ಯಪರಿಪಾಲನೆ ಮಾಡುತ್ತಿರುವನು.

೨. ಆತಗೆ=ಆತನಿಗೆ.

೩. ತನುವಿನಿಂದೆ + ಅಸುವಬೇರ್ಕೆಯ್ದು=ಶರೀರದಿಂದ ಜೀವವನ್ನು ಬೇರೆಯಾಗಿ ಮಾಡಿ. ತನ್ನಿಂತನುವಂ ಬೇರ್ಕೆಯ್ದು, ಮನಮಂ ಮುಂದಿಕ್ಕಿ...ಎಂಬಿವು ಇವೇ ಅರ್ಥ. ಕಾಯೋತ್ಸರ್ಗಮೆಂಬುದೆ ಆರನೆಯ ಬಾಹ್ಯತಪೋನುಷ್ಠಾನ. ಇದರಲ್ಲಿ—

**ಬಿಸಿಲೆಸೆವ ಜೊನ್ನಮರ್ಕನೆ।**
**ಸಸಿ ದಿವಸಮೆ ರಾತ್ರಿಯಾದುದೆನೆ ಕಲ್ಮೆಲೆಯೊಳ್ ॥**
**ಮಿಸುಕದೆ ಶಾಂತರಸಂ ಮಾ।**
**ನಸದೊಳ್ ತಣ್ಮಲೆಯೆ ನೆಲಸಿದಂ ಯೋಗೀಂದ್ರಂ ॥** ಚಂದ್ರ–XI. 13.

೪. ಬಕ್ಕೆ=ಹಲಸು. ತಳಿರ್=ಚಿಗುರು, ನನೆ=ಹೂ; ಪಚ್ಚೆಗಾಯ್=ಹಸಿಗಾಯಿ; ದೋರೆವಣ್=ಇನ್ನೂ ಮಾಗದ ಹಣ್ಣು. ಹೀಗಾಗುವುದು ಮುನಿಗಳ ಪ್ರಭಾವದಿಂದ.

೫. ಅರೆತ=ಕಾಣಿಸದೆ ಹೋದ, ಬತ್ತಿದ. ಅಲರೇರಿದುವು=ಹೂ ಬಿಟ್ಟುವು, ಪುಷ್ಪಿಸಿದುವು. ತೆಂಕಣ+ಆಸೆಯಿಂ=ದಕ್ಷಿಣದಿಕ್ಕಿನಿಂದ. ತಣ್ಪುವೆರಸಿ=ಶೈತ್ಯವನ್ನು ಕೂಡಿಕೊಂಡು=ತಣ್ಣತಣ್ಣನೆ. ಮೆತ್ತಮೆತ್ತ=ಮೆಲ್ಲಮೆಲ್ಲನೆ. ಈಂಚರಂ=ಮಧುರವಾದ ಸ್ವರವು ( ಇನಿದು + ಸರಂ ). ಕಂತುವಂ=ಮನ್ಮಥನನ್ನು. ಪುಗಲ್ಪುಗಲ್=ಒಳಗೆ ಹೋಗಬೇಡ, ಹೋಗಬೇಡ ಎಂದು ಹೇಳುವಂತೆ ಶಬ್ದಮಾಡಿದುವು. ಊದಿದುದು=ತೀಡಿತು, ಸುಳಿದುದು.

೬. ಬನವಪೊರಮಟ್ಟು=( ಹೊಸಗನ್ನಡದಲ್ಲಿ ) ಬನದಿಂದ ಹೊರಟು.
ಎಂಟುತೆರದ ಅರ್ಚನಾದ್ರವ್ಯ=ಜಲ, ಗಂಧ, ಅಕ್ಷತೆ, ಪುಷ್ಪ, ಚರು, ದೀಪ, ಧೂಪ, ಫಲ.

೭. ಇಲ್ಲಿ **ನವವಿಧ ಪುಣ್ಯವನ್ನೂ**, ದಾತೃವಿನ **ಏಳು ಗುಣಗಳನ್ನೂ** ಕವಿ ಹೇಳಿದ್ದಾನೆ.

**ಪಡಿಗಹಣ ಮುಚ್ಚಟ್ಠಾಣಂ ಪಾದೋದಯಮಚ್ಚಣಂ ಚ ಪಣಮಂಚ**
**ಮಣವಯಣಕಾಯಸುದ್ಧೀ ಏಸಣಸುದ್ಧೀಯ ನವವಿಹಂ ಪುಣ್ಣಂ**
**ಸದ್ಧಾ ಭಗತೀ ತುಟ್ಠೀ ವಿಣ್ಣಾಮಲುದ್ಧಯಾ ಖಮಾ ಸತ್ತೀ**
**ಜತ್ಥೇದೇ ಸತ್ತಗುಣಾ ತಂ ದಾಯಾರಂ ಪಸಂ ಸಂತಿ.**

೮. ಮನದೆಗೊಂಡು=ವಿಶ್ವಾಸಿಸಿ.

## ದಶವಿಧಮುಪ್ಪ ದಾನಗಳು.

೯. ಮನವಾರೆ=ಮನದಣಿವಂತೆ. ಈ ಅಚ್ಚರಿಯ=ಈ ಆಶ್ಚರ್ಯ ಪಂಚಕವನ್ನು. ಕಂಡುದಿಲ್ಲ+ಎನೆ=(ಎಂದು ಸೋಮಶರ್ಮನೆಂಬ ಮಂತ್ರಿ ಸಮಾಧಿಗುಪ್ತಾಚಾರ್ಯರಿಗೆ ಹೇಳಲು).

೧೧. ಹದಿನೆಂಟುದೋಷಂ ಪೊರ್ದದ=ಸೋಕದ (ಹೊಂದದ).

## ಪಂಚಾಣು ವ್ರತವನ್ನು ಕೈಕೊಂಡು.

೧೨. ಪಂಚೇಂದ್ರಿಯಂಗಳು=ಶಬ್ದ, ಸ್ಪರ್ಶ, ರೂಪ, ರಸ, ಗಂಧ. ಈ ಪದ್ಯದಲ್ಲಿ ನವನೋಕಷಾಯಂಗಳನ್ನೂ ಚತುಸ್ಸಂಜ್ವಲನಗಳನ್ನೂ ಬೆರಸಿ ಹೇಳಿದೆ.

೧೩. ಮೂರು ತೆರದ ಪಾತ್ರಗಳನ್ನು ವಿವರಿಸಿಯಾಯ್ತು—ಉತ್ತಮ ಪಾತ್ರವು—ಮುನಿಗಳು, ಮಧ್ಯಮಪಾತ್ರ-ಸಚ್ಚಾರಿತ್ರದ ಶ್ರಾವಕರು, ಜಘನ್ಯಪಾತ್ರ-ದರ್ಶನಿಕರು.

೧೪. ಲಾಲಿಸು=ಪ್ರೀತಿಯಿಂದ ಕೇಳು.

೧೫. ತನ್ನ ಕೀರ್ತಿಗೆ ಈ ಬ್ರಹ್ಮಾಂಡವೆಲ್ಲವನ್ನೂ ಹಕ್ಕಾಗಿಸಿ ಓಜೆಯಿಂ=ಪ್ರೌಢಿಯಿಂದ.

೧೬. ಇಂದುವರಂ+ಎನುತ=ಈ ವರೆಗೂ ಎಂದು.

೧೭. ಹರಿದಾಳಿಯೊಳ್=ಮುತ್ತಿಗೆಯಲ್ಲಿ. ದೂಳಿಗೋಂಟೆಯುಗೊಂಡು—ಕೋಟೆಯನ್ನು ಧೂಳೀಪಟವಾಗುವಂತೆ ಮುತ್ತಿಗೆ ಹಾಕಿ ವಶಮಾಡಿಕೊಂಡು. ಬಾಳ್ದಲೆವಿಡಿದು=ಜೀವ ಸಹಿತ ತಲೆಯನ್ನು ಕತ್ತರಿಸಿ ತೆಗೆದುಕೊಂಡು.

೧೮. ಗೊಸಗೆಯಂ=ಘೋಷಣವನ್ನು, ಗದ್ದಲವನ್ನು.

೧೯. ಪೊತ್ತ=ತಂಡ=ಸಂದಣಿ= ನೆರವಿ=ಸಂಗಡ= ಕೂಟ= ಒಗ್ಗು=ಜಂಗುಳಿ= ಗೊಂದಣಂ=ಇವೆಲ್ಲವೂ ಸಮೂಹಾರ್ಥದ ಕನ್ನಡದ ಮಾತುಗಳು. ಇವನ್ನು ಸೇರಿಸಿರುವ ಕವಿಯ ಚಮತ್ಕಾರವನ್ನು ನೋಡಿರಿ. ಬೆಸಲೆಯಾದಂತೆ=ಪ್ರಸವಿಸಿದಂತೆ. ನೆರೆಯ=ಕೂಡಲು.

೨೧. ಅನುಗೆಯ್ಸಿದಂ=ಏರ್ಪಡಿಸಿದನು. ಹರಕೆಗಳಂ=ಆಶೀರ್ವಾದಗಳನ್ನು. ಅಂತು=ಪಡೆದು. ಅಂತು+ಇಂತುಟು+ಎಂದು+ಊಹಿಸಲ್ಬಾರದ=ಅಷ್ಟಿಷ್ಟೆಂದು ಊಹಿಸಲಿಕ್ಕೆ ಅಸಾಧ್ಯವಾದ.

೨೨. ಆರೋಗಣೆಯ ಮಾಡುತಿರ್ದ್ದರ್=ಊಟಮಾಡುತ್ತಿದ್ದರು. ಮುಂದಿನ ಪದ್ಯಗಳಲ್ಲಿ ಮಾಡಿರುವ ಊಟದ ವರ್ಣನೆ ಸ್ವಾರಸ್ಯವಾಗಿದೆ. ಓದಿ ಆನಂದಿಸಬಹುದು.

೩೦. ಹೊದೆವು=ಹೊದಿಕೆ. ದಂದುಗ=ಕಷ್ಟ.

೩೧. ನಿಚ್ಚಳಿಸಲ್ವಡೆಯದೆ=ಅಡುಗೆ ಮಾಡಲಿಕ್ಕೆ ಅನುಕೂಲ್ಯವಿಲ್ಲದೆ. ಪೊತ್ತಂ ಸಾರುತಿರಲು=ವೇಳೆಯನ್ನು ನಿರೀಕ್ಷಿಸುತ್ತಿರಲು.

[illegible] ಚರಿಗೆ=ಚರ್ಯೆ. ಕೊನೆವರಿಯೆ=ಕಡೆವರೆಗೂ ಹಬ್ಬಲು.

೩೩. ಮನವೊಲ್ತು—ಮನಃಪೂರ್ವಕವಾದ ವಿಶ್ವಾಸದಿಂದ.

೩೪. ಮಳೆ—ಹನಿ—ಸೋನೆ—ತಂದಲ್ ಪನಿ ಬೆಳ್ಸರಿ—ಇವು ಪರ್ಯಾಯ ಪದಗಳು.

ಅಲಿಕಲ್=ಅನೆಕಲ್ಲು. ಸೂಸುತಿರೆ=ಬೀಳುತ್ತಿರಲು. ಇವು ಉತ್ತಮ ಪಾತ್ರದಾನದ ಮಹಿಮೆಯು ಸದ್ಯಃಫಲಗಳು.

೩೫. ಉಲಿಯುತ್ತಿರ್ದ್ದರು=ಹೇಳುತ್ತಿದ್ದರು.

೩೬. ಲಂಡತನ=ಪೋಕರಿತನ, ಪುಂಡಾಟ. ದಡದಡಿಸುತ್ತೆಯ್ತಂದು=ಅವಸರದಿಂದ ಬಂದು. ತಂಡ ತಂಡದಿ=ರಾಶಿ ರಾಶಿಯಾಗಿ. ಅಂಜದೇ=ಹೆದರದೇ.

೩೭. ತನಿಗೆಂಡವಾದುವು=ಉರಿವ ಕೆಂಡಗಳಾದುವು. ಬೆದರುವಂದದಿಂ=ಹೆದರುವ ಹಾಗೆ.

೩೮. ಭವಂ + ಎಂದು + ಎಂಬ + ವನಮಂ+ ಅಳುರ್ವ+ಅಗ್ನಿ. ( ಹಿಂದೆ ಮಾಡಿದಂತಹ ಕರ್ಮದಾಧೀನದಿಂದ ಪಡೆದ ) ಸಂಸಾರ ( ಜನ್ಮ )ವೆಂದೆನಿಸುವ ವನವನ್ನು ವ್ಯಾಪಿಸುವ ( ದಾವಾಗ್ನಿ ) ಕಾಳ್ಕಿಚ್ಚು. ಸುರಹಿದ=ಹೊತ್ತಿಸಿದ.

೩೯. ಸೋವಿಲೊಳು=ಮಡಿಲಲ್ಲಿ.

೪೦. ರತ್ನತ್ರಯಬಿತ್ತಂ=ಸಮ್ಯಗ್ದರ್ಶನಜ್ಞಾನಚಾರಿತ್ರಗಳೆಂಬ ರತ್ನತ್ರಯದ ಬೀಜವನ್ನು ಮೊತ್ತಂ=ರಾಶಿ, ಸಮೂಹ. ಒಪ್ಪುತಿರೆ=ಹೊಳೆಯುತ್ತಿರಲು. ವಿಸ್ಮಯಂಬೆತ್ತು= ಆಶ್ಚರ್ಯವನ್ನು ಪಡೆದು.

೪೧. ಇತ್ತೊಡೆ=ಕೊಟ್ಟರೆ.

೪೨. ಕಳ್ತೆ=ಕರ್ತೆ=ಕತ್ತೆ. ಕಾಚಶಿಲೆ=ಗಾಜಿನಕಲ್ಲು. ಬೆಲೆಮಾಳ್ಪ=ಮಾರುವ. ಮಾರುಂಗೊಡುವ=ಬೆಲೆಗೆಕೊಡುವ, ಮಾರುಹೋಗುವಂತೆ ಕೊಡುವ. ಕಡುಹೆಡ್ಡರು= ದೊಡ್ಡ ಧಡ್ಡರು, ಅವಿವೇಕಿಗಳು.

೪೩. ಓಸರಂಮಾಡದೆ=ಅತ್ಯಾದರದಿಂ. ಸರಿಯಂ=ಸಮಭಾಗವನ್ನು. ಏಸೇಸುಪರಿ= ಎಷ್ಟೆಷ್ಟು ಬಗೆ—ನನಗೆ ಉದಾಸೀನವನ್ನು ( ಅಸಡ್ಡೆಯನ್ನು ಮಾಡಲಿಕ್ಕೆ ಕಾರಣವೇನು ಎಂಬುದನ್ನು ಅಪ್ಪಣೆಕೊಡಿಸಬೇಕು.

೪೪. ಚೆದುರರ್ಗೆ=ಜಾಣರಿಗೆ. ಭಾವಕರ್=ಭವ್ಯರು.

೪೫. ಚತುರ್ವಿಧದ ದಾನಗಳನ್ನು ಕವಿ ಹೇಳುತ್ತಾನೆ.

೪೬. ಆವರಿಸಿಕೊಂಡು=ಹೊಂದಿಕೊಂಡು.

೪೭. ಶ್ರುತದಿಂದ=ಶಾಸ್ತ್ರದಿಂದ.

**ಪಂಚಾಸ್ತಿಕಾಯ:**—ಧರ್ಮ, ಅಧರ್ಮ, ಕಾಲ, ಆಕಾಶ, ಪುದ್ಗಲ ಭೇದಗಳಿಂದ ಜೀವಂ ಪಂಚಪ್ರಕಾರಮಕ್ಕುಂ.

**ಷಡ್ದ್ರವ್ಯಗಳು:**—ಪೃಥಿವಿ, ಅಪ್ಪು, ವಾಯು, ತೇಜಸ್ಸು, ಕಾಲ, ಆಕಾಶ.

**ಸಪ್ತತತ್ವಗಳು:**—ಜೀವಾಜೀವಾಸ್ರವಬಂಧಸಂವರನಿರ್ಜರಾಮೋಕ್ಷ.

**ನವವಿಧಪದಾರ್ಥಗಳು:**—ಜೀವ, ಅಜೀವ, ಆಸ್ರವ, ಬಂಧ, ಪುಣ್ಯ, ಪಾಪ, ಸಂವರ, ನಿರ್ಜರೆ, ಮೋಕ್ಷ.

೪೯. ಒಸೆದು ಕೊಂಡೊಡೆ=ವಿಶ್ವಾಸದಿಂದ ಸೇವಿಸಲು.

೫೦. ಖ್ಯಾತಿಗೆ ನಿಮಿತ್ತಂ=ದಾನಮಾಡಿದೆನೆಂಬ ಬರಿಯ ಪ್ರಖ್ಯಾತಿಗೆಂದು-ಡಂಭಕಕ್ಕಾಗಿ. ಕರೆದೊಡೆ=ಸುರಿದರೆ.

೫೧. ಎಡಂವಿ=ಎಡವಿ.

೫೨. ಉರೆ=ಹೆಚ್ಚಾಗಿ.

೫೩. ಕೈಕೊಂಡು=ಅಂಗೀಕರಿಸಿ.

೫೪. ಈ ಜನ್ಮವುಳ್ಳನ್ನ=ಈ ಜನ್ಮವಿರುವವರೆಗೂ.

೫೫. ಸಮೆದ=ಮಾಡಿದ. ಕೆಯ್ದುಂ=ಆಯುಧವನ್ನು. ಕೆಯ್ಗಿಗೆ + ಒಂದು + ಒರೆಯುಂ= ಪೋಹರಿಸಿ=ಮುದ್ರಿಸಿ.

೫೬. ಕೊಂಡೆಯರ್=ಹಿಸುಣರು, ಚಾಡಿಕೋರರು.

೫೭. ಅಲೆವ=ಚಲಿಸುವ. ಸಲೆ ಬೆದರಿ=ಬಹಳವಾಗಿ ಅಂಜಿ. ಪಿಸುಣರಿಂ=ಚಾಡಿಗಾರ ರಿಂದ. ಉಬ್ಬಸಂ=ದುಃಖ, ಚಿಂತೆ. ಸೊಡರ್=ದೀಪ.

೫೮. ಎಸಕಮೆ=ಉದ್ಯೋಗವೇ. ಕೋಶದಿಂ=ಒರೆಯಿಂದ, ಉರ್ಚೆ=ಕಿತ್ತು, ಎಳೆದು.

೫೯. ಮಾಮಸಕದಿಂ=ಅತಿರೋಷದಿಂದ. ಕುಡಿಮಿಂಚೋ=ಬಳ್ಳಿಯಂತಿರುವ ಮಿಂಚೋ ವಿದ್ಯುಲ್ಲತೆಯೋ? ಮುಸುಕಿದ=ಮುಚ್ಚಿದ; ಹೆರೆಯಾ=(ಹಾವಿನ ಮೇಲಿರುವ ಸಣ್ಣ) ಚರ್ಮವನ್ನು. ಎಂಬ ಮಾಳ್ಕೆಯಿಂ=ಎಂಬ ರೀತಿಯಿಂದ. ಮಿಸುಗುವ= ಹೊಳೆವ. ನುಸುಳ್ದು=ನುಗ್ಗಿ ಬಂದು. ಕೂರಸಿ=ಹರತವಾದ ಕತ್ತಿ.

೬೦. ಒಸರಿಸದೇ=ಒತ್ತರಿಸದೆ, ಪಾಲುಮಾರದೆ, ತಿರಸ್ಕರಿಸದೆ. ಹುಸಿದ=ಸುಳ್ಳನ್ನು ಹೇಳಿದ. ಘಾಸಿಮಾಡಿಸಬೇಡ=ತೊಂದರೆಗೊಳಿಸಬೇಡ, ಬಾಧಿಸಬೇಡ.

೬೧. ಈ ಮರದ ಕರವಾಳು=ಈ ಕಟ್ಟಿಗೆಯಿಂದ ಮಾಡಿದ ಕತ್ತಿ. ಕರವಾಳು=ಕರವಾರಿ.

೬೨. ಅಕ್ಕಜಂ=ಆಶ್ಚರ್ಯ. ಸಗ್ಗಿಗರಿಂ ಒದವೆ=(ಸ್ವರ್ಗದವರಿಂದ) ದೇವತೆಗಳಿಂದ ಒದಗಲು. ಅಗ್ಗಳಂ=ಅಧಿಕ, ಶ್ರೇಷ್ಠ.

೬೩. ಚೆಚ್ಚಿಲ+ಅಣುಗ=ಮೊಲೆ (ಹಾಲು ಕುಡಿವ) ಮಗ. ಅಣುಗು=ಪ್ರೀತಿ, ವಿಶ್ವಾಸ. ಕಟ್ಟರಸುಗಳ್=ಮಹಾರಾಜರುಗಳು. ಮನಮುಟ್ಟೆ=ಮನಃಪೂರ್ವಕ ವಾಗಿ. ಒಲಿದು=ಪ್ರೀತಿ. ಒಂದಿ=ಕೂಡಿ.

೬೪. ಅರುವರುಂ=ಆರುಮಂದಿಯೂ.

೬೫. ಬಾಯ್ಗರೆವ=ಹೇಳುವ.

೬೬. ನೊಣ=ನೊಳ. ಒಂದಿಸದೆ=ಸೇರಲೀಯದೆ.

---

## ಎಂಟನೆಯ ಸಂಧಿ.

೨. ಕಿರುಗೂಸಿನೊಳ್=ಚಿಕ್ಕ ಹುಡುಗಿಯಾಗಿದ್ದಂದು. ಪಾಪದ+ಎಸದಿಂದ=ಪಾಪದ ಕೆಲಸದಿಂದ, ಪಾಪದ ದೆಸೆಯಿಂದ. ಪೆರತೊಂದು ತಾಣದೊಳ್=ಬೇರೊಂದು ಸ್ಥಳದಲ್ಲಿ.

೩. ಅವರಂದದಿಂ=ಅವರಿಗೆ ಕೊಟ್ಟಹಾಗೆ.

೪. ಕರಮೊಳ್ಳಿತಾಯ್ತು=ಬಹಳ ಚೆನ್ನಾಯ್ತು. ಅಂಡಲೆ=ಬಾಧೆ.

೬. ಹೊದ್ದಿದ=ಸೇರಿದ, ಕೂಡಿದ. ಸೋಂಕಲೊಡನೆ=ಮುಟ್ಟಿದಾಕ್ಷಣವೇ.

೭. ಅಲಸದೆ=ಆಲಸ್ಯವಿಲ್ಲದೆ.

೮. ತುಳುಕು=ತುಳ್ಕು=ಚಿಮಿಕಿಸು. ( ಇಲ್ಲಿ ತುಂಬು ). ಉಚ್ಚಳಿಸಿದುದು=ಹೊರಗೆ ಚೀಸಿತು; ಹೊರಡಿಸಿತು. ತನಿಗಂಪಂ=ಪರಿಮಳ. ನುಣ್ಪು=ಮಾರ್ದವ.

೯. ಬಯಲು ಮಾಳ್ಪ=ವ್ಯರ್ಥಮಾಡುವ=ತಿರಸ್ಕರಿಸುವ. ಏಳ್ಗೆಯಂ=ಆಧಿಕ್ಯವನ್ನು. ಗಾರುಗತಮಾಳ್ಪ=ಪಟಾಪಂಚಮಾಡುವ=ಹೀಯಾಳಿಸುವ. ಇರವು=ಸ್ಥಿತಿ, ನೆಲೆ. ಹರಿಹಂಚುಮಾಡುವ=ಒಡೆದು ತುಂಡುಮಾಡುವ.

೧೦. ಗೆಂಡಿಕೆ? ಸಮೆದ=ಮಾಡಿದ, ನಿರ್ಮಿಸಿದ. ಒಬ್ಬುಳಿ=ಕೂಟ, ಸಮೂಹ. ಹಿಂಡು=ಹಿಳಿ.

೧೧. ಅಲವರಿಕೆ=ಬೇಸರ. ಅಲರ್ವಿಲ್ಲ=ಪುಷ್ಪಸಾಯಕ, ಮನ್ಮಥ.

೧೨. ತಳಿ=ಸೇಚನೆ.

೧೬. ಕೊಳ್ಕೊಡೆಯೆ?=ಕನ್ಯಾದಾನ ಪರಿಗ್ರಹದ ಸಂಬಂಧವೇ? ಬಯಲ ಹಮ್ಮು=ವ್ಯರ್ಥವಾದ ಅಹಂಕಾರ. ಸೊಮ್ಮಿನವನಲ್ಲ=ಪಾತ್ರನಲ್ಲ. ಸೊಮ್ಮೆಂದರೆ ಒಡವೆ, ಸ್ವತ್ತು. ಐಸಿರಿ=ಐಶ್ವರ್ಯ. ಸುಮ್ಮಾನ=ಗರ್ವ.

೧೭. ಹಿಂದಂ ಹಿಸಿಕಿನೋಳ್ಪರೇ=ಪೂರ್ವದ ಕುಲಾಚಾರಗಳನ್ನು ಕೂಲಂಕಷವಾಗಿ ವಿಚಾರಿಸಿ ನೋಡುವರೇ?

೧೮. ಹುರುಳಾಗದು=ಪದಾರ್ಥವಾಗದು, ಪ್ರಯೋಜನಕಾರಿಯಾಗಲಾರದು.

೧೯. ಒರೆಯಲ್=ಹೇಳಲು; ಹರಿ=ಸಿಂಹ.

೨೦. ಗದ್ದುಗೆ=ಸಿಂಹಾಸನ.

೨೧. ಒಚ್ಚೆಯಕ್ಕೆ=ಉಚ್ಚಾಭ್ರಯಕ್ಕೆ, ಶ್ರೇಯಸ್ಸಿಗೆ. ಮಚ್ಚರ=ಮತ್ಸರ. ಒಚ್ಚತಂ=ಉಚಿತವಾಗಿ.

೨೨. ಎದೆಗೆಟ್ಟ=ಕೆಟ್ಟಹೃದಯವುಳ್ಳ. ಕೇಣಕ್ಕೆ=ಮತ್ಸರಕ್ಕೆ. ನಾಣಳಿವುದು+ಇಂತು+ಇದರಿಂ+ಎಂಬುದಂ=ಲಜ್ಜೆ ಕೆಡುವುದು ಹೀಗೆ ಇದರಿಂದ ಎಂಬುದನ್ನು. ಊಣೆಯಮಂ=ನ್ಯೂನತೆ, ಕೊರತೆ. ಹೂಣಿ=ನಿಶ್ಚಯಿಸಿ. ಹಬ್ಬುವುದು=ವ್ಯಾಪಿಸುವುದು.

೨೫. ಪೊಲ್ಲಮುನಿಸಿಂದ=ಕೆಟ್ಟ ಸಿಟ್ಟಿನಿಂದ. ಮಾರ್ಮಲೆವರು=ಪ್ರತಿಭಟಿಸುವವರು; ಇದಿರುನಿಂತು ಯುದ್ಧಮಾಡುವವರು. ದಲ್ಲಾಳಿತನದಿಂದ=
ದಂಡುನಡೆದಂ=ಸೇನೆಯೊಡನೆ ನಡೆದನು. ಬಲ್ಲಿದಂ=ಬಲಿಷ್ಠ. ದಂಡಧರದಂಡು=ಯಮನ ದಂಡು.

೨೬. ತಂಡ=ಗುಂಪು. ಪೌಜು=ಸೇನೆ. ತೆರಪಿಲ್ಲ=ಎಡೆಯಿಲ್ಲ. ಸುರಿ=ಸಾಮರ್ಥ್ಯ; ಚಟವಟಿಕೆ, ಚಾಕಚಕ್ಯ. ನಾಡ=ನಾಡಿನ=ದೇಶದ. ಗಡಿವಾಡ=ಉಕ್ಕಡ.

೨೭. ಅರವೆ=ಕೊಳ. ತುರುಸೆರೆಯ ಹಿಡಿದು=ಗೋಗ್ರಹಣಮಾಡಿ. ಅರಯ್ಯದೆ=ಆಲೋಚಿಸದೆ. ಆರುಭಟೆ=ಅಬ್ಬರ.

೨೮. ಡೆಂಕಣಿ=ಧ್ವಜಸ್ತಂಭ. ಸಬಳ=ಈಟಿ. ಹೇರಿಟ್ಟಿ=ದೊಡ್ಡ ಈಟಿ. ದಸಿ=ಗೂಟ. ಸಾರಮಾರಿ= (?) ನೆಲಗುಮ್ಮು=ನೆಲವನ್ನು ದಮ್ಮಸುಮಾಡುವ ಆಯುಧ. ಹೇಳಿಗೆ=ಪತಾಕೆ. ಪೆಟಲ=ಪೆಟ್ಲು. ತಳಿ=ಮರದ ದೊಡ್ಡ ಕೊರಡು. ತೊಲೆ. ಸಂವರಣೆ=ಸನ್ನಾಹ, ಉರುವಣೆ. ಹುಲ್ಲದೊಂದೆ=ಹುಲ್ಲರಾಶಿ.

೨೯. ಸುತ್ತುವರಿದು=ಸುತ್ತಲೂ ಹರಿದು, ಓಡಿ. ಒದರ್ವ=ಘಟ್ಟಿಯಾಗಿ ಕೂಗಿ ಹೇಳುವ. ಬಿತ್ತರಂ=ಸಂ, ವಿಸ್ತಾರ.

೩೦. ಅಗಳ್=ಕಂದಕ. ಬದ್ದರ=ಆನೆ. ಡೆಗ್ಗೆ= ಸೇತುವನೊಟ್ಟಿ=ಸೇತುವೆಯನ್ನು ಕಟ್ಟಿ ಒಡ್ಡಿ. ನಿಚ್ಚಣಿಗೆ=ಏಣಿ. ಪಡಿಯುರರ=ಪ್ರತೀಹಾರರ. ಕಲಕಲ=ಕೋಳಾಹಳ ಧ್ವನಿ.

೩೧. ಸೀಸಕ=ತಲೆಯು ಡೌಳಿ. ಸವಗ=ಕವಚ. ತಿಟ್ಟಿ=ದಿಣ್ಣೆ. ಹರಿಗೆ=ಅಡ್ಡಣ, ಗುರಾಣಿ.

೩೨. ಬಲ್ಪಿಂದ=ಬಲಾತ್ಕಾರದಿಂದ. ದಸಿ=ಗೂಟ. ತೆಸೆ=ಪ್ರಾಕಾರ. ಡಾಳಿಡು=ಓಟವೋಡು.

೩೩. ಎಕ್ಕಟಿಗಳ್=ಏಕಾಂತದವರು; ಗುಟ್ಟಿನವರು. ಕೆಡೆವಂತೆ=ನೆಲಕ್ಕೆ ಬೀಳುವಂತೆ. ಜೋಲು=ನೇಲು=ನೇತಾಡು.

೩೪. ಗರವತಿಗೆ=ಗರವಟ್ಟಿಗೆ=ಸೂತ್ರ.

೩೫. ಸುರುಹಿ=ಸುರಿದು. ಸಾರಮಾರಿ= ಪೂಳುವಂತೆ=ಗುಳಿಯುನ್ನು ತುಂಬುವಂತೆ.

೩೬. ತುತ್ತುರುಂಬು=ತುರುಕು. ಅಂಗವಿಸು=ಅಪೇಕ್ಷಿಸು. ಹರಿಗೆಯಾಳ್ಗಳ್=ಗುರಾಣಿಯನ್ನು ಹಿಡಿದಾಳುಗಳು. ಒತ್ತಂಬರ=ಗಾಢಪ್ರವೇಶ. ಆಳ್ದನೊಳ್=ಅರಸನಲ್ಲಿ. ದಿಡ್ಡಿ=ಸಣ್ಣ ಬಾಗಿಲು (ರಹಸ್ಯಪ್ರವೇಶಕ್ಕೆ ಮಾಡಿದ್ದು). ಅರುತೆ=ಕೂಗುತ್ತ. ಓಸಳಿಕುಮಾಡದೆ=ಉಪೇಕ್ಷೆಮಾಡದೆ, ಉದಾಸೀನವಿಲ್ಲದೆ. ಕರುತ್ತು=ಹಿಂಸಿಸಿ. ಓಳಿ=ಗುಂಪು, ಸಮೂಹ.

೩೭. ಲಗ್ಗೆವರೆಗಳ್=ಪಟಹಾದಿವಾದ್ಯಗಳು. ನಿಬ್ಬರ=ನಿರ್ಭರ. ಕೋಂಟೆ ಕಾಳೆಗ=ಕೋಟೆಯ ಯುದ್ಧ.

೩೮. ತಲೆಸಳಿತು=ತಲೆ ಗಿರ್ರನೆ ತಿರುಗಿ; ಮೂರ್ಛೆವೋಗಿ. ಇಸುವಾಳುಗಳ್=ಗುಂಡು ಮೊದಲಾದುವನ್ನು ಪ್ರಯೋಗಿಸಿ ಬಿಡುವ ಆಳುಗಳು. ಪಸುಗೆಯ ಮಾಡಿಕೊಳುತ್ತಿದ್ದರು=ವರಿಸಿಕೊಳ್ಳುತ್ತಿದ್ದರು.

೩೯. ಅಗಳಂ ಹೂಡೆ=ಅಗಳನ್ನು ಮುಚ್ಚಲು. ತಾಗು=ಸಂಘಟ್ಟಿಸು. ನುಗ್ಗುವಡೆವಂತೆ=ಪುಡಿಪುಡಿಯಾಗುವಂತೆ.

೪೦. ತುಡುಕಲೆಂದು=ಬೇಗನೆ ಹಿಡಿಯಬೇಕೆಂದು. ಡೆಗ್ಗೆವರಂ= (?)

೪೧. ತತ್ತರಂ ತರಿಯಿಸಿಕೊಳುತ್ತ=ಛಿನ್ನಾಭಿನ್ನವಾಗಿ ತತ್ತರಿಸಿಕೊಳ್ಳುತ್ತ. ಹತ್ತೆ ಸಾರುವರಿಗೆ=ಹತ್ತಿರಕೆ ಬರುವವರಿಗೆ.

೪೨. ಕೊಟ್ಟಾ ಕೂಸು ಕುಲಕಿಲ್ಲ=ಕೊಟ್ಟ ಹೆಣ್ಣು ಕುಲಕ್ಕೆ ಹೊರಗು.

೪೩. ಕೇಣ=ಅಭಿಮಾನ, ಮತ್ಸರ. ಊಣೆಯುಂ=ನ್ಯೂನತೆ, ಕೊರತೆ; ಕುಂದು.

೪೪. ಕೆಂಗಣ್ಣಸಗಿ=ಕಣ್ಣು ಕೆಂಪಗಾಗುವಷ್ಟು ರೇಗಿ. ಕಡುಗಲಿ=ಕಗ್ಗಲಿ=ಅತಿವೀರ. ಜವನಂದದಿ=ಯಮನಂತೆ.

೪೫. ಬವರ=ಯುದ್ಧ. ಸೆರಗು ಬೆರಗು=ಅಭಿಮಾನ, ಅಂಜಿಕೆ. ತಲೆಹೋಕತನ=( ತಲೆ ಹೋದರೂ ತಿಳಿಯದಿರುವ ) ಅವಿವೇಕತನ. ಪವುಜು=ಫೌಜು=ಸೇನೆ. ಅಲವರಿಕೆ=ಆಶೆ ( ತನ್ನಲ್ಲಿ ). ಅದಟರು=ವೀರರು.

೪೬. ಲಗ್ಗೆಮಾಡುವವರು=ಹತ್ತುವ ಉದ್ಯೋಗದಲ್ಲಿರುವವರು. ಮೆಯ್ಗಾಪಿನಾಳ್ಗಳು= ಅಂಗರಕ್ಷಕರು. ಒತ್ತಂಬದಿಂದ=ಬಲಾತ್ಕಾರದಿಂದ. ಪಡೆ=ಸೇನೆ. ನಿಂದುನಿತ್ತರಿಸಬಾರದು=ನಿಲ್ಲಿಸಿ ನಿರ್ಧರಿಸಲಿಕ್ಕಾಗದು. ಒಡ್ಡಿದುದು=ಇದಿರಿಸಿ ನಿಂತಿತು. ತಳತಂತ್ರ=ಮೋಸ. ಮಾರ್ವಲ=ಶತ್ರುಸೇನೆ.

೪೭. ಕೆಕ್ಕಳಗೆರಳಿ=ಬಹಳವಾಗಿ ಕೋಪಗೊಂಡು. ಖಾಡಾಖಾಡಿ=ಮಲ್ಲಯುದ್ಧ.

೪೮. ಒಡ್ಡು=ಸಮೂಹ. ಹಿಂದ ಹಾರೈಸದೆ=ಹಿಂತಿರುಗಿ ನೋಡದೆ ( ಯುದ್ಧದಲ್ಲಿ ಹಿಂದೆ ನೋಡಿದರೆ ಶತ್ರುವಿಗೆ ಬೆನ್ನನ್ನು ತೋರಿಸಿದಂತಾಗುವದು-ಅದೇ ಪರಾಜಯ. )

೪೯. ಅಣಿ=ಪಡೆ, ದಳ. ಕೋಳಹೊಯ್ದು=ಕೊಳ್ಳೆಹೊಡೆದು, ಲೂಟಿಮಾಡಿ. ಒಡ್ಡಣ= ಸೈನ್ಯ. ಒಲ್ಲಯಿಸುವ=ಸೇವಿಸುವ, ಕೂಡುವ, ಸೇರುವ. ಅಣಿಯರಕೆ=ಸೊಗಸಿಗೆ. ಚೆಂಚೆಣಿಸಿ=ರೇಗಿ, ಕೋಪಗೊಂಡು. ಜಿನ್ನಣದಿಂ + ಅಸುಹೋಹ ಹೊತ್ತರಿಯದೆ=ಕೌಶಲ್ಯದಿಂದ ಪ್ರಾಣಹೋಗುವ ವೇಳೆಯನ್ನೂ ಅರಿಯದೆ.

೫೦. ದಬ್ಬುದಲೆಗೊಂಡು=ನೂಂಕಿಸಿಕೊಂಡು, ತಳ್ಳಿಸಿಕೊಂಡು. ಉಬ್ಬಸ=ಆಯಾಸ. ನಿಬ್ಬರದಿ=ನಿರ್ಭರದಿಂದ. ಕೆಬ್ಬೆವಣ್ಣಂ=ಕೆಂಪುಬಣ್ಣ. ಒಬ್ಬುಳಿ=ರಾಶಿ, ಕೊಂಡ= ಹೊಂಡ.

೫೧. ನಿತ್ತರಿಸಲಾರದೆ=ತಡೆಯಲಾರದೆ. ಚೆಲ್ಲಿಪಿಲ್ಲಿಯಾದುದು=ದೆಸೆದೆಸೆಗೆ ಚೆದುರಿತು. ತಲ್ಲಣಂ=ಭಯ. ತಕ್ಕಳಿದು=ಎದೆಗೆಟ್ಟು, ಸ್ನೇಹವು ಕಾಲೋಚಿತವಾದ ಕೆಲಸವನ್ನು ಮಾಡಲಾರದೆ. ಉದುಪು=ತಾಣ, ಬಲ. ಇರಿವ ಇರಿತಕೆ=ಕೊಲ್ಲುವ ಕೊಲೆಗೆ, ಮಾಡುತ್ತಿದ್ದ ಸಂಹಾರಕ್ಕೆ.

೫೨. ಓಲೈಸುವ=ಸೇವಿಸುವ. ಅದಟರ್=ಪರಾಕ್ರಮಶಾಲಿಗಳು. ಹುದುಗಿ=ಕೂಡಿಕೊಂಡು. ನೆಲನ್ + ಈದ ತೆರದಿ=ಭೂಮಿ ಪ್ರಸವಿಸಿದ ರೀತಿಯಲ್ಲಿ. ಬಿರಣಿ= ಕರ್ಷುರ, ಕುರ್ಳುರ.

೫೩. ಒತ್ತರಿಸು=ಆಕ್ರಮಿಸು. ಹುಡುಹಾವುತ್ತಿರ್ದ್ದರು=ಹುಡುಕಿ ಹಾರಾಡುತ್ತಿದ್ದರು.

೫೪. ದುರುದುಂಬಿತನ=ದುಷ್ಟತನ. ಕುಯಿಗುರಿಮಾಡಿ=ಕೊಯ್ಯಲಿಕ್ಕೆ ಸಿದ್ಧವಾಗಿರುವ ಕುರಿಯಂತೆ ಮಾಡಿ. ಗುರುಮಂತ್ರಗೊಂಡು=ದೀರ್ಘಾಲೋಚನೆ ಮಾಡಿ. ಗುಡ್ಡೆಣಿಕೆ=ವ್ಯರ್ಥಾಲೋಚನೆ.

೫೫. ಒತ್ತಂಬರ=ಅತಿರಭಸ, ವೇಗ.

೫೬. ನಂಟೆಯ್ದಿದವೊಲ್=ನೆಂಟರು ಬಂದಹಾಗೆ.

೫೮. ಕರುಮಾಡ=ನೆಲೆಮನಿ, ಉಪ್ಪರಿಗೆ. ಮೇಲ್ಕೆ ಲೆಯೊಳು=ಮೇಲ್ಕಟ್ಟಿನಲ್ಲಿ.

೫೯. ಸಜು ಕಂ=ಮೊಗ್ಗೆ, ಕುಟ್ಮಲ. ಅನುಗೊಳಿಸಿ=ಸಿಂಗರಿಸಿ.

೬೦. ಭಿತ್ತಿಯೊಳಗೆತ್ತಿ ಹಸಂಮಾಡಿದಾ ಪುತ್ತಳಿಗಳಂತೆ=ಗೋಡೆಯಲ್ಲಿ ಚೆನ್ನಾಗಿ ಕೆತ್ತಿಸಿ ಬರೆದ ಬೊಂಬೆಗಳಂತೆ ಕದಲದಹಾಗೆ.

೬೧. ಕದಕ್ಕದಿಸಿದುದು=ನಡುಗಿತು; ಕಂಪಿಸಿತು. ಕಪ್ಪರ=ಕೊಪ್ಪರಿಗೆ. ಢಕ್ಕೆ=ಮದ್ದಳೆ. ಮೇಗಿದ್ದ (ಆಕಾಶ) ಮೇಘಮಾರ್ಗವು ತಲೆಸುತ್ತಿನಂತಿತ್ತು.

೬೨. ಅಲೆಪಡಿಸಿ=ಬಾಧಿಸಿ. ಛಲದಂಕ=ಛಲವೇ ಬಿರುದಾಗಿರುವವನು. ದಡಿ=ಕೋಲು. ಗುಂಡು=ಗುಂಡುಕಲ್ಲು. ಬಡಿ=ದೊಣ್ಣೆ.

೬೩. ತಬ್ಬಿಬ್ಬು=ಕಳವಳಗು, ಗಾಬರಿ. ಬೆಬ್ಬಳಿಸಿ=ಬೆಪ್ಪಾಗಿ. ಬಿಲ್ಲುಂಬೆರಗುವಟ್ಟು=ಬಹಳ ಬೆರಗಾಗಿ. ತಿಬ್ಬಳಿ=ಬಿಲ್ಲನಾರಿ. ಅಡಂಗಿ=ಅಡಗಿ. ಸಿಬ್ಬದಿ=ಗಿಡ್ಡ, ಮೊಡವೆ. ಸಿಡಿಮಿಡಿ=ಕೋಪ. ಅಬ್ಬರಂಗೊಂಡು=ಆಶ್ಚರ್ಯಗೊಂಡು. ಮಿಳ್ತು=ಮೃತ್ಯು.

೬೪. ಹಾವಡರ್ದ ಹಂದೆಯಂತೆ=ಹಾವಿನ ವಿಷವೇರಿದ ಹುಚ್ಚನಂತೆ. ಹಮ್ಮದಂ ಬೋಗಿ=ವ್ಯಸನಪಟ್ಟು.

೬೫. ಸಂತವಡಿಸಿ=ಸಮಾಧಾನಪಡಿಸಿ.

೬೬. ನೀರ=ಗಂಡ.

೬೭. ಅರಿಕೆಯ ಭೂಪರಾಗೊಂದಣಂ=ಪ್ರಸಿದ್ಧರಾದ ಅರಸುಗಳ ಸಮೂಹ. ತನ್ನೊಂದಾಗಿ ಬರಲು=ತನ್ನೊಡನೆ ಬರಲು.

೬೮. ಬೆಂಬತ್ತಿ=ಅನುಸರಿಸಿ. ಈಲೋಕಮಾಲೋಕವರಿವತೆರದಿ=ಭೂಲೋಕವೂ ಸ್ವರ್ಗ ಲೋಕವೂ ತಿಳಿವ ಹಾಗೆ.

೬೯. ಅರ್ಧವರ್=ಅರ್ಧ ಜನರು, ಕೆಲವರು.

೭೦. ಕಾಕುಮಾಡಿಸಿ=ಕೆಡಕುಮಾಡಿಸಿ, ವಿಕಾರಪಡಿಸಿ.

೭೧. ಜಿಗುಳೆ=ಜಿಗಣೆ, ಅಟ್ಟೆ.

---

## ಒಂಭತ್ತನೆಯ ಸಂಧಿ.

೨. ತಳಿರ್ವಜ್ಜೆ=ಚಿಗುರೆಲೆಯಂತಿರುವ ಹೆಜ್ಜೆ. ತೋರಪೊರವಾರು=ಧಪ್ಪನಾದ ನಿತಂಬ. ಬಡಬಾಸೆ=ಸ್ವಲ್ಪವಾದ ರೋಮರಾಜಿ. ತೆಳುಗದಪು=ನಿರ್ಮಲವಾದ ಕಪೋಲ. ಹೆರೆನೊಸಲ್=ಚಂದ್ರನಂತಿರುವ ಹಣೆ. ಎಸೆಯಿತು=ಸೊಗಯಿಸಿತು.

೧೦. ನನೆಯಸರಕೆ= ಪುಷ್ಪಶರಕ್ಕೆ.

೧೧. ಬಗಸೆಗಣ್=ಸೇರೆಗಣ್ಣು.

೧೨. ಕಾತರಿಪ=ಆತುರಿಸುವ. ಓಸರಿಸುವ=ಸರಿದು ಹೋಗುವ. ತಡಬಡಗುಟ್ಟುವ= ಅಸಂಗತವಾದ; ನೇರಾಗಿಲ್ಲದ. ಕರ್ಬಿನ=ಕಬ್ಬಿನ. ಕೆಡೆ ಕೆಡೆ=ಬೀಳು ಬೀಳು. ಎಚ್ಚನು=( ಬಾಣವನ್ನು ) ಬಿಟ್ಟನು. ( ಪ್ರಯೋಗಿಸಿದನು. )

೧೩. ಹೊಮ್ಮಿರಿದು=ಹೊಮ್ಮಿ + ಇರಿದು=ಎದ್ದು ತಿವಿದು. ಅಂಗಮಂ ಸಲಿಸಿ=ಮೈಯ್ಯನ್ನು ಒಡ್ಡಿ.

೧೪. ಪಳವಿಗೆ=ಪತಾಕೆ. ಒಳಗುವರಿದು=ಒಳಗೆ ವ್ಯಾಪಿಸಿ.

೧೫. ಗುಂಗುದಿಬಟ್ಟು=ಗುಳುಗುಳಿಂದು ಕುದಿದು. ನಸುಬಲಂ ಬಡೆಯಲು=ಬಲಹೀನ ನಾಗಲು, ಕೃಶನಾಗಲು. ಕಡಿದು+ಉಮ್ಮಳಂ=ಬಹು ವ್ಯಸನ; ಅತಿ ದುಃಖ. ಬಸವಳಿದು=ಮೂರ್ಛೆವೋಗಿ.

೧೬. ಅಲವರಿಕೆಯಿಲ್ಲದೆ=ಆಲಸ್ಯಮಾಡದೆ. ತರೆಮರೆ=ಮುಚ್ಚುಮರೆ.

೧೭. ಹಳಿರೆಂದು=ಭಗೀರೆಂದು. ಹೆಳವ=ಕುಂಟ, ಕಾಲಿಲ್ಲದವನು. ಹಂಬಲಿಸು=ಚಿಂತಿಸು ತಿಂಬುಂಬ ಸಮಯಮೆಮ್ಮದು—ಮಾಂಸಾದಿಗಳನ್ನು ತಿನ್ನುವ ಮತ ನಮ್ಮದು.

೧೮. ಉಳಿವು=ಬದುಕು. ತರಹರದಿ=ಆತುರದಿಂದ.

೧೯. ಹೊದ್ದಿ=ಸೇರಿ, ಆಶ್ರಯಿಸಿ.

೨೨. ಪಂಕ್ತಿ=ಪಂತಿ. ಪರಿಯಣ=ಹರಿವಾಣ.

೨೩. ನೆಲೆಯಾಗಿ=ಸ್ಥಿರವಾಗಿ ( ಇಲ್ಲಿ ನಿಶ್ಚಯವಾಗಿ ). ಎಣಿಕೆಯೇ=ಆಲೋಚನೆಯೇ ಇಲ್ಲವೆಂದರ್ಥ.

೨೪. ಅಡುವಲಿ=ಬಳುವಳಿ.

೨೫. ಪತ್ತುವಿಟ್ಟು=ತ್ಯಜಿಸಿ. ( ಸೇರುವೆಯನ್ನು ಬಿಟ್ಟು ). ಒತ್ತರಂ=ಬಲವಾಗಿ.

೨೬. ಸಿಕ್ಕುಸುಗುಂಟುತನ=ತಟಿವಟ; ಕಾಪಟ್ಯ. ಅನುಮಾನಶಾಸ್ತ್ರಯುತಂ=ಬುದ್ಧಶಾಸ್ತ್ರಿ.

೨೭. ನಂಜುಂಬರಂತಪ್ಪುದು=ನಂಜನ್ನು ( ವಿಷವನ್ನು ) ತಿನ್ನುವವರಂತೆ ಆಗುವುದು.

೨೮. ಸೀಮೆ=ಮೇರೆ.

೩೦. ಕರೆಕರೆಗೊಂಬರೇ=ದುಃಖಿಸುವರೇ.

೩೧. ಗರುವೆ=ಗಂಭೀರೆ. ಕುರುಹು=ಗುರುತು.

೩೩. ಕೆರಹು=ಎಕ್ಕಡ, ಮೆಟ್ಟು, ಸಂಬಳಿಸಿ=ಸಂಬಾರಮಾಡಿ, ಪಾಕಮಾಡಿ.

೩೪. ಹಲವುಸೂಳ್=ಹಲವುಬಾರಿ. ಕೈಕೊಂಡೊಡೆ=ಅಂಗೀಕರಿಸಿದರೆ.

೩೫. ಉಜ್ಜುಗಿಸಿ=ಉದ್ಯೋಗಿಸಿ. ಮರುಗಿ=ಚಿಂತಿಸಿ. ಆ ಸತ್ಯವಂತೆಯುಲ್ಲಿಗೆ=ಪದ್ಮ ಶ್ರೀಯ ಬಳಿಗೆ. ಹೊಲಬು=ರೀತಿ, ಪರಿ.

೩೬. ಅಂದು ಕಾಲಗಂಡು ಅಯ್ಯಂ ಆ ಮೃಗವಾದಂ+ಎಂಬುದಂ=ಆ ದಿನ ತಾವು ತ್ರಿಕಾಲಜ್ಞಾನಿಗಳೆಂದು ನಮ್ಮ ತಂದೆ ಜಿಂಕೆಯಾದನೆಂದು ಹೇಳುವುದಕ್ಕೆ. ಹದ ನಾ=ರೀತಿಯನ್ನು.

೩೭. ತೊದಲಾದುದೆ=ಸುಳ್ಳಾಯಿತೇ. ಕೊಕ್ಕರಿಸಿ=ಜಿಗುಪ್ಸೆಗೊಂಡು, ಹೇಸಿ.

೩೮. ತಾಟಗಿತ್ತಿ=ಮೋಸಗಿತ್ತಿ. ಏತರವರು=ಎಷ್ಟರವರು. ಚಾಟುತನದಿಂ=ಕುಟಿಲದಿಂದ, ಕವಡಿನಿಂದ. ಅಟಮಟ=ಮೋಸ. ಪೊಳಲಿಂದಂ ಪೊರಮಡಿಸಿ=ಊರಿಂದ ಹೊರಗಟ್ಟಿರಿ.

೩೯. ತಳಾರರು=ತಳವಾರರು=ಗ್ರಾಮರಕ್ಷಕರು. ಪರದುಗೆಯ್ಯಲ್ಕೆ=ವರ್ತಕತನಮಾಡುವುದಕ್ಕೆಂದು, ವ್ಯಾಪಾರಮಾಡುವ ಉದ್ದೇಶದಿಂದ. ಪರದರ್=ವರ್ತಕರು.

೪೦. ಮಿಹ=ಸ್ನಾನ, ಬಲಿಯುತಿರಲು=ಬಲಪಡಿಸುತ್ತಿರಲು.

೪೧. ಒತ್ತಂಬದಿಂ=ಬಲಾತ್ಕಾರದಿಂದ. ಒಡವೆರಸಿ=ಕಲಸಿ, ಸಂಗಡ ಬೆರಸಿ.

೪೨. ಬಿನ್ನಣ=ಕೌಶಲ್ಯ, ಚಮತ್ಕಾರ. ಅನುವಾಗಿ=ಕ್ರಮವಾಗಿ, ಚೊಕ್ಕಟವಾಗಿ.

೪೩. ಗರುವೆಯರ್=ಗಂಭೀರರಾದವರು, ಗರತಿಯರು. ಪಂಕ್ತಿಯೊಳ್ ಪರಪಂಚಮಂ=ಪಂಕ್ತಿಭೇದವನ್ನು. ಮೆಯ್ಮರೆದು ಉರುಳ್ದರು=ಎಚ್ಚರವು ತಪ್ಪಿ ನೆಲದಲ್ಲಿ ಬಿದ್ದುರುಳಿದರು.

೪೪. ಕರಂ=ವಿಶೇಷವಾಗಿ. ನೋವುತ=ವ್ಯಥೆಪಡುತ್ತ. ಸಂತಸ=ಸಂತೋಷ. ಓಪ=ಗಂಡ. ಮುಂತಣ ಉಜ್ಜುಗಂ=ಮುಂದಣ ಕಾರ್ಯ.

೪೫. ಕೂಡಣಿರ್ದವರುಮಂ ತಿನಿಸಿ=ಜೊತೆಯುಲ್ಲಿದ್ದವರಿಗೂ ತಿನ್ನಿಸಿ. ಅರಗುಲಿ=ಪಾತಕಿ. ಹರದರು=ವರ್ತಕರು.

೪೬. ಸಾವಡೆದು=ಮೃತಿಹೊಂದಿ.

೪೭. ಪರಿಪಡಿಸಿ=ಹೋಗಲಾಡಿಸಿ ದೇಸಿಗನಾದ=ಗತಿಹೀನನಾದ. ಮನದಾಣ್ಮ=ಮನೋವಲ್ಲಭ. ಮರುಕಂ=ಶೋಕ.

೪೮. ಪಂಚಗುರು=ಅರ್ಹತ್ಸಿದ್ಧಾಚಾರ್ಯೋಪಾಧ್ಯಾಯಸರ್ವಸಾಧುಗಳು. ಓಜೆ=ಪ್ರೌಢಿ ಬೆಡಗು.

೪೯. ಪೂರಯಿಸಿ=ಹೊಗಿಸಿ! (ಪೂರ್ಣವಾಗಿ ಪ್ರಾಣವು ಬರುವಂತೆಮಾಡಿ). ಅಕ್ತೆ=ಪ್ರೀತಿ, ಅಕ್ಕರೆ.

೫೦. ಮಹಾಮೋದವೆತ್ತು=ಅತ್ಯಾನಂದಭರಿತನಾಗಿ. ದಂದುಗ=ತೊಂದರೆ, ಕಷ್ಟ. ಪರಿಪಡಿಪೆನೆಂದು=ಹೋಗಲಾಡಿಸುವೆನೆಂದು.

೫೧. ತಳುವದೆ=ತಡಮಾಡದೆ. ಬಳಿವಳಿಯೊಳೆಯ್ದೆ=ಸಂಗಡದಲ್ಲಿ ಬರಲು.

೫೨. ಪಲಂಬರಬಲೆಯರು=ಹಲವರು ಸ್ತ್ರೀಯರು ಒಡವರಲ್=ಸಂಗಡ ಬರಲು. ಆನಲ್=ಧರಿಯಿಸಲು.

೫೫. ಪದೆದು=ಇಷ್ಟಪಟ್ಟು, ಬಯಸಿ. ಕೌಳೇಯಕ=(ಬೇಟೆ) ನಾಯಿ. ದೂರು=ಹಳಿ, ನಿಂದಿಸು.

೫೬. ಎಕ್ಕಸಿಕ್ಕಂ=ತಬ್ಬಿಬ್ಬು, ಹೆಚ್ಚುಕಡಿಮೆ, ವ್ಯತ್ಯಸ್ತ. ಕಣ್ಗೊಪ್ಪಿದಂ=ರಂಜಿಸಿದನು.

# ಹತ್ತನೆಯ ಸಂಧಿ.

೧. ಇಂಬಾಗಿ=ಮನೋಹರವಾಗಿ, ರಮ್ಯವಾಗಿ. ಒಗೆವಂತೆ=ಹುಟ್ಟುವಂತೆ.

೨. ಮಲಮಲನೆ ಮರುಗಿ=ಬಹಳವಾಗಿ ವ್ಯಥೆಪಟ್ಟು; ಹಂಬಲಿಸಿ.

೩. ದಲ್ಲಾಳಿತನದಿಂದ=ಧಾರ್ಷ್ಟ್ಯದಿಂದ; ದೊಡ್ಡತನದ ಹೆಮ್ಮೆಯಿಂದ. ನಿಂದೆಗೆ ಒಳಗಾಗಿ=ದೂಷಣೆಗೆ ಹಕ್ಕಾಗಿ, ಈಡಾಗಿ.

೪. ಮೇಲುತಾಗೆಂದು=ಒಳ್ಳೆಯದು ಕೆಟ್ಟದು ಎಂದು. ಮೆಯ್ಮರೆದು=ಸೊಕ್ಕಿ.

೫. ಅವಗಂ=ಅಧಿಕವಾಗಿ. ಲಾವುಕೋವು=ಕಪಟ.

೭. ಹರದಿಕೆ=ವ್ಯಾಪಾರ.

೮. ಅಕ್ಕರಿಂದಂ=ಪ್ರೀತಿಯಿಂದ. ಗಂಡುಮಿಕ್ಕು=ಸೊಕ್ಕೇರಿ. ಉಕ್ಕು=ಪೌರುಷ. ಸೊಕ್ಕು=ಮದ.

೯. ತಂಡತಂಡದೊಳು=ಹಿಂಡುಹಿಂಡಾಗಿ. ಓರಗೆ=ಸಮತೆ (ವಯಸ್ಸಿನಲ್ಲಿ). ಹಾರದೆ=ಲಕ್ಷ್ಯಮಾಡದೆ. ಮನೆಯಂ=ಮನೆತನವನ್ನು, ವಂಶವನ್ನು. ಸೆಂಡು=ಚೆಂಡು. ಬೊಹರಿ=ಬುಗರಿ, ಬಾಳ್ತೆಯಿಲ್ಲದೆ=ಪ್ರಯೋಜನವಿಲ್ಲದೆ.

೧೦. ಅಡಕದ=ಹತೋಟಿ, ಹದ್ದು, ಆಧೀನದಲ್ಲಿ. ಕೊನಬರು=ಭೋಕರಿಗಳು, ಪುಂಡರು, ಲಂಡರು, ಠೀವಿಗಾರರು.

೧೧. ಅಂತರಂ ಮಾಡದೆ=ನಿಲ್ಲಿಸದೆ. ಪಡಕಣ=ಮಲಗುವಮನೆ. ಪಹರಿಯ=ಕಾಪಿನ, ಕಾವಲಿನ. ಹೆಡಗೈಗಟ್ಟಿ=ಹಿಂಗಟ್ಟು ಮುರಿಕಟ್ಟಿ.

೧೨. ನಳಿಗೆ=ಬೆತ್ತ, ಕೋಲು. ನಳುಹ=ವಕ್ರತೆಯನ್ನು, ಬಾಗಿರುವ ಡೊಂಕನ್ನು.

೧೩. ಬಣಗಾಗಿ=ವ್ಯರ್ಥವಾಗಿ.

೧೪. ಲವಲವಿಕೆ=ವಿಶ್ವಾಸ, ಅಭಿಲಾಷೆ. ಆಳಮೇಳಂ=ಸಹವಾಸ. ಆರಡಿಕಾರ=ಗಲಭೆಗಾರ. ಬಿನದಂ=ವಿನೋದ. ಕೊಂಡೆಯರು=ಚಾಡಿಕಾರರು; ಪಿಸುಣರು. ಉದ್ದುಡಿಕೆ=ದುಷ್ಟತನ. ಎಸಕ=ಕಾರ್ಯ, ಕೆಲಸ.

೧೫. ನೆರೆ ನಡೆಯಿಸಿ=ಚೆನ್ನಾಗಿ ಅಭ್ಯಾಸಮಾಡಿಸಿ. ಬಿದ್ದಿನರಕಾಣ್ಬಾ= ಕಕ್ಕಸದ=ಕ್ರೂರವಾದ. ಕೈಡ=ಕೇಡನ್ನು. ಕಡೆಗೆ=ಕೊನೆಗೆ. ಎಣಿಸಿದವರು=ಬಗೆದವರು.

೧೮. ನಾಣ್ಗೆಡೆ=ಲಜ್ಜೆಯಿಲ್ಲದೆ; ನಾಚಿಕೆಯಿಲ್ಲದೆ. ತೆಗಳಿದಳ್=ಬಯ್ದಳು.

೨೦. ಮೆಲ್ಲಬೇಡ=ತಿನ್ನಬೇಡ.

೨೧. ಕೀಸು=ಕೃಪಿಕರಣೇ. ಮಾಸಲಂ=ಕೊಳೆ. ದುಪ್ಪಟ=ದುಪ್ಪಟಿ. ಬಾಸಣಿಸು=ಮುಸುಕು, ಆಚ್ಛಾದಿಸು. ಓಸರಿಸದೆ=ಅಲಕ್ಷ್ಯಮಾಡದೆ.

೨೨. ಒಸೆದು=ಪ್ರೀತಿಸಿ. ಪೋಹಣಿಸು=ಪೋಣಿಸು.

೨೩. ಉರೆ=ಅಧಿಕವಾಗಿ. ತಳುಮಾಡದೆ=ಸಾವಕಾಶಮಾಡದೆ. ನಳನಳಿಸೆ ಬೆಳೆದ=ಚೆನ್ನಾಗಿ ಬೆಳೆದ. ಪಗಲಳಿದುದು=ಸೂರ್ಯಾಸ್ತಮಯವಾಯ್ತು; ಹೊತ್ತು ಮುಳುಗಿತು.

೨೪. ಜೋಡಗಲ್ದುವು ಜಕ್ಕವಕ್ಕಿ=ಚಕ್ರವಾಕಪಕ್ಷಿಗಳ ಜೊತೆ ಬಿಟ್ಟು ಬೇರೆ ಬೇರೆಯಾದುವು. ಜಲಜಲಿಸಿ=ಪ್ರಜ್ವಲಿಸಿ. ಥಾಳ=ಪ್ರತಾಪ. ಕೋಡತೊಡಗಿತು=ಶೈತ್ಯವನ್ನೊದಗಿಸಲಾರಂಭಿಸಿತು. ಹಕ್ಕೆ=ಗೂಡು. ನೇಸರ್=ಸೂರ್ಯ.

೨೫. ಸಲೆ=ಚೆನ್ನಾಗಿ. ಹಿಳ್ಳೆ=ಪಿಳ್ಳೆ=ಮರಿ. ದಡಲನೆ=ವೇಗದಿಂದ, ಧಡರೆಂದು.

೨೬. ಒಕ್ಕಲಿಕ್ಕು=ನಾಶಮಾಡು, ಸಂಹರಿಸು. ಅಡಂಗು=ಮಾಂಸ. ತುಕ್ಕಡಿಸಿ=ತುಂಡುಮಾಡಿ. ಬಿಂದ=ವೃಂದ, ಸಮೂಹ. ಪೆಕ್ಕಣ=ಸಂ. ಪ್ರೇಕ್ಷಣ.

೨೭. ಅಡಗುಗಳಂ+ಊಡಿಸುವ=ಮಾಂಸಗಳನ್ನು ಉಣಿಸುವ. ಹಸುಳೆ=ಮರಿ. ಪಿಂಗದೆ=ಹಿಂಗದೆ, ತಗ್ಗಿಸದೆ, ಹಿಂದೆಗೆಯದೆ. ಜಂಗುಳಿ=ಗುಂಪು.

೨೮. ಕಡುಪು=ವೇಗ, ರೋಷ. ಪೆಡೆವಣಿಯ ಸೊಡರ್ವೆಳಗುವಿಡಿದು=ಹೆಡೆಯಲ್ಲಿರುವ ಮಣಿಯೆಂಬ ದೀಪದ ಬೆಳಕನ್ನು ಹಿಡಿದು. ಹೊಸೆವ=ಹೊತ್ತಿಸುವ. ಕಡುರಮ್ಯಮಾದ=ಬಹು ರಮ್ಯವಾದ. ಬಲುಸಂದಣಿ=ದೊಡ್ಡ ಗುಂಪು.

೨೯. ಅಡರ್ದು=ಹತ್ತಿ. ಇಲ್ಲಿ ಐದು ಮುತ್ತನ್ನು ಹೇಳಿ ಬೇಡರ ಹೆಂಡತಿಯರನ್ನು ಮುತ್ತೈದೆಯರಾಗಿ ಅಲಂಕರಿಸಿದೆ.

೩೦. ಕಂಡಿಕೆ=ಜಳೆ, ಗಡೆ. ಬೀಳಲ್=ಮರದ ಜಡೆ. ನುಣ್ಬು=ಮಾರ್ದವ. ಕಳ್ತಲೆ=ಕರ್ತ್ತಲೆ=ಕತ್ತಲೆ. ಕರಮೆಸೆವ=ಬಹಳವಾಗಿ ಸೊಗಯಿಸುವ.

೩೧. ಪರಿಜು=ವೇಷ. ಕಂಡರಿಸು=ಕೆತ್ತು. ಕರುವಿಟ್ಟ=ಎರಕಹೊಯ್ದ. ಕಡುಗಾಡಿಯಿಂ=ಬಹಳ ಒಯ್ಯಾರದಿಂದ. ನೀರೆ=ಸುಭಗೆ. ಚೀಲಗೆಗೆಯ್ದ=

೩೨. ನಾರಿ=ಬಿಲ್ಲ ಹೆದೆ. ಕೀಸು=ಕೃಷಿಮಾಡು. ಓರೆಯಂತಿರ್ದುದಂ ವೊಳ್ಳಿತುಮಾಡು=ವಕ್ರವಾಗಿರುವುದನ್ನು ನೇರಾಗಿಮಾಡು. ಕೂರಂಬ=ತೀಕ್ಷ್ಣವಾದ ಬಾಣವನ್ನು. ಮಸೆ=ತಿಕ್ಕು, ತೀಡು. ಕೊಂಕನನುಮಾಡಿ=ಡೊಂಕನ್ನು ಸರಿಗೊಳಿಸಿ. ಹಿಳಿಕು=ಹಿಡಿ. ಭಿಲ್ಲರು=ಬೇಡರು.

೩೪. ಎಕ್ಕಲ=ಕಾಡಹಂದಿ. ಎಲರುಣಿ=ಹಾವು. ಎಕ್ಕಾವಳಿ=ಏಕಸರ; ಎಕ್ಕಸರ. ಕಡುಕಕ್ಕಸಂ ಬಡೆದ=ಅತಿ ಕಠಿಣವಾದ. ಕುಪ್ಪಿಗೆ=ಕರಂಡ, ಸಂಪುಟ. ವೆಜ್ಜಂಗೆಯ್ದು=ಕಡೆದು.

೩೫. ಕತ್ತುರಿ=ಕಸ್ತೂರಿ. ಕಾಡಿಗೆ=ಕಣ್ಕಪ್ಪು. ಒತ್ತಂಬರಿಸಿದರೊ=ತುಂಬಿಸಿದರೊ; ಒಟ್ಟುಗೂಡಿಸಿದರೋ; ತುರುಗಿಸಿದರೋ. ತೆರಪು=ಬಿಡುವು, ಅವಕಾಶ, ಎಡೆ. ಕವಿಯೆ=ಆವರಿಸಲು.

೩೬. ಥಾಳ=ಕಾಂತಿ. ರಸುಮೆ=ರಶ್ಮೆ=ಹೊಳೆಪು. ಕೆಂಪುಗಲ್ಲ ಹೊಳೆಹು=ಮಾಣಿಕ್ಯದ ಕಾಂತಿ. ಉಲ್ಲಸ=ಉಲ್ಲಾಸ. ಇಡಿದ=ತುಂಬಿದ.

೩೭. ತುತ್ತುರುಂಬಾಗಿ=ಅಡಕವಾಗಿ, ಸಾಂದ್ರವಾಗಿ. ಮೇಳದ=ಗುಂಪಿನ. ಕಳವಳ=ಚಿಂತೆ, ಆಯಾಸ.

೩೮. ಗಲಗು=ಗಲಭೆ. ಮೇಬೊಲಕೆ ತಳರಿದುವು=ಮೇವಹೊಲಕೆ ಹೋದುವು.

೩೯. ಮೂಡಣದಿಕ್ಕು=ಪೂರ್ವದಿಕ್ಕು. ಮುನ್ನೇಸರುದಯ=ಅರುಣೋದಯ.

೪೦. ತೀವಿದ=ತುಂಬಿದ. ಕಚ್ಚಿರ್ದ=ತೊಳೆದು. ತಳಹೊಳಂಗೊಳುತ್ತೆ=ಭ್ರಾಂತರಾಗುತ್ತ. ತಬ್ಬಿಬ್ಬುಗೊಂಡುದು=ಬೆಪ್ಪಾದರು.

೪೧. ಬೆಳ್ಮಿಗಂ=ಜಿಳಿಯ ಮೃಗ. ಕೊಳ್ಮಿಗಂ=ಕೋಡುಳ್ಳ ಮೃಗ. ಬಟ್ಟೆ=ದಾರಿ, ಹಾದಿ, ಮಾರ್ಗ. ತದಕು=ಆನೇಬೇಲ, ಗಜಭಕ್ಷ್ಯ. ಸರಹು=ಸನ್ನೆ. ತೋಲಿನೊಳಗೆ=ದಾರಿಯಲ್ಲಿ. ಹೊಲಬು=ರೀತಿ. ಕಣ್ಗೆಟ್ಟು=ದೆಸೆಗಾಣದೆ. ತಿಳಿವಳಿದು=ವಿವೇಕವು ಹೋಗಿ. ತೊಳಲಿ=ಸುತ್ತಿ. ಬಳಲಿ=ಆಯಾಸಪಟ್ಟು.

೪೨. ಹಳುವಿನೊಳು=ಕಾಡಿನಲ್ಲಿ. ತಿಂಥಿಣಿ=ಸಮೂಹ. ಜೋತೊರಗುವ=ಜೋಲಿನೇತಾಡುವ. ಕಿಂಪಾಕತರು=ಉಮ್ಮತ್ತೆಯ ಗಿಡು. ತಿರಿವ=ಕೊಯ್ಯುವ.

೪೩. ನರೆನವಿರ=ನರೆತ ಕೂದಲನ್ನು. ತೆರೆಮುಸುಂಕಿದ=ಸುಂಕುಗಳಿಂದ ಕೂಡಿದ. ಮುರಿದ=ಬಾಗಿದ. ಪಟಿಲುಗಟ್ಟಿದ= ದಿಟ್ಟಿ=ದೃಷ್ಟಿ, ನೋಟ. ಬಿೀಟೆ=ಬಿರುಕು, ಒಡೆತ. ಏರುಂಜವ್ವನಂ=ಹೊಸಯೌವನವನ್ನು.

೪೪. ತೋರ=ದಪ್ಪವಾದ. ಪೊರವಾರು=ವಿಕ್ರಿ. ಬಂಡುಣಿ=ಭ್ರಮರ, ತುಂಬಿ. ಕುಡುಪುರ್ವು=ಕೊಂಕಿದ (ವಕ್ರವಾದ) ಹುಬ್ಬು. ಚೆಂದಳಿರ್ಗೆಯ್=ಚಿಗುರಂತೆ ಕೆಂಪಗಿರುವ ಕೈ. ನುಣ್ಚರ=ಮೃದುಸ್ವರ. ಜವ್ವನೆ=ಯೌವನೆ. ಕರಂ=ಅಧಿಕವಾಗಿ.

೪೭. ಒರೆದಳ್=ಹೇಳಿದಳು. ಹಸಿವಳಿವಂತೆ=ಹಸಿವು ಹೋಗುವ ಹಾಗೆ.

೪೯. ಬೆಂಬತ್ತಿದೊಡಲ್=ಬೆನ್ನೊಡನೆ ಹತ್ತಿದ ಮೈ=ಕೃಶವಾದ ಶರೀರ. ತಳಮೇಲಕೆ=ಕೆಳಗೂ ಮೇಗೂ. ಹೂಳಿದ=ಅಡಗಿದ. ಅಂಗುಳ್=ತುಟಿ. ಸಾರವರತ=ದ್ರವ ಕುಂದಿದ, ಬತ್ತಿದ ಬಾಯಿ. ತೊರೆದ=ಸುರಿಯುತ್ತಿರುವ. ಕುಪ್ಪಳಿಪ ಕಾಲ್=ಸರಿಯಾಗಿ ನಡೆಯಲಾರದೆ ಕುಪ್ಪಳಿಸುತ್ತಿರುವ ಕಾಲು. ದಡದಡಿಪ=ದಡ ದಡ ಎಂದು ಬಡಿದುಕೊಳ್ಳುತ್ತಿರುವ. ಹರಣ=ಪ್ರಾಣ. ಬಂಬಲಬಾಡುವ=ಬಹಳ ಕಾರ್ಶ್ಯವನ್ನು ಹೊಂದಿದ. ತಡಬಡಿಪ=ತಡಮಾಡುವ.

೫೦. ಒಡ್ಡಿಸಿದ=ಅಡ್ಡಹಾಕಿಸಿದ. ಸೊಗಡುಮಾಳ್ಪದೆ=ಜಿಗುಪ್ಸೆಮಾಡುವುದೆ, ಕೊಕ್ಕರಿಸುವುದೆ. ಹೊನ್ನಂಬಂ + ಎಚ್ಚತೆರಂ=ನೀರಲ್ಲಿ (ವ್ಯರ್ಥವಾಗಿ) ದಿವ್ಯವಾದ ಬಾಣವನ್ನು ಬಿಟ್ಟರೀತಿ.

೫೧. ತಟಹೊಟನೆ=ತಟತಟನೆ=ದಡದಡನೆ.

೫೩. ತಳರಿಸು=ಹೋಗುವಂತೆ ಮಾಡು. ಘಳಿಲನೆ=ಬೇಗನೆ.

೫೪. ಮಣಿಗೊಡೆ=ರತ್ನಮಯವಾದ ಛತ್ರಿ. ಮಿನುಗುವ=ಹೊಳೆವ, ಪ್ರಕಾಶಿಸುವ. ನೋಳ್ಪಂದದು=ನೋಡುವ ರೀತಿಯಲ್ಲಿ.

೫೫. ಚೆದುರರ್ಗೆ=ಜಾಣರಿಗೆ. ಹೊದಕುಳಿ=ಆಪತ್ತು.

೫೬. ಗೊಂದಣಂಗೊಂಡು=ಗುಂಪುಗೂಡಿ.

೫೭. ಮಡದಿ=ಪತ್ನಿ-ಸ್ತ್ರೀ.

೫೮. ತಾಳಿದರ್=ಧರಿಸಿದರು, ಹೊಂದಿದರು. ಎಳಸಿ=ಬಯಸಿ, ಪ್ರೀತಿಸಿ.

೫೯. ಕಟ್ಟುಕಕ್ಕೆ=ಕಲ್ಪನೆಗೆ. ಪನಿಪೊತ್ತಿನೊಳ್=ಬೆಳಗಿನ ಹೊತ್ತಿನಲ್ಲಿ. ಉತ್ತರಿಸಬೇಕು=ಕತ್ತರಿಸಬೇಕು.

---

## ಹನ್ನೊಂದನೆಯ ಸಂಧಿ.

೧. ಪೆಸರ್ವಡೆದ=ಪ್ರಖ್ಯಾತವಾದ. ಎಸಕದಿಂ=ಉದ್ಯೋಗದಿಂದ (ಅತಿಶಯದಿಂದ).

೩. ಒರವಂ ಪಾರಿ=ಆಗಮನವನ್ನು ನಿರೀಕ್ಷಿಸಿ.

೪. ನೋಂಪಿ=ವ್ರತ.

೫. ಸಯ್ಪು=ಪುಣ್ಯ.

೬. ಹುರಡು=ಮತ್ಸರ, ಹೋರಾಟದ ಬುದ್ಧಿ.

೭. ಬವರದೊಳ್=ಯುದ್ಧದೊಳ್. ಕಯ್ದು=ಆಯುಧ. ಎಗ್ಗ=ಹುಚ್ಚ, ಮೂಢ. ಕಡುಹೆಬಗ=ಬಡವನು. ಒರಲುವಾಯನುಂ= ಜೊಳ್ಳು ಬಾಯುಳ್ಳವನು.

೮. ಕಚ್ಚುಕಡಿಗೊಂಡು=ನಿಂದಿಸಿಕೊಂಡು. ಎಸಗೆ=ಮಾಡಿದರೆ. ಬಯಲವಿಡಾಯ= ವ್ಯರ್ಥವಾದ ಡಂಭವನ್ನು, ಗೌರವವನ್ನು. [ ಬಿಡಯ=ದಾಕ್ಷಿಣ್ಯ ]

೧೧. ಓವಿ=ಪ್ರೀತಿಸಿ. ಕಾವೆಂ=ರಕ್ಷಿಸುವೆನು. ಜೀವಿತಂ=ಸಂಬಳ.

೧೨. ಹಿಂಡು=ಗುಂಪು, ಸಮೂಹ. ಜತನದೊಳ್=ಪ್ರಯತ್ನದಿಂದ, ಎಚ್ಚರಿಕೆಯಿಂದ?

೧೩. ಮಿಹ=ಸ್ನಾನ.

೧೪. ಏಳ್ಗೆ=ಆಧಿಕ್ಯ, ಅತಿಶಯ.

೧೫. ಕೂರ್ಮೆ=ಸ್ನೇಹ. ಊಳಿಗ=ಸೇವಕತನ. ಒಸೆದು=ಪ್ರೀತಿಸಿ.

೧೬. ದೇಸಿಗಂ=ಪರದೇಶಿ, ಗತಿಹೀನ.

೧೭. ಅಡಸಿಹುದು=ಅಡಗಿರುವುದು. ಅಮರಿರುವುದು. ಕೂನು=ಡೊಂಕು, ವಕ್ರತೆ. ಕುರುಹು=ಗುರುತು.

೧೮. ಅವನೆ=ಅವುಗಳನ್ನೆ (ಆ ಎರಡು ಕುದುರೆಗಳನ್ನೆ). ಕೈಕೊಳ್=ಸ್ವೀಕರಿಸು. ತವತವಗೆ=ತಮತಮಗೆ. ಸಾಗಲು=ತೀರಲು. ಆ ಕುರಿತ ಮೂರಬ್ದಕೆ=ಅಂದು ಮೊದಲಲ್ಲಿ ನಿರ್ಣಯಿಸಿದ್ದ ಮೂರುವರುಷಕ್ಕೆ.

೧೯. ಪರದ=ವರ್ತಕ. ಕಾಪಿನ=ಕಾವಲಿನ. ಹಿಂಡಿನೆಡೆಗೆ=ಕುದರೆಗಳ ಸಮೂಹದ ಬಳಿಗೆ. ಆರಯ್ದು=ಹುಡುಕಿ, ಆರಿಸಿ. ಬೇರ್ಪಡಿಸಲು=ಬೇರೆಯಾಗಿ ಇರಿಸಲು.

೨೦. ಇವಕ್ಕೆ=ಇವುಗಳಿಗೆ. ಅಗ್ಗಳಿಕೆಯ=ಅತಿಶಯದ. ನೆಲೆ ನಿಮ್ಮಮಾತು=ದಿಟ ನೀವು ಹೇಳುವುದು.

೨೧. ಹಿಂದುಗಳೆಯಿಪುದು=ಹಿಂದಕ್ಕೆ ತಳ್ಳುವುದು, ತಿರಸ್ಕರಿಸುವುದು.

೨೨. ಒಳಗು ಹೊರಗು=ಹೆಚ್ಚುಕುಂದು, ಗುಣದೋಷ.

೨೪. ಬೇಟ=ವಿರಹ. ಕರಮೊಳ್ಳಿತು=ಬಹಳ ಒಳ್ಳೆಯದು.

೨೫. ಪಸರಿಸುವುದು=ಹರಡುವುದು, ಹಬ್ಬುವುದು.

೨೭. ಕೊಕ್ಕರಿಸಿ=ಹೇಸಿ. ಒಸರಂ ಮಾಡಲು=ಓರೆಮಾಡಲು, ಅಸಡ್ಡೆ ಮಾಡಲು. ಪೈಸರಿಸುವುದು=ದೂರಕ್ಕೆ ಸರಿದು ಹೋಗುವುದು. ತಲೆಯುಳಿದೊಡಂ=ತಲೆಹೋದರೂ.

೨೮. ಅಡಿಗೆ ಬಾಗಿದರ ನೋವದೊಡೆ=ಆಶ್ರಯಿಸಿದವರನ್ನು ಸಲಹದಿದ್ದರೆ. ಎಡರ್=ಕಷ್ಟ. ಎರೆವರಂ=ಬೇಡುವವರನ್ನು, ಯಾಚಿಸುವವರನ್ನು. ಐಸಿರಿ=ಐಶ್ವರ್ಯ.

೨೯. ಕವಲಾದ=ಎರಡಾಗಿ ಒಡೆದ. ತವಕದಿಂ=ಪ್ರೀತಿಯಿಂದ.

೩೧. ನೀರ್ವಟ್ಟೆ=ನೀರಿನದಾರಿ.

೩೨. ಹರಕೆ=ಆಶೀರ್ವಾದ.

೩೩. ಮೋಹವಂಗೊಂಡು=ಸೇನೆಗೂಡಿ. ಅಳವಡಿಸಿ=ಹವಣಿಸಿ. ಹಲ್ಲಣಿಸಿ=ಸಜ್ಜುಗೊಳಿಸಿ

೩೪. ಹವಣ್=ಪ್ರಮಾಣ, ಅಳತೆ. ಪರಿಜು=ವೇಷ, ರೀತಿ.

೩೬. ದುರ್ಧರಂ=ಕಷ್ಟ. ಉಂಗಿಸಿದ=ಯತ್ನಿಸಿದ. ಬಲ್ಲಿತು=ದೊಡ್ಡದು (ಬಲವತ್ತಾದುದು).

೩೯. ಅಲರ್ವಟ್ಟೆ=ಆಕಾಶ. ಮನವೋತು=ಮನಮೆಚ್ಚಿ.

೪೦. ತುಳಿಲ್ಗೆಯ್ದು=ಸ್ತುತಿಯಿಸಿ. ಬಲವಂದು=ಪ್ರದಕ್ಷಿಣೆಮಾಡಿ. ಸಯ್ಪು=ಪುಣ್ಯ.

೪೨. ಒಪ್ಪದಿಂ=ಬೆಡಗಿಂದ.

೩೩. ಓಲಗ=ಸಭೆ.

೪೪. ಒಚ್ಚತಂ=ಉಚಿತವಾಗಿ. ಪಚ್ಚುಗೊಡುವೆಂ=ಹಂಚಿಕೊಡುವೆನು. ಅಚ್ಚುತಂ=ಆಶ್ಚರ್ಯ. ಪಡಿಪುಚ್ಚ=ಸಂಶಯ, ಸಂದೇಹ.

೪೫. ತೊಳಲುತ್ತ=ತಿರುಗುತ್ತ, ಸಂಚರಿಸುತ್ತ.

೪೬. ಒಳಗುದೋರದೆ=ಮರ್ಮವನ್ನು ತಿಳಿಸದೆ. ಅಳವಲ್ಲ=ಸಾಧ್ಯವಲ್ಲ. ಅರುವೆ=ಬಟ್ಟೆ. ದಿಟ್ಟಿಗಳ=ಕಣ್ಣುಗಳ. ಉಮ್ಮಳಿಸುವ ತೆರದಿ=ಚಿಂತಿಸುವ ಹಾಗೆ.

೪೭. ದೇಪಿಲಂ=ದೇವಾಲಯವನ್ನು ಕಾದುಕೊಂಡಿರುವವನು.

೪೮. ಮಾಣಿಸುವೆಂ=ಬಿಡಿಸುವೆನು.

೫೦. ಬಂದನಾಗಲೆವೇಳ್ಕುಂ=ಬಂದವನಾಗಿರಬೇಕು.

೫೧. ಓವದೇ=ಪ್ರೀತಿಸದೆ. ಹೋಹಂ=ಹೋಗುವನು.

೫೨. ದುರ್ಜನಿಸಿದೊಡೆ=ನಿಂದಿಸಿದರೆ. ಈ ಅಂದದಿಂ ಕೆಡೆನುಡಿವುದು=ಈ ರೀತಿಯಲ್ಲಿ ನಿಂದಿಸಿ ನುಡಿವುದು.

೫೪. ಹತ್ತಿರೊಳಿರ್ದ=ಸಮೀಪದಲ್ಲಿದ್ದ. ನಿರ್ದಾಟಿಸುವುದೇ=ಅವಮಾನಿಸುವುದೇ. ಮೊಗಗೆಡಿಸು=ಮಾನಭಂಗಮಾಡು.

೫೫. ಮೊಣ್ಣಾಗುವಂತೆ=ಮೋಟಾಗುವಂತೆ. ಚಿಣ್ಣದರಯಂ=ಚಿಕ್ಕ ಹುಡುಗ? ಬಣ್ಣಿತಂ=ಕಾಠಿಣ್ಯವನ್ನು.

೫೭. ತತ್ತರಂದರಿದು=ಮನಬಂದಂತೆ ಕತ್ತರಿಸಿ. ವೆಸಂ=ಕಪ್ಪು.

೬೦. ಬರಗು=ಮಲಗು. ಹುಯ್ಲಿಗೆ=ಹೊಡತಕ್ಕೆ. ಕರುತ್ತು=ಎಣಿಸಿ, ಗುರಿಯಿಟ್ಟು. ಜಗುಳ್ದು=ಜಾರಿ.

೬೧. ತತ್ತಿ=ಮೊಟ್ಟೆ. ಒಗೆದು=ಹುಟ್ಟಿ. ನೆಗೆ=ಹಾರು. ಸೊಗಸುಗಡಲ್=ಶೃಂಗಾರಾರ್ಣವ.

೬೨. ಪಸರ್ವಟ್ಟೆ=ಹಸರು ಬಟ್ಟೆ. ಲೇವೆ= ಕಿಸುಗಲ್ಲ=ಕಬ್ಬಿಣದ. ಗರಿ=ರೆಕ್ಕೆ. ಎಸಕ=ಅತಿಶಯ.

೬೩. ಅಡಿದಳಕೆರಗಿ=ಪಾದಕ್ಕೆ ನಮಸ್ಕರಿಸಿ.

೬೪. ತಿರಿತರ್ಪೆಂ=ಸಂಚರಿಸಿ ಬರುವೆನು. ಬಲವಂದುದು=ಪ್ರದಕ್ಷಿಣೆ ಮಾಡಿತು.

೬೫. ಸಂಜೋಗವೆರಸಿ=ಸಲ್ಯಾಣವನ್ನು ಕೂಡಿ.

೬೬. ಚೆದುರಿಸಿ=ಟಕ್ಕಿಸಿ. ಕಳ್ದು=ಕದ್ದು.

೬೭. ಒದರಿ=ಝಾಡಿಸಿ, ಅಸ್ಫೋಟಿಸಿ, ಪದೆದು=ಬಯಸಿ. ಒದವಿರ್ಪುದು=ಸಂಘಟಿಸಿರುವುದು.

೬೮. ಅಡರಿ=ಹತ್ತಿ. ಇನ್ನೇವೆಂ=ಇನ್ನೇನ ಮಾಡಲಿ.

೬೯. ಒರಟ್ಟತನ=ಒರಟುತನ=ಅವಿವೇಕ. ಮುಟ್ಟುಗೋಳು=ರಾಜಾಪಹಾರ. ಹಮ್ಮಳಿಸಿ=ದುಃಖಿಸಿ. ಒದವು=ಪ್ರಾಪ್ತಿ.

೭೦. ಸಿತಗಂ=ಪೋಕರಿ, ಪುಂಡ.

೭೧. ತರಿಯದಿರದು=ಕತ್ತರಿಸದೆ ಬಿಡದು. ಕಾವು=ಕೊಡಲಿಯ ಕಾವು.

೭೨. ವಿಡ್ಡಿಯಂ ಮಾಡಿ=ವಿರೋಧವನ್ನು ಮಾಡಿ. ಕೆಕ್ಕಳಂಗೆರಳಿ=ಬಹಳವಾಗಿ ಕೋಪಗೊಂಡು. ಓಸರಂಮಾಡದೆ=ಉದಾಸೀನಮಾಡದೆ.

೭೪. ಅತಿಗಳೆಯಂ=ಅತಿರೇಕ. ಆರಯ್ಯದೆ=ವಿಚಾರಿಸದೆ.

೭೫. ಜಡಿಯುತ=ಝಳಪಿಸುತ್ತ. ಮರವಾನಸರತೆರದಿ ಕೀಲಣಂಗೆಯ್ಯಲ್=ಮರದಿಂದ ಮಾಡಿದ ಮನುಷ್ಯರ ಬೊಂಬೆಗಳಂತೆ ನಿಶ್ಚೇತನರಾಗಿ ಮಾಡಲು.

೭೬. ನಡೆತರ್ಪ=ಬರುವ. ತಳತ್ತಳಿಸೆ=ಥಳಥಳನೆ ಹೊಳೆಯಲು.

೭೭. ಲಗ್ಗ=ತಪ್ಪು.

೭೯. ನೆರವಳಿಗೆ=ಬೆಂಬಲ, ಸಹಾಯ. ತವಕದಿಂದ=ಭರದಿಂದ.

೮೧. ಪರಿಪಟ್ಟುದು=ಹರಿದುಹೋಯಿತು, ಪರಿಹಾರವಾಯ್ತು. ಅಟಮಟ=ಮೋಸ. ಸಂಗಡಂ=ಸಹವಾಸ, ಜೋಕೆ.

೮೫. ತಡವು=ವಿಳಂಬನ. ಮೂಡಗಡೆ=ಪೂರ್ವದಿಕ್ಕಿನಲ್ಲಿ. ಮುನ್ನೇಸರು=ಬಾಲಸೂರ್ಯ. ಒಗೆ=ಮೂಡು, ಉದಯಿಸು. ಗನ್ನಗಾತಿ=ಮೋಸಗಾತಿ. ಗಿಡಿಯಿಸಿ=ತುತ್ತುಗೊಳಿಸಿ. ಬೊಕ್ಕಣ=ಚೀಲ? ಮನ್ನಣೆ=ಮರ್ಯಾದೆ.

೮೬. ಕಾರಕಾಲದ ಕಂಧರದ ನುಣ್ಚಾರಕ್ಕೆ=ವರ್ಷಾಕಾಲದ ಮೇಘದ ಗಂಭೀರಧ್ವನಿಗೆ.

---

# ಹನ್ನೆರಡನೆಯ ಸಂಧಿ.

೧. ಕಾದಲೆ=ವಲ್ಲಭೆ. ಕಾವಳ=ನೆಳಲು. ಚೋದಿಗಂಬಟ್ಟು=ಆಶ್ಚರ್ಯಪಟ್ಟು. ಹಿಪ್ಪರಿಕೆ=

೨. ಸಾರುವಂತೆ=ಪ್ರಕಟಿಸುವಂತೆ.

೪. ಉಲುಹು=ಘೋಷ, ಶಬ್ದ. ಎಲ್ಲೆಡೆಯು=ಎಲ್ಲಾ ಕಡೆಯು. ಮೊಳಗುವ=ಬಾಜಿಸುವ. ಗಳಪು=ಬಹಳವಾಗಿ ಭಾಷಿಸುವ. ಬಣ್ಣಸರಗಳ್=ವರ್ಣಸ್ವರಗಳು. ಪೊಳಲ್= ಪಟ್ಟಣ.

೫. ಕಾರು=ವಮನಮಾಡು, ಓಕರಿಸು. ಕಜ್ಜಳ=ಕಪ್ಪು. ಸೊಡರೋಳಿ=ದೀಪಾವಳಿ.

೬. ಅವರಿಸಿದ=ಬಳಸಿದ.

೮. ನೆರೆತೀವಿ=ಚೆನ್ನಾಗಿ ತುಂಬಿ. ಹೆಜ್ಜೊಡರೋ=ದೊಡ್ಡ ದೀಪವೋ.

೯. ಬಿಸುಡು=ಭಾರ, ತಲೆನೋವು. ಒಪ್ಪದಿಂ=ಅಂದದಿಂದ, ಸೊಗಸಿಂದ. ಚಪ್ಪರಿಸು= ತಟ್ಟು, ಹೊಡೆ. ನೆಪ್ಪು=ನೆನಪು. ಉಪ್ಪರಿಸು=ಮೇಲಕ್ಕೆ ಹಾರು. ನೆಗೆ=ಹಾರು.

೧೦. ಉಪ್ಪವಡಿಸು=( ಹಾಸಿಗೆಯಿಂದ ) ಏಳು. ಒಪ್ಪಮಂ=ಸೌಂದರ್ಯವನ್ನು.

೧೧. ಲಂಡೆ=ನೀಚ ಸ್ತ್ರೀ.

೧೨. ಪೊಡವಿ=ಪೃಥ್ವಿ, ಭೂಮಿ. ಕಡುಸಲುಗೆವಂತ=ಬಹಳ ಸ್ನೇಹವುಳ್ಳವನು. ಮೊಗ ಗೆಡಿಸು=ಮಾನಭಂಗಮಾಡು.

೧೩. ಏನುಸಲ=ಏನುಕಾರಣ. ತರಹರದಿಂ=ತೀವ್ರದಿಂದ. ಅನುಕರಿಸಿ=ಅನುಮತಿಸಿ, ಒಪ್ಪಿಕೊಂಡು.

೧೬. ದುರುದುಂಬಿತನ=ದುಷ್ಟತನ. ಏರಿಂ=ಘಾಯು.

೨೦. ಹೆಡ್ಡಯಿಸಿ=ತಿರಸ್ಕರಿಸಿ, ಕೊಕ್ಕರಿಸಿ.

೨೧. ನೆರೆ ಹೆಡ್ಡರಂತೆ=ಚೆನ್ನಾಗಿ ದಡ್ಡರಂತೆ. ಉರುವ=ಸಾಮರ್ಥ್ಯವುಳ್ಳ.

೨೨. ಐಸಿರಿವಂತರ=ಐಶ್ವರ್ಯವಂತರ. ಅಗ್ಗಳ=ಶ್ರೇಷ್ಠ.

೨೩. ಅಟುಳಿಕತನ=ಅಲ್ಪತನ, ಅಲ್ಪ ಬುದ್ಧಿ. ತೊಳಲ್ವ=ಸುತ್ತಿತಿರುಗುವ. ನಿರ್ದಾಡಿಸು ವ=ಹೋಗಲಾಡಿಸುವ. ಪಾಟಗೆಟ್ಟು=ಕ್ರಮವು ತಪ್ಪಿ.

೨೪. ನೆರವಿ=ಗುಂಪು, ಸಮೂಹ. ಉಳ್ಕು=ದೀಪ್ತಿ, ಕೊಳ್ಳಿ. ಶಬದೊಡಿಗೆ=ಹೆಣಕ್ಕೆ ಮಾಡಿದ ಅಲಂಕಾರ.

೨೬. ಡಂಭಕದ ಭಕ್ತಿ=ಹುರುಳಿಲ್ಲದ ಭಕ್ತಿ. ಬಂದುಗೆ=ಬಂದೂಕ.

೨೭. ಚೊಕ್ಕಳಿಕೆ=ಸೌಂದರ್ಯ. ಲೆಕ್ಕಿಸು=ಲೆಕ್ಕವಿಡು, ಗಣಿಯಿಸು.

೨೯. ನೆಲೆಗೊಂಡ=ಸ್ಥಿರವಾಗಿ ನೆಲಸಿದ. ಅಲಸಿ=ಅಸಡ್ಡೆಮಾಡಿ.

೩೦. ಮನ್ನೆಯರು=ಮಾನ್ಯರು, ಘನವಂತರು. ಒಡ್ಡೋಲಗ=ಮಹಾಸಭೆ.

೩೧. ಕೆಯ್ಗೆಯ್ದ=ಅಲಂಕರಿಸಿದ. ಎಡ್ಡಮಾದುದು=ಚೆಲ್ವಾಯ್ತು, ರಮಣೀಯವಾಯಿತು. ಬಳಗ=ಗುಂಪು, ಸಮುದಾಯ.

೩೨. ಕಂಬಿಯುವರು=ದಂಡಧರರು. ಪೊಗಳ್ತೆ=ಸ್ತೋತ್ರ. ಉಗ್ಘಡಣೆ=ಅಬ್ಬರ. ಅಕ್ಕರಿಗರ್=ವಿದ್ಯಾವಂತರು, ಪಂಡಿತರು. ಉಲಿ=ಶಬ್ದ.

೩೩. ಇರಿವ=ಶತ್ರುಗಳನ್ನು ಸಂಹಾರಮಾಡುವ. ಮೆರೆವ=ಸದ್ಗುಣಗಳನ್ನು ಪ್ರಕಟಿಸುವ. ಹರೆಯದ=ಪ್ರಾಯದ. ಬಲುಭೂತಹೊಡೆದವರಂತೆ=ಮಹಾ ಪಿಶಾಚಗ್ರಸ್ತರಂತೆ.

೩೪. ಪಿಂತೆ=ಪೂರ್ವಕಾಲದಲ್ಲಿ. ಪೀಳಿಗೆ=ವಂಶ. ಅಂತರಿಸದೇ=ನಿಲ್ಲದೇ. ಮೀರುವುದು=ದಾಟುವುದು, ಅತಿಕ್ರಮಿಸುವುದು.

೩೫. ಆಂಪೆನೆಂದು=ಆನುವೆನೆಂದು, ಧರಿಯಿಸುವೆನೆಂದು.

> ಕಿರಿಯಂ ಮುತ್ತಂ ಧನದಂ ।
> ಬರುವಂ ತೊರೆದಂ ಗೃಹಸ್ಥನೆನ್ನದೆ ಮುಂಪಿ ॥
> ಟ್ಟರಸಿ ಕೊಲುತಿರ್ಪ್ಪ ಜವನೆಂ ।
> ಬರಿಕೆಯ ಪಗೆವಂಗದೆಂತು ಪಂಗಿಗನಪ್ಪೋ ॥ ೧ ॥

೩೬. ನಾನಾವಿಧದಿಂದೊಡಂಬಡಿಸಿ—ಇಂತಹ ಜ್ಞಾನಿಯಾದ ಉದಿತೋದಯ ಮಹಾರಾಯನ ಮಗ ವಿಕ್ರಮೋದಯನೂ ಸಮ್ಯಕ್ತ್ವಗುಣಮಣಿಯಾಗಿಯೇ ಇದ್ದಿರಬೇಕು. ಅವನಿಗೆ ಮಾತ್ರ ಈ ಸಂಸಾರವು ಉಪಾದೇಯವೆಂದು ತೋರಿರಲಾರದು. ಅವನೂ ತಪೋಮಾರ್ಗವನ್ನು ಹಿಡಿಯಲು ಬಯಸಿದರೂ ರಾಜಕಾರ್ಯಕ್ಕೆ ವಿರೋಧವಾಗಬಾರದೆಂದು ಅವನನ್ನು ನಾನಾವಿಧದಿಂದ ಒಡಂಬಡಿಸಬೇಕಾಯ್ತು.

೩೭. ಮರುವಗಲ್=ಮರುದಿನ. ಮನೆವಾರ್ತೆ = ಗೃಹಕೃತ್ಯ.

೩೮. ಅರಿಕೆಯ + ಅರಮಕ್ಕಳ್ + ಐನೂರ್ವರ್ = ಪ್ರಸಿದ್ಧರಾದ ರಾಜಕುಮಾರರು ಐನೂರುಮಂದಿ ಎರಡುತೆರದ ಪರಿಗ್ರಹಂಗಳಂ=ಬಾಹ್ಯಾಭ್ಯಂತರ ಪರಿಗ್ರಹಗಳನ್ನು ತ್ಯಜಿಸಿದರು. ಕರಿಗೊಂಡು=ಸುಟ್ಟು, ಕರಿಕುಮಾಡಿ. ನಮೋಸ್ತುಗಳ್=ಸವಣರು; ಜಿನಮುನಿಗಳು. ಎರಗಿ=ನಮಸ್ಕರಿಸಿ. ಎರಕ=ಪ್ರೀತಿ. ನಾಡೆರೆಯಂ=ದೇಶಾಧಿಪತಿ.

೩೯. ಒಸೆದು=ಪ್ರೀತಿಸಿ, ಮೆಚ್ಚಿ.

೪೦. ಚೋದಿಗ=ಚೋದ್ಯ=ಆಶ್ಚರ್ಯ. ಹದಿನಾರನೆಯ ಸ್ವರ್ಗ=ಅಚ್ಯುತಕಲ್ಪ.

೪೧. ವೀರೇಶ್ವರನ=ವೀರವರ್ಧಮಾನಸ್ವಾಮಿಯ.

೪೨. ಅರಗುಲಿ=ಪಾತಕಿ, ಧರ್ಮವಿಚ್ಛೇದಿ. ಜವ=ಯಮ. ಮರುಹುಟ್ಟು=ಪುನರ್ಭವ, ಪುನರ್ಜನ್ಮವೆತ್ತಿ. ಪರವಣಿಗೆ=ಮೆರೆವಣಿಗೆ (ಅಪಮಾನದ ಮೆರೆವಣಿಗೆ). ಸಂಸಾರವೆಂಬ ಅಡವಿಯಲ್ಲಿ ಮರುಹುಟ್ಟೆಂಬ ಆನೆಯ ಕಾಲ್ಗೆ ಕಟ್ಟುಬಿದ್ದು ಸಂಚರಿಸುತ್ತ ನಡೆವುದೇ ಈ ಪರವಣಿಗೆ. ಬೇಸರಿಕೆಗೆಸಲಂ=ಬೇಸರವನ್ನು ತಳೆಯಬೇಕೆಂಬ ಬಗೆಯಿಂದ ಬರೆದುದಲ್ಲ.

---

# ಜೈನಧರ್ಮದ ಗ್ರಂಥಗಳು

ಶ್ರೀಶಾಸ್ತ್ರಸಾರಸಮುಚ್ಚಯದ ಟೀಕು... ... ... ... ೨॥ ರೂ.
ಶ್ರೀಭಕ್ತಾಮರಸ್ತೋತ್ರವೃತ್ತಿಸಾರಸಮುಚ್ಚಯ ... ... ... ೧ ,,
ಶ್ರೀಪದ್ಮಾವತಿಯ ಮಹಾತ್ಮ್ಯೆ ಅಥವಾ ಜಿನದತ್ತರಾಯನ ಚರಿತ್ರವು. ... ೧ ,,
ಶ್ರೀವಸುದಿನಂದಿ ಶ್ರಾವಕಾಚಾರವು... ... ... ... ೧ ,,
ಬಿಜ್ಜಣರಾಯನ ಪುರಾಣ ... ... ... ... ೧ ,,
ದಶಲಕ್ಷಣಾದಿ ಪೂಜಾಪಾಠ ... ... ... ... ೧ ,,
ಶೋಡಷಕಾರಣಭಾವನಾವರ್ಣನೆ... ... ... ... ೮ ಆಣೆ
ಪ್ರಶ್ನೋತ್ತರಮಾಣಿಕ್ಯಮಾಲಾ ... ... ... ... ೬ ,,
ಶ್ರೀಸಮಂತಭದ್ರಸ್ವಾಮಿಕೃತ ರತಕರಂಡಶ್ರಾವಕಾಚಾರವು ... ... ೫ ,,
ಶ್ರೀಚಾರುದತ್ತಶ್ರೇಷ್ಠಿಯ ಚರಿತ್ರವು... ... ... ... ೪ ,,
ಪೂಜ್ಯಪಾದಸ್ವಾಮಿಕೃತ ಉಪಾಸಕಾಚಾರವು ... ... ... ೩ ,,
ಶ್ರೀಪದ್ಮನಂದಿಸ್ವಾಮಿಕೃತ ಶ್ರಾವಕಾಚಾರವು ... ... ... ೨ ,,
ಅಕಲಂಕಸ್ತೋತ್ರ ಹಾಗು ಚರಿತ್ರೆ... ... ... ... ೨ ,,
ಶ್ರೀಪಾಲಚರಿತ್ರವು ... ... ... ... ... ೪ ಆಣೆ.
ದ್ರವ್ಯಸಂಗ್ರಹ ... ... ... ... ... ೩ ,,
ಆದಿನಾಥಸ್ತೋತ್ರ ... ... ... ... ... ೨ ,,
ಚಿನ್ಮಯಚಿಂತಾಮಣಿ ... ... ... ... ೬ ಪೈ.
ಭಕ್ತಾಮರಸ್ತೋತ್ರವು ... ... ... ... ೬ ,,
ದಶಲಕ್ಷಣಧರ್ಮ ... ... ... ... ... ೪ ಆ.
ಮೃತ್ಯುಮಹೋತ್ಸವ ... ... ... ... ೧ ,,
ಸತ್ಯವೃತ ... ... ... ... ... ೬ ಪೈ.
ಅಹಿಂಸೆ ... ... ... ... ... ೧ ಆ.
ಬಾಲಕರನ್ನು ತಿದ್ದುವಿಕೆ ... ... ... ... ೧ ,,

## ಹೊಸ ಪುಸ್ತಕಗಳು.

ಜೈನಸಿದ್ಧಾಂತಪ್ರವೇಶಿಕಾ ... ... ... ... ೧೨ ,,
ಭಟ್ಟಾರಕಚರ್ಚೆ ... ... ... ... ೨ ,,
ಸತ್ಯಪರೀಕ್ಷೆ ಅಥವಾ ಸೀತೆಯ ಆತ್ಮಿಕ ಬಲ. ... ... ... ೧॥,,
ಜೈನಧರ್ಮಪ್ರವೇಶ ... ... ... ... ... ೮ ,,
ಕಥಾಮಂಜರಿ ... ... ... ... ... ೬ ,,

ಕ್ರಯದ ಹೊರ್ತು ವಿ. ಪಿ. ಚಾರ್ಜು ಬೇರೆ ಬೀಳುವದು.

**ಪತ್ತೆ—'ಶ್ರೀಮಹಾವೀರ, ಮುದ್ರಣಾಲಯ ಬೆಳಗಾಂವಿ.**